

# ಜನಮುಖಿ ಸರ್ಕಾರ ಜನಪರ ಯೋಜನೆಗಳು





ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು




ಸಾಧನೆಯ ನಾಲ್ಕು ವರ್ಷಗಳು

"ನಾಡ ಜನತೆಯ ಬೆಂಬಲದೊಂದಿಗೆ ಜಗಜ್ಯೋತಿ ಶ್ರೀ ಬಸವೇಶ್ವರರ ಜನ್ಮದಿನದಂದು ಅಧಿಕಾರ ಸ್ವೀಕರಿಸಿದ ಶ್ರೀ ಸಿದ್ದರಾಮಯ್ಯನವರ ನಾಯಕತ್ವದ ಸರ್ಕಾರಕ್ಕೆ ಈಗ ಯಶಸ್ವಿ ನಾಲ್ಕು ವರ್ಷಗಳ ಸಂಭ್ರಮ. ಸ್ವಚ್ಛ, ಪಾರದರ್ಶಕ, ಜನಪರ ಆಡಳಿತ ನೀಡುತ್ತಿರುವ ಹೆಮ್ಮೆ. ಚುನಾವಣೆಗೆ ಮುಂಚೆ ಜನತೆಗೆ ನೀಡಿದ್ದ ಬಹುತೇಕ ಭರವಸೆಗಳನ್ನು ಈಡೇರಿಸಿ ನುಡಿದಂತೆ ನಡೆಯುತ್ತಿರುವ ಹೆಗ್ಗಳಿಕೆ. ಇಡೀ ದೇಶಕ್ಕೆ ಮಾದರಿಯಾದ ಹಲವಾರು ವಿನೂತನ ಯೋಜನೆಗಳನ್ನು ರೂಪಿಸಿ **ರಾಷ್ಟ್ರದಲ್ಲಿಯೇ** ನಂ. 1 ರಾಜ್ಯ ಎಂಬ ಗೌರವಕ್ಕೆ ಪಾತ್ರವಾಗಿರುವ ಹಿರಿಮೆ."

## ಐದನೇ ವರ್ಷದೆಡೆಗೆ ಭರವಸೆಯ ನಡಿಗೆ...

### ಕರ್ನಾಟಕ ನಂಬರ್ 1

ಬಂಡವಾಳ ಹೂಡಿಕೆ, ಸುಗಮ ಸಾರಿಗೆ,
ಗ್ರಾಮೀಣ ಕುಡಿಯುವ ನೀರು, ಸಾಮಾಜಿಕ ಭದ್ರತೆ, ಇತ್ಯಾದಿ
ಹಲವು ಕ್ಷೇತ್ರಗಳಲ್ಲಿ ಕರ್ನಾಟಕ ರಾಷ್ಟ್ರದಲ್ಲಿಯೇ ನಂಬರ್ 1

### ಆರೋಗ್ಯ ಭಾಗ್ಯ

ಎಲ್ಲರಿಗೂ ಆರೋಗ್ಯ
ಎಲ್ಲೆಡೆಗೂ ಆರೋಗ್ಯ

ಸುಮಾರು 3.5 ಕೋಟಿ ಜನರಿಗೆ
ಆರೋಗ್ಯ ಸೇವೆ




9 ಲಕ್ಷ ಫಲಾನುಭವಿಗಳು

### ಸಮಾಜಕಲ್ಯಾಣ-ಪ.ಜಾ/ಪ.ಪಂ

ನೊಂದವರಿಗೆ ನೆರವು

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಜನಸಂಖ್ಯೆಗೆ ಅನುಗುಣವಾಗಿ
ಒಟ್ಟು ಅನುದಾನದಲ್ಲಿ ಶೇಕಡ 24.1ರಷ್ಟು ಅನುದಾನ ಮೀಸಲು.




42.3 ಕಿ.ಮೀ ಉದ್ದದ ನಮ್ಮ ಮೆಟ್ರೋ ಒಂದನೇ ಹಂತದ
ಕಾಮಗಾರಿ ಪೂರ್ಣ. ಬೆಂಗಳೂರು ಜನತೆಯ ಸುಗಮ
ಸಾರಿಗೆ ಕನಸು - ನನಸು

### ಹೈದರಾಬಾದ್ ಕರ್ನಾಟಕ

ಪ್ರದೇಶಾಭಿವೃದ್ಧಿ

ಈ ಪ್ರದೇಶದ ಸರ್ವಾಂಗೀಣ ಅಭಿವೃದ್ಧಿಗಾಗಿ
ರೂ.2503 ಕೋಟಿ ವೆಚ್ಚ, ಪ್ರಸಕ್ತ ವರ್ಷದಲ್ಲಿ
1500ಕೋಟಿ ರೂ.ಗಳ ಅನುದಾನ

### ಅನ್ನಭಾಗ್ಯ

ಹಸಿವು ಮುಕ್ತ ಕರ್ನಾಟಕ

3.5 ಕೋಟಿ ಬಡವರಿಗೆ ಉಚಿತ ಆಹಾರ ಧಾನ್ಯ
ರಿಯಾಯಿತಿ ದರದಲ್ಲಿ ಬೇಳೆ, ಉಪ್ಪು, ತಾಳೆ ಎಣ್ಣೆ

### ವಸತಿ ಭಾಗ್ಯ

ಗುಡಿಸಲು ಮುಕ್ತ ಕರ್ನಾಟಕ

11.5 ಲಕ್ಷ ಮನೆಗಳ ನಿರ್ಮಾಣ
11 ಲಕ್ಷ ಜನರ 2488 ಕೋಟಿ ರೂಗಳ
ಆಶ್ರಯ ಮನೆಸಾಲ + ಬಡ್ಡಿ ಮನ್ನಾ

### ಶುದ್ಧ ನೀರು

ಅಲ್ಪ ದರದಲ್ಲಿ ಶುದ್ಧ ಕುಡಿಯುವ ನೀರು

9,300 ಶುದ್ಧ ಕುಡಿಯುವ ನೀರಿನ ಘಟಕಗಳ ನಿರ್ಮಾಣ

### ಜಲ ಸಿರಿ

ನೀರಾವರಿಗಾಗಿ 50,000 ಕೋಟಿ ವೆಚ್ಚ
ಹೊಸದಾಗಿ 6.2 ಲಕ್ಷ ಎಕರೆಗೆ ನೀರಾವರಿ ಸೌಲಭ್ಯ

### ಕ್ಷೀರಧಾರೆ

ಹೈನುಗಾರಿಕೆಗೆ ಉತ್ತೇಜನ

ಪ್ರತಿ ಲೀಟರ್ ಹಾಲಿಗೆ 2ರೂ. ಗಳಿಂದ
5 ರೂಗಳಿಗೆ ಪ್ರೋತ್ಸಾಹ ಧನ ಹೆಚ್ಚಳ

### ಕೃಷಿಭಾಗ್ಯ

ಒಣಭೂಮಿ ಬೇಸಾಯಕ್ಕೆ ಒತ್ತಾಸೆ.

1.2 ಲಕ್ಷ ಕೃಷಿ ಹೊಂಡಗಳ ನಿರ್ಮಾಣ

### ವಿದ್ಯಾಸಿರಿ

ಓದುವ ಕನಸಿಗೆ ನೆರವು

2.7ಲಕ್ಷ ಕಾಲೇಜು ವಿದ್ಯಾರ್ಥಿಗಳಿಗೆ
ಊಟ ವಸತಿಗೆ ಆರ್ಥಿಕ ನೆರವು




ಆರೋಗ್ಯಕರ ಮಕ್ಕಳು

ಒಂದು ಕೋಟಿಗೂ ಅಧಿಕ ಅಂಗನವಾಡಿ
ಮತ್ತು ಶಾಲಾ ಮಕ್ಕಳಿಗೆ ಉಚಿತ ಬಿಸಿ ಹಾಲು

### ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಅಭಿವೃದ್ಧಿ

20.5 ಲಕ್ಷ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ
1106 ಕೋಟಿ ಶುಲ್ಕ ಮರು ಪಾವತಿ
50 ಲಕ್ಷ ಫಲಾನುಭವಿಗಳು
3850 ಕೋಟಿ ರೂಗಳ ಅನುದಾನ



ಪ್ರಕಟಣೆ : ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

"ನಮ್ಮ ವೈವಿಧ್ಯಮಯ ಸಂಸ್ಕೃತಿಯ ಶ್ರೇಷ್ಠ ಪರಂಪರೆಯನ್ನು ಗೌರವಿಸುವುದು ಮತ್ತು ರಕ್ಷಿಸುವುದು".
– ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ

ಕರ್ನಾಟಕ ವಾರ್ತೆ

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ಸುನಿಲ್ ಮಿಶ್ರಾ,
ವಿ. ಗೋಪಾಲ್, ಜಿ. ಎಂ. ಬೊಮ್ಮಳ್ಳಿ, ಪಿ. ಜಿ. ನಾರಾಯಣ
**ಮುಖಪುಟ :** ವಿದುರಾಶ್ವತ್ಥ – ಸ್ವತಂತ್ರ ಹೋರಾಟದ ಸ್ಮಾರಕ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಗಳು

ಅಲ್ಪಸಂಖ್ಯಾತರನ್ನು ಬೆದರಿಸಿ ಅಂಕೆಯಲ್ಲಿರಿಸಿಕೊಳ್ಳುವುದು ಕೇಂದ್ರದಲ್ಲಿ ಅಧಿಕಾರಗ್ರಹಣದ ನಂತರ ಭಾಜಪ ಅನುಸರಿಸುತ್ತಿರುವ ನೀತಿಗಳಲ್ಲಿ ಒಂದು. ಅದಕ್ಕಾಗಿ ಸಂಘಪರಿವಾರದ ಸಂಸ್ಥೆಗಳು ಅನುಸರಿಸುತ್ತಿರುವ ಹಲವು ವಿಧಾನಗಳಲ್ಲಿ ಒಂದು ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಅಲ್ಪಸಂಖ್ಯಾತರು ಮತ್ತು ದಲಿತರ ಮೇಲೆ ಕ್ರಮಬದ್ಧವಾದ ರೀತಿಯಲ್ಲಿ ಹಲ್ಲೆ ನಡೆಯುತ್ತಲೇ ಇರುವುದು. ಗೋರಕ್ಷಣೆ, ನೈತಿಕ ಪೊಲೀಸುಗಿರಿ, ಕಾನೂನುಬಾಹಿರವಾಗಿ ಗುಂಪುಕಟ್ಟಿಗೊಂಡು ವ್ಯಕ್ತಿಗಳ ಮೇಲೆ ಗೂಂಡಾಗಿರಿ ನಡೆಸಿ ಹತ್ಯೆ ಇವೆಲ್ಲ ಪ್ರಕರಣಗಳು ಈಗ ಮಾಮೂಲಿಯಾಗುತ್ತಿವೆ. ಕರ್ನಾಟಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರಯೋಗಶಾಲೆಯಾಗಿ ಮಾಡಿಕೊಂಡಿರುವ ಹಿಂದುತ್ವವಾದಿಗಳು ದೇಶದ ನಾನಾ ಕಡೆಗಳಲ್ಲಿ ಅಂತಹುದೇ ದಾಳಿಗಳನ್ನು ನಡೆಸುತ್ತಿದ್ದಾರೆ. ಉತ್ತರಪ್ರದೇಶ, ರಾಜಸ್ಥಾನ, ಮಧ್ಯಪ್ರದೇಶ ಮೊದಲಾದ ಭಾಜಪ ಆಡಳಿತದಲ್ಲಿರುವ ರಾಜ್ಯಗಳಲ್ಲಿ ಸಂಘಪರಿವಾರದವರು ಎಲ್ಲೆ ಮೀರಿ ದಾಂಧಲೆಗಳನ್ನು ನಡೆಸುತ್ತಿದ್ದಾರೆ. ಇತ್ತೀಚೆಗೆ ದೆಹಲಿಯ ಸದರ್ ಬಜಾರಿಗೆ ಹರಿಯಾಣದಿಂದ ಬಂದಿದ್ದ ಯುವಕ ಜುನ್ಯೆದ ರೈಲಿನಲ್ಲಿ ಪ್ರಯಾಣಿಸುತ್ತಿದ್ದಾಗ ಒದೆ ತಿಂದು ಅಸುನೀಗಿದ. ಅವನು ಧರಿಸಿದ್ದ ಮುಸ್ಲಿಮ್ ಟೋಪಿಯೇ ಅವನಿಗೆ ಮುಳುವಾಯಿತು. ಒಂದು ಅಂಕಿಅಂಶದ ಪ್ರಕಾರ ೨೦೧೪ರಲ್ಲಿ ಕೇಂದ್ರದಲ್ಲಿ ಮೋದಿ ಸರಕಾರ ಅಸ್ತಿತ್ವಕ್ಕೆ ಬಂದಮೇಲೆ ಈವರೆಗೆ ಕನಿಷ್ಠ ೩೨ ಪ್ರಕರಣಗಳು ದಾಖಲಾಗಿದ್ದು ಸತ್ತವರೆಲ್ಲ ಮುಸಲ್ಮಾನರೇ ಆಗಿದ್ದಾರೆ. ೨೦೧೬ರಲ್ಲಿ ಜನಜಂಗುಳಿ ಜಜ್ಜಿಕೊಂದ ಪ್ರಕರಣ, ಹಾಗೆಯೇ ದನದ ವ್ಯಾಪಾರ ಮಾಡುತ್ತಿದ್ದಾನೆಂದು ಸಂಶಯದ ಮೇಲೆ ಮಹಮ್ಮದ್ ಮಜ್ಲೂಮ್ ಹಾಗೂ ಅವನ ಹನ್ನೆರಡು ವರ್ಷದ ಮಗನನ್ನು ನೇಣುಹಾಕಿದ್ದು, ದನದ ಮಾಂಸ ತಿನ್ನುತ್ತಿದ್ದರೆಂದು ಮುಸ್ಲಿಮ್ ಯುವತಿಯರ ಮೇಲೆ ಮನೆಗೆ ನುಗ್ಗಿ ಅತ್ಯಾಚಾರ ನಡೆಸಿದ್ದು ಇವೆಲ್ಲ ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ವರದಿಯಾಗಿವೆ. ಆದರೂ ಸಂಬಂಧಪಟ್ಟ ಸರಕಾರಗಳು ದಿಟ್ಟವಾದ ಕ್ರಮ ಕೈಗೊಳ್ಳದಿರುವುದೀಗ ಆತಂಕಕಾರಿ. ಕೇಂದ್ರ ಗೃಹ ಇಲಾಖೆಯ ಅಂಕಿಅಂಶಗಳ ಪ್ರಕಾರ ೨೦೧೫ ಮತ್ತು ೨೦೧೬ರಲ್ಲಿ ದೇಶಾದ್ಯಂತ ವರದಿಯಾಗಿರುವ ಕೋಮುಗಲಭೆಗಳ ಸಂಖ್ಯೆ ೧೪೫೪. ಈ ಪ್ರಕರಣಗಳಲ್ಲಿ ಮಡಿದವರು ೧೮೩ ಮಂದಿ, ಗಾಯಗೊಂಡವರು ೧೪೮೫ ಮಂದಿ. ಈ ಅಂಕಿಅಂಶಗಳು ರಾಜ್ಯ ಸರಕಾರಗಳು ಕೇಂದ್ರಕ್ಕೆ ಸಲ್ಲಿಸಿರುವ ವರದಿಗಳ ಮೇಲೆ ಆಧಾರಿತವಾದದ್ದು. ಕಾನೂನು ಪಾಲನೆಯಲ್ಲಿ ರಾಜಕೀಯ ಹಸ್ತಕ್ಷೇಪ ಇಲ್ಲದಿದ್ದರೆ ಪೊಲೀಸು ವ್ಯವಸ್ಥೆ ಅಪರಾಧಿಗಳನ್ನು ಪತ್ತೆಹಚ್ಚಿ, ಶಿಕ್ಷೆಗೆ ಗುರಿಪಡಿಸೀತು. ಆದರೆ ದೇಶದಲ್ಲಿ ರಾಜಕಾರಣವೇ ಮೇಲುಗೈ ಪಡೆದಿರುವುದರಿಂದ ಅಮಾಯಕರ ಕಗ್ಗೊಲೆ.

ಜನಪ್ರಿಯ ದಿನಪತ್ರಿಕೆಯ ಅಂಕಣಕಾರರೊಬ್ಬರ ಪ್ರಕಾರ ನಿಘಂಟು ಅರ್ಥದಲ್ಲಿ ರಾಜಕೀಯ ಉದ್ದೇಶಗಳಿಗಾಗಿ ನಾಗರಿಕರನ್ನು ಕಾನೂನುಬಾಹಿರವಾಗಿ ಹಿಂಸಿಸುವುದು ಮತ್ತು ಭಯಪಡಿಸುವುದು ಭಯೋತ್ಪಾದನೆ. ಇಂಥ ರಾಜಕೀಯ ಪ್ರೇರಿತ ಭಯೋತ್ಪಾದನೆಯನ್ನು ಚುರುಕಾಗಿ ಮಟ್ಟಹಾಕದೇ ಹೋದರೆ ಇಡೀ ದೇಶ ಹತ್ತಿ ಉರಿದೀತು ಎಂದು ಎಚ್ಚರಿಸಿರುವುದು ಗಮನಾರ್ಹ.

* * *

ಭಾರತದಲ್ಲಿ ಐಟಿ ಉದ್ಯಮ ಪ್ರಾರಂಭವಾದಾಗ ಯುವಜನರಿಗೆ ಹೊಸ ಅವಕಾಶ ತೆರೆಯಿತು. ಕೈತುಂಬ ಸಂಬಳ ನೀಡುವ ಈ ಉದ್ಯಮ ಹೊಸ ಪೀಳಿಗೆಯನ್ನೇ ಹುಟ್ಟುಹಾಕಿತು. ದೆಹಲಿ, ಮುಂಬೈ, ಬೆಂಗಳೂರು, ಪುಣೆ, ಗುರ್‌ಗಾಂವ್, ಚೆನ್ನೈ ಮುಂತಾದ ನಗರಗಳಲ್ಲಿ ಅವತರಿಸಿದ ಈ ಉದ್ಯಮ ಮೂರು–ನಾಲ್ಕು ದಶಕಗಳ ಕಾಲ ಪಾರುಪತ್ಯ ನಡೆಸಿ ಈಗ ಅವನತಿಯ ಹಾದಿಯಲ್ಲಿದೆ. ಅಮೆರಿಕದಲ್ಲಿ ಡೊನಾಲ್ಡ್ ಟ್ರಂಪ್ ಅಧಿಕಾರಕ್ಕೇರಿದ ಮೇಲೆ ಭಾರತದ ಐಟಿ ಉದ್ಯಮದ ಮೇಲೆ ಭಾರಿ ಪರಿಣಾಮ ಉಂಟುಮಾಡಿದೆ. ಮೂಲತಃ ಸೇವಾಕ್ಷೇತ್ರಕ್ಕೆ ಮೀಸಲಾದ ಈ ಉದ್ಯಮ ಭಾರತದಲ್ಲಿ ಬೆಳವಣಿಗೆಯನ್ನೇ ಕಾಣದೆ ಸ್ಥಗಿತತೆಯನ್ನು ಎದುರಿಸುತ್ತಿದೆ ಈಗ.

**(೬ನೇ ಪುಟಕ್ಕೆ )**



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೯ ಸಂಚಿಕೆ–೧ ಆಗಸ್ಟ್ ೨೦೧೭

**■ ಗೌರವ ಸಂಪಾದಕ**

ಜಿ. ರಾಮಕೃಷ್ಣ

**■ ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

**■ ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

**■ ವ್ಯವಸ್ಥಾಪಕ**

ಎ. ರಮೇಶ ಉಡುಪ

**■ ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು – ೫೬೦ ೦೧೦

**■ ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ : ೨೨೧೬೧೯೧೧, ೨೨೧೬೧೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**



# ಸಂಪಾದಕೀಯ

## ಸ್ವಾತಂತ್ರ್ಯ – ೭೦

## ಕಂಪನಿ ಸರಕಾರದಿಂದ ಕಾರ್ಪೊರೇಟ್ ಸರಕಾರದವರೆಗೆ

ನಮ್ಮ ದೇಶದ ಸ್ವಾತಂತ್ರ್ಯದ ಪಯಣ ಎಪ್ಪತ್ತು ವರ್ಷಕ್ಕೆ ತಲುಪಿದೆ. 'ಹೊಸತು' ಓದುಗ ಬಳಗಕ್ಕೆ 'ಹೊಸತು' ಪತ್ರಿಕೆಯ ಪ್ರಕಟನೆಯ ೧೯ನೇ ವರ್ಷದ ಸಂದರ್ಭದಲ್ಲಿ ಸ್ವಾತಂತ್ರ್ಯೋತ್ಸವದ ಶುಭಾಶಯಗಳು.

ಒಂದು ದೇಶ ಸ್ವತಂತ್ರ ಪಡೆದು ಮುಕ್ಕಾಲು ಶತಮಾನದಲ್ಲಿ, ಸ್ವಾತಂತ್ರ್ಯ ಪಡೆದ ಸಂದರ್ಭದಲ್ಲಿ ಕಂಡ ಕನಸುಗಳನ್ನು ನನಸಾಗಿಸಲು ಎಪ್ಪತ್ತು ವರ್ಷ ಕಡಿಮೆಯದೇನಲ್ಲ. ಆ ನಿಟ್ಟಿನಲ್ಲಿ ಭಾರತದ ಪ್ರಜೆಗಳು ಸ್ವಾತಂತ್ರ್ಯದ ಪಯಣದ ಅವಲೋಕನವನ್ನು ಮಾಡಿಕೊಳ್ಳಬೇಕಾದ ಸಂದರ್ಭ ಇದು. ಖಂಡಿತ ಭಾರತ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲದ ಸಿರಿವಂತಿಕೆಯಿಂದ ಜಾಗತಿಕ ನಕ್ಷೆಯಲ್ಲಿ ಮಹತ್ವದ ಸ್ಥಾನ ಗಳಿಸಿದೆ. ಆದರೆ ಈ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲದ ಬಳಕೆ, ಯಾವ ರೀತಿ, ಯಾವ ಮಾದರಿಯಲ್ಲಿ ಯಾರ ಹಿತಾಸಕ್ತಿಗಾಗಿ ಬಳಕೆಯಾಗುತ್ತಿದೆ ಎಂಬುದು ಮುಖ್ಯ. ನಮ್ಮ ಆಡಳಿತ ವರ್ಗ ಆರ್ಥಿಕ ಅಭಿವೃದ್ಧಿ ಹಾಗೂ ಸಾಮಾಜಿಕ ಅಭಿವೃದ್ಧಿಯನ್ನು ಪ್ರಜಾಕೇಂದ್ರಿತವಾಗಿ ನೋಡುತ್ತಿದೆಯೇ ಎಂಬುದು ಸ್ವಾತಂತ್ರ್ಯದ ಪಯಣದ ಏಳು ದಶಕಗಳ ಸಂದರ್ಭದಲ್ಲಿ ವಿಶ್ಲೇಷಣೆಗೆ ಒಳಪಡಬೇಕು. ಈ ಅವಧಿಯಲ್ಲಿ ಸ್ವಾತಂತ್ರ್ಯ ಯಾರ್ಯಾರಿಗೆ ಸಿಕ್ಕಿದೆ ಎನ್ನುವುದರ ಜೊತೆಗೇ ಯಾರಿಗೆ ಎಷ್ಟು ಸಿಕ್ಕಿದೆ ಎಂಬ ಪ್ರಶ್ನೆ ಮಹತ್ವದ್ದು. ಯಾಕೆಂದರೆ ಭಾರತವನ್ನು ಜಾಗತಿಕ ನಕ್ಷೆಯಲ್ಲಿಟ್ಟು ನೋಡಿದಾಗ ಇಡೀ ಭೂಗೋಲ ಪರ್ವಕಾಲದಲ್ಲಿದೆ, ಪ್ರಮುಖವಾದ ಸ್ಥಿತ್ಯಂತರ ಘಟ್ಟದಲ್ಲಿದೆ, ಜಾಗತೀಕರಣದ ಚಕ್ರದಲ್ಲಿ ನಮ್ಮ ದೇಶವೂ ಇದೆ. ಸ್ಥಿತ್ಯಂತರ, ವಿಕಾಸ, ಚಲನೆ ಇವು ಸಹಜ ಮತ್ತು ಸಾಮಾನ್ಯ ಹಾಗೂ ನಿತ್ಯದ ಪ್ರಕ್ರಿಯೆ. ಆದರೆ ಮಾನವ ಸಮಾಜದ ಜೀವನ ವಿಧಾನವನ್ನೇ ಬದಲಿಸುವ ಸ್ಥಿತ್ಯಂತರಗಳನ್ನು ಮಹತ್ವದ ತಿರುವುಗಳೆಂದು ಪರಿಗಣಿಸಬೇಕು. ಕಲ್ಯಾಣ ರಾಜ್ಯದ ಪರಿಕಲ್ಪನೆಯಿಂದ ಆರಂಭವಾದ ಭಾರತದ ಸ್ವಾತಂತ್ರ್ಯದ ಪಯಣ ಇಂದು ಅದೇ ಗುರಿಯನ್ನು ಹೊಂದಿದೆಯೇ ಎಂಬುದು ಪ್ರಮುಖವಾದ ಪ್ರಶ್ನೆ.

'ಮೇಕ್ ಇನ್ ಇಂಡಿಯಾ', 'ಮಿನಿಮಮ್ ಗೌವರ್ನಮೆಂಟ್' (ಕನಿಷ್ಠ ಸರಕಾರ) ಈ ಎರಡು ಘೋಷಣೆಗಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ಸ್ವಾತಂತ್ರ್ಯ ದಿನವನ್ನು ವಿಶ್ಲೇಷಿಸಬೇಕು. ಇವು ಯಾವ ಪಕ್ಷದ ಆಡಳಿತದಲ್ಲಿ ಕೊಡಲಾದ ಘೋಷಣೆ ಎನ್ನುವುದು ಮುಖ್ಯವಲ್ಲ. ತೊಂಭತ್ತರ ದಶಕದಿಂದ ಆರಂಭವಾದ ಉದಾರವಾದಿ ನೀತಿಗಳನ್ನು ಒಪ್ಪಿಕೊಂಡ ನಮ್ಮ ಆಳುವ ವರ್ಗದ ಎಲ್ಲ ಪಕ್ಷಗಳೂ ಅನುಸರಿಸಿದ ಮಾರ್ಗ ಇದು. ಯಾವುದೇ ಒಂದು ಪಕ್ಷವನ್ನು ಟೀಕಿಸಲು, ಹೊಣೆಯಾಗಿಸಲು ಈ ಮಹತ್ವದ ತಿರುವನ್ನು ಉದಾಹರಿಸಬೇಕಿಲ್ಲ. ಸ್ವತಂತ್ರ ಭಾರತದ ಗುರಿಯಾಗಿದ್ದ 'ಕಲ್ಯಾಣ ರಾಜ್ಯ' ಅಥವಾ ಡಾ॥ ಅಂಬೇಡ್ಕರ್ ಅವರು ಬಯಸಿದ, ಕನಸು ಕಂಡ 'ಪ್ರಭುತ್ವ ಸಮಾಜವಾದ' ಇಂದಿನ ಪ್ರಭುತ್ವದ ಆಶಯವಾಗಿ ಉಳಿದಿದೆಯೇ ಎಂಬ ಹಿನ್ನೆಲೆಯಲ್ಲಿ ಇಂದಿನ ಪ್ರಭುತ್ವದ ನಡೆಯನ್ನು ಗಮನಿಸಬೇಕು.

'ಮೇಕ್ ಇನ್ ಇಂಡಿಯಾ' ಮತ್ತು 'ಮಿನಿಮಮ್ ಗೌವರ್ನಮೆಂಟ್' ಇವು ಕೇವಲ ಪದಗುಚ್ಛಗಳಲ್ಲ, ನೀತಿಗಳು. ಪ್ರಭುತ್ವದ ವ್ಯಾಪ್ತಿಯಲ್ಲಿರುವ ಬಹುತೇಕ ವಲಯಗಳನ್ನು ಖಾಸಗಿ 'ಕಂಪನಿ'ಗಳಿಗೆ ವಹಿಸಿಕೊಡುವುದು ಮತ್ತು ಪ್ರಭುತ್ವದ ಆಡಳಿತವನ್ನು ಕನಿಷ್ಠಗೊಳಿಸುವುದು ಏನನ್ನು ಸೂಚಿಸುತ್ತದೆ? ಭಾರತದ ಸ್ವಾತಂತ್ರ್ಯ ಹೋರಾಟದ ನಡೆಯನ್ನು ಗಮನಿಸಿದರೆ ಇದಕ್ಕೆ ಉತ್ತರಗಳು ಸಿಗುತ್ತವೆ. ಇಂದು ಭಾರತಕ್ಕೆ ಬನ್ನಿ, ಬಂಡವಾಳ ಹೂಡಿ, ಎಂದು ಹೇಳುವುದರ ಬದಲಾಗಿ ನಾವು 'ಮೇಕ್ ಇನ್ ಇಂಡಿಯಾ' ಎಂದು ಮೂರು ಶಬ್ದಗಳಲ್ಲಿ ಹೇಳುತ್ತಿದ್ದೇವೆ. ಪ್ರಭುತ್ವದ ಆಡಳಿತದ ವ್ಯಾಪ್ತಿಯನ್ನು 'ಕಂಪನಿ'ಗಳಿಗೆ ವಹಿಸಿಕೊಡುತ್ತಿದ್ದೇವೆ. ಇಂಥ ಒಂದು ಸನ್ನಿವೇಶವನ್ನು ಬ್ರಿಟಿಷರ ಈಸ್ಟ್ ಇಂಡಿಯಾ ಕಂಪನಿ ಒಂದು ಪ್ರಭುತ್ವವನ್ನು ನಡೆಸಿಕೊಂಡ ರೀತಿಯಿಂದ ಉದಾಹರಿಸಬಹುದು. ಎಲ್ಲರಿಗೂ ತಿಳಿದಂತೆ ೧೬೦೦ ಡಿಸೆಂಬರ್ ೩೧ರಂದು ಬ್ರಿಟನ್ನಿನ ರಾಣಿ ಈಸ್ಟ್ ಇಂಡಿಯಾ ಕಂಪನಿಗೆ ಪೂರ್ವ ದೇಶಗಳೊಡನೆ ವ್ಯಾಪಾರ ಮಾಡಲು ರಾಜಸನ್ನದನ್ನು ಕೊಟ್ಟಳು. ಮುಂದೆ ಇಡೀ ಆ ಶತಮಾನ ಈ ಬ್ರಿಟಿಷ್ ಕಂಪನಿ ಭಾರತದಲ್ಲಿ ತನ್ನ ವ್ಯಾಪಾರದ ಏಕಸ್ವಾಮ್ಯಕ್ಕಾಗಿ ಮಾಡಿದ ಕುಕೃತ್ಯಗಳು, ಸ್ಥಳೀಯ ಆಡಳಿತಗಳ ಮೇಲಿನ ದಾಳಿ, ಡಚ್, ಫ್ರೆಂಚ್, ಪೋರ್ಚುಗೀಸ್ ಕಂಪನಿಗಳೊಂದಿಗಿನ ಸಂಘರ್ಷ, ಯುದ್ಧ ಇವೆಲ್ಲ ಇತಿಹಾಸದ ಭಾಗ. ಈಸ್ಟ್ ಇಂಡಿಯಾ ಕಂಪನಿ ತನ್ನನ್ನು ನಿಯಂತ್ರಿಸುವ ಶಕ್ತಿ ಬ್ರಿಟನ್ ಪ್ರಭುತ್ವಕ್ಕೆ ಮಾತ್ರ ಇದೆ ಎಂದು ಹೇಳಿತ್ತು. ಆದರೆ ೧೬೯೩ರಲ್ಲಿ ಬ್ರಿಟನ್ ಸಂಸತ್ತಿನಲ್ಲಿ ಈಸ್ಟ್ ಇಂಡಿಯಾ ಕಂಪನಿಗೆ ನೀಡಿದ ಪೂರ್ವ ದೇಶಗಳೊಂದಿಗಿನ ವ್ಯಾಪಾರದ ಸನ್ನದನ್ನು ರದ್ದು ಮಾಡಿದ್ದರೂ ಕಂಪನಿ ಬ್ರಿಟನ್‌ನ ರಾಜ, ಸಂಸದರಿಗೆ, ಆಡಳಿತಗಾರರಿಗೆ ಲಂಚಕೊಟ್ಟು ತನ್ನ ವ್ಯಾಪಾರವನ್ನು ಮುಂದುವರಿಸಿತ್ತು. ಒಂದು ಕಂಪನಿ ಭ್ರಷ್ಟಾಚಾರದಿಂದ ಒಂದು ಪ್ರಭುತ್ವವನ್ನೇ ನಿಯಂತ್ರಿಸಬಲ್ಲದು ಎಂದು ಅಂದೇ ಈ ಕಂಪನಿ

ಸಾಬೀತುಪಡಿಸಿತ್ತು. ಇನ್ನು ಭಾರತದ ಆಡಳಿತಗಾರರನ್ನು ಈ ಕಂಪನಿ ಬಳಸಿಕೊಂಡ ರೀತಿಗೆ ಪ್ಲಾಸಿಕದನ ಸ್ಪಷ್ಟ ಉದಾಹರಣೆ. ೧೭೫೭ರಲ್ಲಿ ನಡೆದ ಪ್ಲಾಸಿಕದನಕ್ಕೆ ಕಾರಣ ಬಂಗಾಲದ ನವಾಬ ಸಿರಾಜುದ್ದೌಲ ಈ ಬ್ರಿಟಿಷ್ ಕಂಪನಿಗೆ ಮುಕ್ತವಾಗಿ ವ್ಯಾಪಾರ ಮಾಡಲು ಅನುಮತಿ ನೀಡದಿದ್ದುದು. ಯುದ್ಧದಲ್ಲಿ ಸಿರಾಜುದ್ದೌಲ ಬ್ರಿಟಿಷ್ ಕಂಪನಿ ಎದುರು ಸೋತನು. ಈ ಸೋಲಿಗೆ ಪ್ರಮುಖ ಕಾರಣ ಈಸ್ಟ್ ಇಂಡಿಯಾ ಕಂಪನಿಯ ಕರ್ನಲ್ ಕ್ಲೈವ್‌ನ ಸೇನೆಯ ಪ್ರಾಬಲ್ಯ ಕಾರಣವಲ್ಲ. ನವಾಬ ಸಿರಾಜುದ್ದೌಲನ ಆಸ್ಥಾನದ ಮೀರ್ ಜಾಫರ್ ಮತ್ತಿತರೊಂದಿಗೆ ಕ್ಲೈವ್ ಮಾಡಿಕೊಂಡ ದ್ರೋಹದ ಒಪ್ಪಂದ. ಕ್ಲೈವ್ ಗೆದ್ದನಂತರ ಮೀರ್ ಜಾಫರ್‌ನನ್ನು ಅಧಿಕಾರದಲ್ಲಿ ಕೂರಿಸಿ ತನಗೆ ಬೇಕಾದ ರೀತಿಯಲ್ಲಿ ಕಾನೂನು ಮಾಡಿ ಬಂಗಾಲ ಪ್ರದೇಶವನ್ನು ಲೂಟಿ ಮಾಡಿದನು. ಈ ರೀತಿ ಸ್ಥಳೀಯರ ಪ್ರತಿರೋಧವನ್ನು ಸದೆಬಡೆಯಲು ಈಸ್ಟ್ ಇಂಡಿಯಾ ಕಂಪನಿ ದೇಶದುದ್ದಗಲಕ್ಕೂ ದೇಶದ್ರೋಹಿಗಳ ಜೊತೆ ಕೈಜೋಡಿಸಿ ಗೆಲುವು ಪಡೆಯಿತು. ಇದೇ ನೀತಿಯನ್ನು ೧೮೫೭ರ ನಂತರ ನೇರವಾಗಿ ಆಡಳಿತ ಕೈಗೆತ್ತಿಕೊಂಡ ಬ್ರಿಟಿಷ್ ಪ್ರಭುತ್ವದ ಗವರ್ನರ್‌ಗಳು ದೇಶದ ತುಂಬ ಮುಂದುವರಿಸಿದರು. ಪ್ಲಾಸಿಕದನದ ವಿದ್ರೋಹದ ಘಟನೆಯನ್ನು ಬಂಗಾಳಿ ಕವಿ ನಬೀನ್ ಚಂದ್ರಸೇನ್ 'ಭಾರತಕ್ಕೆ ಮಂಕು ಕವಿಸಿದ ಕೊನೆಯಿಲ್ಲದ ಇರುಳು' ಎಂದು ಬರೆದಿದ್ದಾರೆ. ಈ ಕೊನೆಯಿಲ್ಲದ ಇರುಳಿನ ಕತ್ತಲೆ ವಿಶ್ವದ ಕಾರ್ಪೊರೇಟ್ ಕಂಪನಿಗಳ ಪಿತೂರಿಯಿಂದ ವಿಶ್ವದ ಸ್ವತಂತ್ರ, ಅಭಿವೃದ್ಧಿಶೀಲ ದೇಶಗಳ ಮೇಲೆ ಉದಾರೀಕರಣದ ನೀತಿಯ ಹೆಸರಿನಲ್ಲಿ ಕರಾಳ ರೂಪದಲ್ಲಿ ಇಂದು ಆವರಿಸಿಕೊಂಡಿದೆ.

ಬ್ರಿಟಿಷ್, ಡಚ್, ಫ್ರೆಂಚ್, ಪೋರ್ಚುಗೀಸ್ ಸಾಮ್ರಾಜ್ಯಶಾಹಿ ದೇಶಗಳ ಕಂಪನಿಗಳು ಭಾರತದ ಲೂಟಿ ಮಾಡಲು ಅನುಸರಿಸಿದ ಕರಾಳ, ಅಮಾನವೀಯ ನಡೆಗಳನ್ನು ಎದುರಿಸಲು ಭಾರತ ಎಂಬ ಸಮೃದ್ಧ ಉಪಖಂಡದಲ್ಲಿ ನಡೆದ ಹೋರಾಟಗಳೆಷ್ಟು, ತ್ಯಾಗ, ಬಲಿದಾನಗಳೆಷ್ಟು ಎಂಬುದನ್ನು ಇಂದು ಸ್ಮರಿಸಬೇಕಿದೆ. ೧೮೫೭ರ ಬಂಡಾಯ, ಅಸಹಕಾರ ಚಳುವಳಿ, ಚಲೇಜಾವ್ ಚಳುವಳಿ, ಇಂಥ ನೂರಾರು ಸಮರ ಧೀರ ಹೋರಾಟದ ಮೂಲಕ ಪಡೆದ ನಮ್ಮ ಸ್ವಾತಂತ್ರ್ಯಕ್ಕೆ ಈಗ ಎಪ್ಪತ್ತು ವರ್ಷ. ಅಂಥ ಲಕ್ಷಾಂತರ ಜನರ ತ್ಯಾಗ, ಬಲಿದಾನದಿಂದ ಅರಳಿದ ನಮ್ಮ ಪ್ರಜಾಪ್ರಭುತ್ವದ ಪ್ರಭುಗಳು ಇಂದು ಮಾಡುತ್ತಿರುವುದೇನು ? ಅಂದು 'ಚಲೇ ಜಾವ್' ಎಂದು ಅವರು ಪ್ರಾಣ ಕೊಟ್ಟರೆ ಇಂದು 'ಚಲೇ ಆವ್' ಘೋಷಣೆ. ಅದು ಅಭಿವೃದ್ಧಿಯ ಹೆಸರಿನಲ್ಲಿ. ಪ್ಲಾಸಿಕದನದಲ್ಲಿ ಗೆದ್ದು, ಮೀರ್ ಜಾಫರ್‌ನನ್ನು ಅಧಿಕಾರದಲ್ಲಿ ಕೂರಿಸಿ ಕ್ಲೈವ್ ಬಂಗಾಲದಲ್ಲಿ ಮಾಡಿದ ಲೂಟಿ ಹಾಗೂ ಲೂಟಿಗಾಗಿ ಮಾಡಿದ ಕಾನೂನುಗಳಿಗೂ ಇಂದು ನಮ್ಮನ್ನಾಳುವ ಪ್ರಭುಗಳು ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗಾಗಿ ರೂಪಿಸುತ್ತಿರುವ ಕಾನೂನುಗಳಿಗೂ ನೀತಿಯಲ್ಲಿ ಏನಾದರೂ ವ್ಯತ್ಯಾಸವಿದೆಯೆ ? ಇಲ್ಲವೆಂದಾದರೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಡಿದ ಆ ಜೀವಗಳ ತ್ಯಾಗಕ್ಕೆ ಬೆಲೆ ಏನು ?

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸದೇ ಇರುವ ಪಕ್ಷ ಇಂದು ನಮ್ಮ ದೇಶದ ಚುಕ್ಕಾಣಿ ಹಿಡಿದಿದೆ. ಅದೇ ಪಕ್ಷದ ಪ್ರಧಾನಿ, ಅದೇ ಪಕ್ಷದ ರಾಷ್ಟ್ರಾಧ್ಯಕ್ಷ. ೧೮೫೭ರ ಬಂಡಾಯ ಹಿಂದೂ-ಮುಸ್ಲಿಂ ಜನರೂ, ರಾಜರುಗಳೂ ಒಗ್ಗಟ್ಟಿನಿಂದ ನಡೆಸಿದ ಹೋರಾಟ. ಆ ಬಂಡಾಯದ ನಂತರ ನೇರವಾಗಿ ಬ್ರಿಟನ್ ಸಂಸತ್ತಿನಿಂದ ಆಡಳಿತ ನಡೆಸಿದ ಸಾಮ್ರಾಜ್ಯಶಾಹಿಗಳು ಹಿಂದೂ-ಮುಸ್ಲಿಂ ಐಕ್ಯತೆ ಇದ್ದರೆ ತಮ್ಮ ಆಡಳಿತ, ಭಾರತದ ಲೂಟಿ ಸುಗಮವಲ್ಲವೆಂದು ದೇಶದಲ್ಲಿ ಹಿಂದೂ-ಮುಸ್ಲಿಂ ಗಲಭೆ ಬೆಳೆಯಲು ಕಾರಣಕರ್ತರಾದರು. ಸ್ವಾತಂತ್ರ್ಯಾ ನಂತರದ ಎಪ್ಪತ್ತು ವರ್ಷಗಳ ನಂತರ ಮತ್ತೆ ಹಿಂದೂ-ಮುಸ್ಲಿಂ ಸಂಘರ್ಷ ತೀವ್ರವಾಗಿದೆ. ಅಂದು ಇಂಥ ಸಂಘರ್ಷಕ್ಕೆ ಕಾರಣಕರ್ತರಾದವರು ಇಂದು ಕೇಂದ್ರದಲ್ಲಿ ಅಧಿಕಾರದಲ್ಲಿದ್ದಾರೆ. ಅಂದು ಬ್ರಿಟಿಷ್ ಆಡಳಿತ ತನ್ನ ದೇಶದ ಉದ್ಯಮಿ, ವ್ಯಾಪಾರಿಗಳ ಪರವಾಗಿ ಆಡಳಿತ ನಡೆಸಿ ಜನರ ಪ್ರತಿರೋಧ ಪ್ರಭುತ್ವ ಕಡೆಗೆ ಬಾರದಿರುವಂತೆ ಮಾಡಲು ಮತೀಯ ಶಕ್ತಿಗಳನ್ನು ಪ್ರಚೋದಿಸಿತು. ಇಂದೂ ಸಹ ಕೇಂದ್ರದಲ್ಲಿರುವ ಪ್ರಭುತ್ವ ಅಂಬಾನಿ, ಅದಾನಿಯಂಥ ದೇಶೀ ಕಾರ್ಪೊರೇಟ್ ಕಂಪನಿಗಳನ್ನೊಳಗೊಂಡು ವಿಶ್ವದ ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗಾಗಿ ಕೆಲಸ ಮಾಡುತ್ತಿದೆ. ಬ್ರಿಟಿಷರು ಮಾಡಿದಂತೆಯೇ ಮತೀಯ, ಜನಾಂಗೀಯ ದ್ವೇಷ ಸೃಷ್ಟಿಸಿ ಜನರ ಗಮನ ಬೇರೆಡೆ ತಿರುಗಿಸುತ್ತಿದೆ. ಆ ಕಾರಣಕ್ಕೆ ಸರಕಾರದ ಕಾರ್ಪೊರೇಟ್ ಕಂಪನಿಗಳ ಪರ ನಿಲುವುಗಳು ಜನರ ಕಣ್ಣಿಗೆ ಕಾಣಿಸುತ್ತಿಲ್ಲ.

ಉದಾರೀಕರಣದ ನೀತಿಗಳನ್ನು ಹಿಂದಿನ ಸರಕಾರ ಜಾರಿಗೆ ತಂದರೆ ಇಂದಿನ ಸರಕಾರ ಅದನ್ನು ತೀವ್ರಗತಿಯಲ್ಲಿ ಮುನ್ನಡೆಸುತ್ತಿದೆ. ಇಂಥ ಸಂದರ್ಭದಲ್ಲಿ ಪ್ರತಿರೋಧವಿಲ್ಲದ ಸ್ವಾತಂತ್ರ್ಯದ ಮೇಲಿನ ದಾಳಿಯನ್ನು ಈ ದೇಶದ ಪ್ರಜೆಗಳೇ ಎದುರಿಸಬೇಕಾಗಿದೆ. ೧೯೪೭ರಲ್ಲಿ ಪಡೆದ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಮುಂದಿನ ಪೀಳಿಗೆಗೆ ಹಸ್ತಾಂತರಿಸಬೇಕಿದೆ. ನಮ್ಮ ಹಿರಿಯರು ತಮ್ಮ ತ್ಯಾಗ, ಬಲಿದಾನಗಳಿಂದ ನಮ್ಮ ಪೀಳಿಗೆಗೆ ಸ್ವಾತಂತ್ರ್ಯ ಕೊಟ್ಟು ಹೋಗಿದ್ದಾರೆ. ನಾವು ನಮ್ಮ ಸ್ವಾರ್ಥ, ಕೊಳ್ಳುಬಾಕ ಸಂಸ್ಕೃತಿಗೆ ಬಲಿಯಾಗಿ ಮುಂದಿನ ಪೀಳಿಗೆಗೆ ಗುಲಾಮಗಿರಿಯನ್ನು ಕೊಟ್ಟು ಹೋಗಬಾರದು. ನೈಜ ಸ್ವಾತಂತ್ರ್ಯ, ಸ್ವಾವಲಂಬನೆ, ಶಾಂತಿ, ಸಹಬಾಳ್ವೆ, ಸಮಾನತೆಯತ್ತ ಹೋಗುವುದೇ ಈ ಎಪ್ಪತ್ತನೇ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ದೇಶದ ಜನತೆಯ ಆಶಯವಾಗಿರಲಿ.

ಸಿದ್ದನಗೌಡ ಪಾಟೀಲ




ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಕಾರ್ನೆಲ್ ಎಸ್‌ಪಿ ಜಾನ್ಸನ್ ಕಾಲೇಜ್ ಆಫ್ ಬಿಸಿನೆಸ್‌ನ ಡೀನ್ ಆಗಿರುವ ಸೌಮಿತ್ರ ದತ್ತ ಖ್ಯಾತ ಅರ್ಥಶಾಸ್ತ್ರಜ್ಞ. ಪತ್ರಿಕೆಗೆ ನೀಡಿರುವ ಸಂದರ್ಶನ ಒಂದರಲ್ಲಿ ಐಟಿ ಉದ್ಯಮ ಕುರಿತು ವಿವರವಾಗಿ ಪ್ರಸ್ತಾಪ ಮಾಡಿದ್ದಾರೆ. ಅವರ ಪ್ರಕಾರ ಶೇ. ೭ರಷ್ಟು ಅಭಿವೃದ್ಧಿ ಪ್ರಮಾಣ ಏನೂ ಸಾಲದು. ಇಪ್ಪತ್ತೈದು ವರ್ಷಗಳ ಹಿಂದೆ ಐಟಿ ಉದ್ಯಮದ ಸ್ಥಿತಿ ಉತ್ತಮವಾಗಿತ್ತು, ಹಳೆಯದಕ್ಕೇ ಅಂಟಿಕೊಂಡಿರುವುದರಿಂದ ಅದು ಪ್ರಗತಿಯನ್ನು ಕಾಣದೆ ಸ್ಥಗಿತಗೊಂಡಿದೆ. ಭಾರತದ ಐಟಿ ಉದ್ಯಮದಲ್ಲಿ ಉದ್ಯೋಗಾವಕಾಶ ಕಡಿಮೆಯಾಗುತ್ತಿರುವುದು ತಾತ್ಕಾಲಿಕ. ಉದ್ಯಮ ಜೀವಂತವಾಗಿರುವುದರಲ್ಲಿ ಸಂಶಯವಿಲ್ಲ, ಆದರೆ ಹೊಸ ಆವಿಷ್ಕಾರಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ.

ಮುಂದಿನ ಪೀಳಿಗೆಯ ಐಟಿ ಕಂಪೆನಿಗಳು ಭಾರತದಲ್ಲಿ ತಲೆ ಎತ್ತುವುದಕ್ಕಿಂತ ಅಮೆರಿಕ ಮತ್ತು ಚೀಣಾಗಳಿಂದ ಬರುವುದೇ ಹೆಚ್ಚು ಎಂದು ಹೇಳಲಾಗುತ್ತದೆ. ಚೀಣಾದಿಂದ ಭಾರಿ ಪೈಪೋಟಿ ಎದುರಿಸಲು ಸನ್ನದ್ಧವಾಗಬೇಕಾಗಿದೆ ಐಟಿ ಉದ್ಯಮ. ಭಾರತದ ಪ್ರಮುಖ ಐಟಿ ಕಂಪೆನಿಗಳಾದ ಟಾಟಾ ಕನ್ಸಲ್ಟೆನ್ಸಿ ಮತ್ತು ವಿಪ್ರೋ ಚೀಣಾದ ಆಲಿಬಾಬ ಮತ್ತು ಟೆನ್‌ಸೆಂಟ್‌ನ ಪೈಪೋಟಿ ಎದುರಿಸಬೇಕಾಗುತ್ತದೆ. ಪ್ರಪಂಚದ ಐಟಿ ಉದ್ಯಮದಲ್ಲಿ ಭಾರತ ಹಿಂದೆ ಹೊಂದಿದ್ದ ಸ್ಥಾನ ಕಳೆದುಕೊಂಡಿದೆ. ಸೌಮಿತ್ರ ದತ್ತ ನೀಡಿರುವ ಅಂಕಿಅಂಶಗಳಂತೆ ಭಾರತದ ಯಾವ ಐಟಿ ಕಂಪೆನಿಯೂ ಪ್ರಪಂಚದ ಹತ್ತು ಐಟಿ ಕಂಪೆನಿಗಳಲ್ಲಿ ಸ್ಥಾನ ಪಡೆದುಕೊಂಡಿಲ್ಲ.

* * *

ಪಾಕಿಸ್ತಾನದ ವಿರುದ್ಧ ರಣಕಹಳೆ ಊದಿರುವ ಭಾರತ ಈಗ ಚೀಣಾದ ಗಡಿಯಲ್ಲೂ ಅದೇ ಪರಿಸ್ಥಿತಿ ಎದುರಿಸುತ್ತಿದೆ. ಮಾಧ್ಯಮಗಳ ವರದಿ ಮತ್ತು ಅಬ್ಬರದ ಚರ್ಚೆಗಳನ್ನು ಗಮನಿಸಿದರೆ ಇನ್ನೇನು ಯುದ್ಧ ಪ್ರಾರಂಭವಾಗಿಬಿಟ್ಟಿದೆಯೇನೋ ಎನಿಸುತ್ತದೆ. ಕಾಶ್ಮೀರದಲ್ಲಿ ಪರಿಸ್ಥಿತಿ ಉಲ್ಬಣಿಸುತ್ತಿದೆಯೇ ಹೊರತು ಕಮ್ಮಿಯಾಗುವ ಲಕ್ಷಣಗಳೇನೂ ಕಾಣಿಸುತ್ತಿಲ್ಲ. ಅಮರನಾಥ ಯಾತ್ರಿಗಳ ಮೇಲೆ ಉಗ್ರರು ನಡೆಸಿದ ದಾಳಿ ಇತ್ತೀಚಿನದು. ಅಮಾಯಕ ಯಾತ್ರಿಗಳ ಕಗ್ಗೊಲೆ ಖಂಡನಾರ್ಹ. ಪಾಕಿಸ್ತಾನದೊಂದಿಗೆ ಗಡಿಯಲ್ಲಿ ಪರಿಸ್ಥಿತಿ ಬಿಗಡಾಯಿಸಿದೆ. ಗುಂಡಿನ ಚಕಮಕಿ ಆಗಾಗ ನಡೆಯುತ್ತಲೇ ಇದೆ. ಭಾಜಪ ಸರಕಾರ ನಡೆಸಿದ 'ಸರ್ಜಿಕಲ್ ಸ್ಟ್ರೈಕ್' ಈಗ ಹಳೆಯ ವಿಷಯವಾಯಿತು. ಎಲ್ಲ ವಿವಾದಗಳನ್ನು ಮಾತುಕತೆಯ ಮೂಲಕವೇ ಬಗೆಹರಿಸಬೇಕೇ ಹೊರತು ಯುದ್ಧೋನ್ಮಾದದಿಂದಲ್ಲ. ಇದು ಕಾಶ್ಮೀರದ ಪರಿಸ್ಥಿತಿಗೂ ಅನ್ವಯ. ಉಗ್ರವಾದಿಗಳನ್ನು, ಪ್ರತ್ಯೇಕತಾವಾದಿಗಳನ್ನು ಸೈನಿಕ, ಭದ್ರತಾ ಸಿಬ್ಬಂದಿಯ ನೆರವಿನಿಂದ ಬಗ್ಗುಬಡಿಯುವುದು ಕೇಂದ್ರ ಸರಕಾರದ ಉದ್ದೇಶ. ಆದರೆ ಈ ಘರ್ಷಣೆಯಲ್ಲಿ ಸಿಕ್ಕಿಕೊಂಡಿರುವ ಜನಸಾಮಾನ್ಯರು ದೂರಸರಿಯುತ್ತಿರುವುದೀಗ ಗಣನೆಗೆ ತೆಗೆದುಕೊಳ್ಳಬೇಕಾದ ಸಂಗತಿ. ಪರಿಸ್ಥಿತಿ ಸಹಜಗೊಳಿಸುವುದಕ್ಕೆ ಶಕ್ತಿಪ್ರದರ್ಶನ ಒಂದೇ ಮಾರ್ಗವಲ್ಲ ಎನ್ನುವುದನ್ನು ಆಡಳಿತ ಅರಿತುಕೊಂಡರೆ ಕ್ಷೇಮ.

ಚೀಣಾದೊಂದಿಗೆ ಸಂಬಂಧ ದಿನೇ ದಿನೇ ಹೆಚ್ಚು ಸಂಕೀರ್ಣಗೊಳ್ಳುತ್ತಿದೆ. ಈ ಸಲದ ಗಡಿವಿವಾದ ೧೯೬೨ರಲ್ಲಿನಂತಲ್ಲ. ಅದು ಭಾರತ, ಚೀಣಾ ಮತ್ತು ಭೂತಾನದ ವಿವಾದಿತ ಪ್ರದೇಶವನ್ನು ಕುರಿತದ್ದಾಗಿದೆ. ಭೂತಾನದ ಗಡಿಪ್ರದೇಶದಲ್ಲಿ ಭಾರತದ ಸೇನೆ ಜಮಾಯಿಸಿದೆ, ಹಾಗೆಯೇ ಚೀಣಾ ಕೂಡ ಸೈನ್ಯವನ್ನು ಸಜ್ಜುಗೊಳಿಸಿದೆ. ಚೀಣಾದೊಂದಿಗೆ ಇನ್ನೊಂದು ಯುದ್ಧ ಸಂಭವನೀಯವೇನೋ ಎಂಬ ಶಂಕೆ ಮೂಡಿದೆ. ಶಿವಶಂಕರ ಮೆನನ್ ಯುಪಿಎ ಅಧಿಕಾರದಲ್ಲಿದ್ದಾಗ ಭದ್ರತಾ ಸಲಹೆಗಾರರಾಗಿದ್ದವರು. ಚೀಣಾದಲ್ಲಿ ಭಾರತದ ರಾಯಭಾರಿಯಾಗಿದ್ದವರು ಮತ್ತು ಚೀಣಾದೊಂದಿಗೆ ಗಡಿವಿವಾದದ ಮಾತುಕತೆಗಳಲ್ಲಿ ಭಾಗಿಯಾಗಿದ್ದವರು. ಚೀಣಾದ ವ್ಯವಹಾರಗಳನ್ನು ಚೆನ್ನಾಗಿ ಅರಿತವರು. 'ದಿ ಹಿಂದು' ಪತ್ರಿಕೆಗೆ ಅವರು ಇತ್ತೀಚೆಗೆ ನೀಡಿದ ಸಂದರ್ಶನದಲ್ಲಿ ಚೀಣಾದೊಂದಿಗೆ ದೋಕ್ಲಾಮ ಪ್ರದೇಶದಲ್ಲಿ ಉದ್ಭವಿಸಿರುವ ಗಡಿ ತಕರಾರಿಗೆ 'ಚೀಣಾ ದೊಂದಿಗೆ ನೇರವಾದ ಮಾತುಕತೆಯೊಂದೇ ಇರುವ ಮಾರ್ಗ' ಎಂಬುದಾಗಿ ಒತ್ತಿಹೇಳಿದ್ದಾರೆ. ಒಂದು ತಿಂಗಳಿಗೂ ಹೆಚ್ಚು ಕಾಲದಿಂದ ಉದ್ಭವಿಸಿರುವ ಪರಿಸ್ಥಿತಿಯನ್ನು ಹಿಂದಿನ ವಿವಾದಗಳಿಗಿಂತ ಭಿನ್ನ ಎಂದು ಅವರು ಬಣ್ಣಿಸಿದ್ದಾರೆ. ೨೦೧೩ರಲ್ಲಿ ಮತ್ತು ೨೦೧೪ರಲ್ಲಿ ಕ್ರಮವಾಗಿ ಡೆಪ್ಸಾಂಗ್ ಮತ್ತು ಚುಮಾರ್ ಪ್ರದೇಶಗಳಲ್ಲಿ ಇಂಥದೇ ವಿವಾದ ಸೃಷ್ಟಿಯಾಗಿತ್ತು. ೧೯೮೮ರಲ್ಲಿ ಪ್ರಧಾನಿ ರಾಜೀವ ಗಾಂಧಿ ಚೀಣಾಗೆ ಭೇಟಿ ನೀಡಿದ ಮೊದಲ ಭಾರತೀಯ ಪ್ರಧಾನಿ ೧೯೬೨ರ ಸಶಸ್ತ್ರ ಘರ್ಷಣೆಯ ನಂತರ. ಆಗ ಗಡಿವಿವಾದವನ್ನು ಮಾತುಕತೆಯಿಂದ ಬಗೆಹರಿಸಲು ಒಂದು ವ್ಯವಸ್ಥೆಯನ್ನು ನಿರ್ಮಿಸಲಾಯಿತು. ಗಡಿಯಲ್ಲಿ ಶಾಂತಿಸ್ಥಾಪನೆಗೆ ಮಾರ್ಗಸೂಚಿಗಳನ್ನು ರೂಪಿಸಲಾಯಿತು. ಈಗಲೂ ಅದೇ ಮಾರ್ಗದ ಅನುಸರಣೆ ಅಪೇಕ್ಷಣೀಯ.

* * *

ಮುಂದಿನ ವರ್ಷದ ಮೇ-ಜೂನ್ ತಿಂಗಳಲ್ಲಿ ನಡೆಯಲಿರುವ ಚುನಾವಣೆಗಳಿಗೆ ರಾಜ್ಯದಲ್ಲಿ ಈಗಿಂದಲೇ ಪರದಾಟ ಪ್ರಾರಂಭವಾಗಿದೆ. ದಲಿತರ ಮತವನ್ನು ಆಕರ್ಷಿಸಲು ಯಡಿಯೂರಪ್ಪ ನೇತೃತ್ವದಲ್ಲಿ ಭಾಜಪ ನಾಯಕರು ದಲಿತರ ಮನೆಗಳಿಗೆ ನುಗ್ಗಿ ಊಟ, ಉಪಾಹಾರಗಳನ್ನು ಸ್ವೀಕರಿಸುತ್ತಿದ್ದಾರೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೋಮುಗಲಭೆ ಸೃಷ್ಟಿಸಿದ್ದಾರೆ. ಅಂದಹಾಗೆ, ಪೇಜಾವರ ಮಠದ ವಿಶ್ವೇಶ ತೀರ್ಥರು ಇಫ್ತಾರ್ ಪಾರ್ಟಿ ನಡೆಸಿದ್ದೂ ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡೇ ಇರಬೇಕು. ಶ್ರೀಗಳು ವಿಶ್ವ ಹಿಂದೂ ಪರಿಷತ್ತಿನ ಉಪಾಧ್ಯಕ್ಷರು ಎನ್ನುವುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಕರ್ನಾಟಕವನ್ನು ಕಾಂಗ್ರೆಸ್ಸಿನಿಂದ ಮುಕ್ತಗೊಳಿಸಿ, ಭಾಜಪವನ್ನು ಅಧಿಕಾರಕ್ಕೆ ತರಬೇಕೆಂದು ಭಾರತೀಯ ಜನತಾ ಪಕ್ಷದ ರಾಷ್ಟ್ರೀಯ ಅಧ್ಯಕ್ಷ ಅಮಿತ್ ಷಾ ತಾಕೀತು ಮಾಡಿರುವುದು ಎಲ್ಲರಿಗೂ ತಿಳಿದಿರುವ ವಿಚಾರ.

ರಾಜ್ಯದಲ್ಲಿ ಪ್ರಮುಖ ರಾಜಕೀಯ ಶಕ್ತಿಗಳಾಗಿರುವ ಕಾಂಗ್ರೆಸ್, ಜೆಡಿಎಸ್ ಮತ್ತು ಭಾಜಪಗಳು ಒಂದಾದಮೇಲೊಂದು ಸಮಾವೇಶಗಳನ್ನು ನಡೆಸಿ ಶಕ್ತಿ ಪ್ರದರ್ಶನದಲ್ಲಿ ತೊಡಗಿವೆ. ಆಯಾರಾಮ, ಗಯಾರಾಮ ಪಕ್ಷಾಂತರದ ಕಸರತ್ತು ಮುಂದುವರಿದಿದೆ. ಕಾಂಗ್ರೆಸ್ ನಾಯಕ ವಿಶ್ವನಾಥ್ ಜೆಡಿಎಸ್ ಅಪ್ಪಿಕೊಂಡಿದ್ದಾರೆ. ಕಾಂಗ್ರೆಸ್ ಪಾಳ್ಯದಲ್ಲಿ ಬಿರುಸಿನ ಚಟುವಟಿಕೆ ಪ್ರಾರಂಭವಾಗಿದೆ. ಹಿಂದುಳಿದವರಿಗೆ ಪ್ರಾತಿನಿಧ್ಯ ನೀಡಲು ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಪಟ್ಟಕ್ಕೆ ಪರಮೇಶ್ವರ ಇವರನ್ನೇ ಮುಂದುವರಿಸಲಾಗಿದೆ. ಅವರು ರಚಿಸಿಕೊಂಡಿರುವ ಕಾರ್ಯಕಾರಿ ಸಮಿತಿ ಕಾಂಗ್ರೆಸ್ಸಿನಲ್ಲಿ ಸಾಕಷ್ಟು ಅತೃಪ್ತಿ ತಂದಿದೆ. ಸಚಿವ ಸಂಪುಟದಲ್ಲಿ ತೆರವಾಗಿರುವ ಸ್ಥಾನಗಳನ್ನು ಭರ್ತಿಮಾಡಿ, ಮಂತ್ರಿಮಂಡಲದ ಪುನಾರಚನೆಯ ವಿಷಯವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಮುಂದೂಡುತ್ತಲೇ ಇದ್ದಾರೆ. ಪ್ರಾಯಶಃ ಅವರಿಗೆ ಇರುವೆ ತುಂಬಿರುವ ಹುತ್ತದಲ್ಲಿ ಕೈಯಿಟ್ಟ ಹಾಗೆ ಎನಿಸಿರಬೇಕು. ಮೂರೂ ಪಕ್ಷಗಳು ಅಧಿಕಾರದಾಸೆ ತುಂಬಿಕೊಂಡಿವೆ. ಈಚೆಗೆ ನಡೆದ ಉಪಚುನಾವಣೆಗಳಲ್ಲಿ ಕಾಂಗ್ರೆಸ್ ಜಯ ಗಳಿಸಿದ್ದನ್ನೇ ಮಾನದಂಡವಾಗಿರಿಸಿಕೊಂಡು ಕಾಂಗ್ರೆಸ್ ಉತ್ಸಾಹದಿಂದ ಕಣಕ್ಕಿಳಿಯುತ್ತಿದೆ. ಆಗ ದೇವೇಗೌಡರ ಜೆಡಿಎಸ್ ಚುನಾವಣೆಯಲ್ಲಿ ಭಾಗವಹಿಸಿರಲಿಲ್ಲ ಎನ್ನುವುದನ್ನು ಕಾಂಗ್ರೆಸ್ ನೆನಪಿನಲ್ಲಿಟ್ಟುಕೊಳ್ಳಬೇಕು.

* * *

ಭಾರತೀಯ ಸಮಾಜ ವಿಜ್ಞಾನ ಸಂಶೋಧನಾ ಪರಿಷತ್ತು (ಐಸಿಎಸ್‌ಎಸ್‌ಆರ್) ಈಗ ಕೈಗೊಳ್ಳುವುದಾಗಿ ಹೇಳುವ ವಿಷಯಗಳನ್ನು ಗಮನಿಸಿದರೆ ಆ ಪರಿಷತ್ತಿನ ಭೂತ-ಭವಿಷ್ಯತ್ತುಗಳಿಗೆ ಸಂಬಂಧ ಕಲ್ಪಿಸುವುದು ಸಾಧ್ಯವಾಗದು. ಹೊಸದಾಗಿ ಈ ಪರಿಷತ್ತಿನ ಮುಖ್ಯಸ್ಥರಾಗಿ ನೇಮಕಗೊಂಡಿರುವ ಶ್ರೀ. ಬ್ರಜ್ ಬಿಹಾರಿ ಕುಮಾರ್ ಅವರ ಪ್ರಕಾರ ನಮ್ಮ ದೇಶದ ಶಾಲಾ-ಕಾಲೇಜುಗಳ ಪಠ್ಯಪುಸ್ತಕಗಳೆಲ್ಲಾ ಕೇವಲ "ಕಾರ್ಯಕರ್ತ"ರನ್ನು ತಯಾರಿಸುವ ಉದ್ದೇಶ ಹೊಂದಿವೆ. ವಾಸ್ತವ ಸಂಗತಿ ಹಾಗಿದ್ದಿದ್ದರೆ ಎಲ್ಲೆಲ್ಲೂ ಕಾರ್ಯಕರ್ತರ ಸೈನ್ಯಗಳು ಕಂಡುಬರಬೇಕಾಗಿತ್ತು. ಆದರೆ ಸಂಗತಿ ಹಾಗಿಲ್ಲ. ಬ್ರಜ್ ಬಿಹಾರಿ ಅವರಿಗೆ ಹಾಗೇಕೆನಿಸಿತೆಂದರೆ ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳನ್ನು ಕಂಡರೆ ಅವರಿಗೆ ಬಹಳ ಕಸಿವಿಸಿ. ಪಠ್ಯಪುಸ್ತಕಗಳು ವಿದ್ಯಾಭ್ಯಾಸಕ್ಕೆ ಅನಿವಾರ್ಯವಾಗಿ ಬೇಕು. ಭಾರತವೂ ಸೇರಿದಂತೆ ವಿಶ್ವವು ಹೇಗೆ ಚಲಿಸುತ್ತದೆ ಎಂಬುದು ಸಮಾಜ ವಿಜ್ಞಾನದ ವಸ್ತು. ಬ್ರಜ್ ಬಿಹಾರಿ ಅದನ್ನು ಸರ್ವಾಂಗೀಣವಾಗಿ ತಿರಸ್ಕರಿಸುತ್ತಾರೆ. ಇವರು ಮಾನವಶಾಸ್ತ್ರದಲ್ಲಿ ಪಾಂಡಿತ್ಯ ಹೊಂದಿದ್ದಾರೆಂದು ಹೇಳಲಾಗಿದೆ, ವಯಸ್ಸು ೭೬. ಹಿಂದೊಮ್ಮೆ ಪ್ರಧಾನಿ ಮೋದಿಯವರ ಸಂಕಷ್ಟಗಳನ್ನು ವಿಶ್ಲೇಷಿಸಿ "ಅತ್ಯಂತ ಅಸಹನೆಗೆ ಬಲಿಯಾದ ವ್ಯಕ್ತಿ" ಎಂದು ಬಣ್ಣಿಸಿದ್ದರು. ಅವರು ಬಲಿ ಮಾಡಿದವರ ಬಗ್ಗೆ ಹೇಳುತ್ತಿದ್ದಾರೋ

ಅಥವಾ ಬಲಿ ಆದವರ ಬಗ್ಗೆ ಹೇಳುತ್ತಿದ್ದಾರೋ ವಿವೇಚಿಸಬೇಕು. ಅವರಿಗೆ ಯಾವುವೋ ಪಠ್ಯಪುಸ್ತಕಗಳನ್ನು ತಿರುವಿಹಾಕುವ ಸಂದರ್ಭ ಬಂದಿತ್ತಂತೆ. ಒಂದರಲ್ಲಿ ಜಮ್ಮು-ಕಾಶ್ಮೀರವು ಭಾರತ ಭೂಪಟದಲ್ಲಿ ಇರಲಿಲ್ಲವಂತೆ, ಇನ್ನೊಂದರಲ್ಲಿ ಈಶಾನ್ಯ ಭಾರತದ ಕೆಲ ಭಾಗಗಳನ್ನು ಚೀಣಾಕ್ಕೆ ಸೇರಿಸಿಬಿಟ್ಟಿದ್ದರಂತೆ. ನಮಗೆಲ್ಲೂ ಅಂತಹ ಪಠ್ಯಪುಸ್ತಕಗಳು ದೊರೆತಿಲ್ಲ. ದೇಶದ ಎಲ್ಲ ಭಾಗಗಳಲ್ಲೂ ಎನ್‌ಸಿಇಆರ್‌ಟಿ ಬರೆಸಿ ಪ್ರಕಟಿಸಿದ ಪಠ್ಯಪುಸ್ತಕಗಳಿವೆ, ಆದರೆ ಯಾರೂ ಅವುಗಳಲ್ಲಿ ಗುರುತಿಸಿರದಿದ್ದ ಅಂಶಗಳನ್ನು ಸಮಾಜ ವಿಜ್ಞಾನ ಸಂಶೋಧನಾ ಪರಿಷತ್ತಿನ ಅಧ್ಯಕ್ಷರು ಕಂಡು ಹೌಹಾರಿದ್ದಾರೆ. ಆ ಸಂಸ್ಥೆಗೆ ನಿರ್ದಿಷ್ಟ ರಾಜಕೀಯ ಕಾರ್ಯಸೂಚಿ ಇದೆಯೆಂದು ಅವರು ಸಂಶೋಧಿಸಿದ್ದಾರೆ. "ದೇಶದಲ್ಲಿ ಹೆಚ್ಚುತ್ತಲೇ ಇರುವ ಸಂಘರ್ಷಗಳು ಹಾಗೂ ಅನಾಯಕತ್ವದ ಸೂಚನೆಗಳು ಈ ಎನ್‌ಸಿಇಆರ್‌ಟಿ ಪುಸ್ತಕಗಳಿಂದಲೇ ಫಲಿಸಿವೆ" ಎಂಬುದು ಈ ವಿದ್ವಾಂಸರ ಅಭಿಪ್ರಾಯ. ಇಂತಹ ಸಂಶೋಧನೆಯ ತೀರ್ಮಾನಗಳಿಗೆ ಬರಲು ಅವರು ಯಾವ ಅಧ್ಯಯನ ವಿಧಾನ ಅನುಸರಿಸಿದರೋ ತಿಳಿಯದು. ಒಟ್ಟಿನಲ್ಲಿ ನಮ್ಮ ದೇಶದ ಸಂಶೋಧನೆಗಳಿಗೆ ನವೀನ ಮಾರ್ಗ ಮತ್ತು ಗೊತ್ತುಗುರಿಗಳನ್ನು ಕಂಡುಕೊಳ್ಳುವ ಅರ್ಥಹೀನ ಆವೇಶ ಕಾಣಬರುತ್ತಿದೆ. ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಒಬ್ಬ ಸಂಶೋಧಕರು ಇತ್ತೀಚೆಗೆ ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ. ಯಾವುದೇ ಸಂಶೋಧನಾ ವಿಷಯವನ್ನು ಮಂಡಿಸಿದರೂ ಅದಕ್ಕೆ ಪ್ರತಿಕ್ರಿಯೆಯಾಗಿ ಕೆಲವು ವಿಜ್ಞಾನಿಗಳು, "ಅದರಲ್ಲೇನಿದೆ ? ಅದನ್ನು ನಮ್ಮ ದೇಶದ ಪ್ರಾಚೀನ ವಿದ್ವಾಂಸರು ಸಾವಿರಾರು ವರ್ಷಗಳ ಹಿಂದೆಯೇ ಕಂಡುಕೊಂಡಿದ್ದರು" ಎಂದುಬಿಡುತ್ತಾರಂತೆ. ಆದರೆ ಅವರು ತಮ್ಮ ಇಂತಹ ಹೇಳಿಕೆಗಳಿಗೆ ಪುರಾವೆಗಳನ್ನೇನೂ ಪ್ರಸ್ತುತಪಡಿಸುವುದಿಲ್ಲ. ಹೀಗಿದೆ ನಮ್ಮ ನೂತನ ಸಂಶೋಧನಾ ಹಾದಿ ! ಇಂತಹ ಹಾದಿಯಲ್ಲಿ ಮುನ್ನಡೆದು ಅಂತರರಾಷ್ಟ್ರೀಯಮಟ್ಟದಲ್ಲಿ ಶ್ರೇಷ್ಠ ಸಂಶೋಧಕರಾಗಬೇಕಂತೆ ನಮ್ಮ ವಿಜ್ಞಾನಿಗಳು ! ಪ್ರಾಚೀನ ಭಾರತವು ವಿಜ್ಞಾನದ ಕ್ಷೇತ್ರಗಳಲ್ಲಿ ನಿಜಕ್ಕೂ ಸಾಧಿಸಿದ್ದ ಹೆಮ್ಮೆಯ ಹೆಜ್ಜೆಗಳ ಪರಿಚಯವನ್ನು ಸಹ ಹೊಂದಿಲ್ಲದ ಇಂತಹ ಸಂಶೋಧಕರ ಅಧ್ಯಯನ ಶಿಸ್ತನ್ನು ಏನೆಂದು ತಿಳಿಯೋಣ ?

* * *

ಓವೈಸಿ ಎಂಬೊಬ್ಬ ವ್ಯಕ್ತಿ ನಮ್ಮ ಲೋಕಸಭೆಯ ಸದಸ್ಯ. ಪ್ರಜಾಪ್ರಭುತ್ವದ ಬಗೆಗಿನ ಆತನ ಪ್ರಜ್ಞೆ ಎಷ್ಟು ವಿಕೃತವಾಗಿದೆಯೆಂದರೆ ಆತನನ್ನು ಸಾರ್ವಜನಿಕ ಕ್ಷೇತ್ರದಿಂದ ಹೊರಗಟ್ಟುವುದು ಹಿತಕರವಾದೀತು ಎನಿಸುತ್ತದೆ. ಕೆಲವೊಮ್ಮೆ ಮೂರ್ಖತನದ ಅಪಾಯಕಾರಿ ಮಾತುಗಳನ್ನಾಡುವುದೊಂದೇ ಆತನಿಗೆ ಗೊತ್ತಿರುವುದು ಎಂದು ಹೇಳಬೇಕಾಗುತ್ತದೆ. ಮತೀಯ ಕ್ಷೋಭೆಯು ನಮ್ಮ ದೇಶದಲ್ಲಿ ಹೆಚ್ಚುತ್ತಿರುವುದು ಎಲ್ಲರ ಅನುಭವಕ್ಕೂ ಬಂದಿದೆ. ಅದಕ್ಕೆ ಓವೈಸಿ ಪರಿಹಾರ ಕೊಡಿಸಹೊರಟಿದ್ದಾರೆ. ಅವರು ಸೂಚಿಸುವ ಪರಿಹಾರವು ವಿಷಮಯ ಮತ್ತು ಹಾನಿಕರ. "ದೇಶದ ಮುಸಲ್ಮಾನರಿಗೆ ಪ್ರತ್ಯೇಕ ಜಾಗ ಕೊಡಿ" ಎನ್ನುವುದು ಅವರ ಬೇಜವಾಬ್ದಾರಿ ಸಲಹೆ. ಅಲ್ಪಸಂಖ್ಯಾತರಿಗೆ ಸುರಕ್ಷತೆ ಒದಗಿಸುತ್ತೇನೆಂದು ಹೇಳುತ್ತಾ ಆತ ಕುಚೇಷ್ಟೆಯ ಮಾತನ್ನಾಡಿರುವುದು ಖಂಡನೀಯ. ಮಾತೆತ್ತಿದರೆ ಅಲ್ಪಸಂಖ್ಯಾತರನ್ನು ಛೇಡಿಸುತ್ತಾ "ಪಾಕಿಸ್ತಾನಕ್ಕೆ ಹೋಗಿ ಇಲ್ಲವೇ ಕಬರೀಸ್ಥಾನಕ್ಕೆ (ಅಂದರೆ ಸ್ಮಶಾನಕ್ಕೆ) ಹೋಗಿ" ಎನ್ನುವ ಮಂದಿಗೆ ಪೂರಕವಾಗಿ ಈಗ ಓವೈಸಿ ಅತಿನಿಂದನಾರ್ಹ ನಿಲುವನ್ನು ಪ್ರಕಟಿಸಿದ್ದಾರೆ. ನಮ್ಮ ದೇಶದ ಯಾವುದೇ ನಾಗರಿಕರ ಹಕ್ಕನ್ನು ರಕ್ಷಿಸಲು 'ಪ್ರತ್ಯೇಕ ಜಾಗ ಕೊಡಿ' ಎಂಬುದು ಒಂದು ಸೂತ್ರವಾಗಲಾರದು. ಓವೈಸಿಯ ಮಾತು ರಕ್ಷಣೆಗೆ ಹಾದಿ ಮಾಡಿಕೊಡುವುದಿಲ್ಲ, ಹಲ್ಲೆಗೆ ಪ್ರೇರಣೆ ನೀಡುತ್ತದೆ.

* * *

ಈ ತಿಂಗಳ ವಿಶೇಷ, ಪ್ರಧಾನಿಯವರು ಇಸ್ರೇಲ್‌ಗೆ ಹೋಗಿಬಂದಿದ್ದು. ಆರಂಭದಿಂದಲೂ ಪ್ಯಾಲಿಸ್ಟೈನ್ ಸ್ವತಂತ್ರ ನಾಡೆಂಬುದು ನಮ್ಮ ದೇಶದ ವಿದೇಶಾಂಗ ನೀತಿಯ ಒಂದು ಅವಿಭಾಜ್ಯ ಅಂಗ. ಈಗದನ್ನು ತಿರುಗುಮುರುಗು ಮಾಡುವ ಪ್ರಕ್ರಿಯೆ ಜಾರಿಯಲ್ಲಿದೆ. ಪ್ರಧಾನಿಯವರ ಇಸ್ರೇಲ್ ಭೇಟಿಯ ಮುನ್ನ ಕೆಲವು ಟಿ.ವಿ. ಚಾನೆಲ್‌ಗಳು ಇದನ್ನು ಕುರಿತು ವರದಿಗಳನ್ನು ನೀಡಿದವು, ಚರ್ಚೆಗಳನ್ನು ಏರ್ಪಡಿಸಿದ್ದವು. ಒಂದು ಚಾನೆಲ್‌ನ ವಿಶ್ಲೇಷಕ – ಬೃಹಸ್ಪತಿಯ ವಾದ ಹೀಗಿತ್ತು : "ನಮ್ಮ ಎರಡೂ ದೇಶಗಳು ಭಯೋತ್ಪಾದಕರ ಹಲ್ಲೆಗೆ ಗುರಿಯಾಗಿವೆ, ಆದ್ದರಿಂದ ನಮ್ಮ ಪರಸ್ಪರ ಸ್ನೇಹ-ಸಹಕಾರಗಳು ಭಯೋತ್ಪಾದಕರನ್ನು ಮಟ್ಟಹಾಕುವುದರತ್ತ ಕೇಂದ್ರೀಕೃತವಾಗಬೇಕು." ಆ ವಿಶ್ಲೇಷಕನ ಇತಿಹಾಸ ಪ್ರಜ್ಞೆಗೆ ಮಣ್ಣು ಹಾಕಬೇಕು, ಏಕೆಂದರೆ ೧೯೪೮ರಿಂದಲೂ ಇಸ್ರೇಲ್ ಭಯೋತ್ಪಾದಕನಂತೆ ವರ್ತಿಸುತ್ತಿದೆ, ಪ್ಯಾಲಿಸ್ಟೈನ್ ಜನರನ್ನು ಕೊಲ್ಲುತ್ತಿದೆ, ಪ್ರದೇಶಗಳನ್ನು ಆಕ್ರಮಿಸುತ್ತಿದೆ. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯು ೧೯೬೭ರಲ್ಲಿ ಒಂದು ನಿರ್ಣಯ ಕೈಗೊಂಡಿತ್ತು, ಅದನ್ನು "ನಿರ್ಣಯ-೨೪೨" ಎನ್ನುತ್ತಾರೆ. ಜೂನ್ ೧೯೬೭ರಲ್ಲಿ ಇಸ್ರೇಲ್ ನಡೆಸಿದ ಧಾಳಿಯ ನಂತರದ ನಿರ್ಣಯ ಅದು. ಇಸ್ರೇಲ್ ಅದರಂತೆ ನಡೆಯಲಿಲ್ಲ, ಅಮೆರಿಕಾ-ಬ್ರಿಟನ್-ಫ್ರಾನ್ಸ್ ಇಸ್ರೇಲಿನ ನಡತೆಯನ್ನು ಪ್ರಶ್ನಿಸಲಿಲ್ಲ. ಆಮೇಲೆ ಬಂದಿದ್ದು ಕೆಲವು ಪ್ಯಾಲಿಸ್ಟೈನಿನ ಉಗ್ರರು ವಿಮಾನಗಳನ್ನು ಅಪಹರಿಸುತ್ತಿದ್ದ ಪ್ರಸಂಗ. ಅದನ್ನು 'ಹೈಜಾಕ್' ಮಾಡುವುದು ಎನ್ನಲಾಗುತ್ತಿತ್ತು. ಹೀಗೆ ಮಾಡುವುದು ಕ್ಷಮಾರ್ಹವೇ ಎಂದು ಕೇಳಿದಾಗ ಆ ಉಗ್ರರಲ್ಲಿ ಕೆಲವರು ಹೇಳಿದರು : "ಇಲ್ಲ, ಅದು ಸರಿಯಲ್ಲ. ನಮ್ಮ ಪ್ಯಾಲಿಸ್ಟೈನ್ ದೇಶವನ್ನೇ ಹೈಜಾಕ್ ಮಾಡಿದ್ದಾರಲ್ಲ, ಅದಕ್ಕೆ ಅಮೆರಿಕಾ ಮುಂತಾದ ದೇಶಗಳು ಬೆಂಬಲ ಕೊಟ್ಟಿವೆಯಲ್ಲ, ಆ ಹೈಜಾಕ್ ತಡೆಯಲು ನೀವು ಮುಂದಾಗಬೇಕಲ್ಲವೆ ?" ಇಂದಿನ ವಿಚಿತ್ರ ವಿದೇಶಾಂಗ ನೀತಿಯು ಭಯೋತ್ಪಾದಕರನ್ನು ಹಿಮ್ಮೆಟ್ಟಿಸಲು ಭಯೋತ್ಪಾದಕ ದೇಶದೊಂದಿಗೆ ಬಾಂಧವ್ಯ ವೃದ್ಧಿಸಿಕೊಳ್ಳುವುದಾಗಿದೆ. ಅದರಿಂದಾಗಿ ನಮ್ಮ ದೇಶವು ಪರೋಕ್ಷವಾಗಿ ಭಯೋತ್ಪಾದನೆಗೆ ಮಾನ್ಯತೆ ಮತ್ತು ಕುಮ್ಮಕ್ಕು ನೀಡಿದಂತಾಗಿದೆ. ಪ್ರಸ್ತುತ ನೀತಿಯಲ್ಲಿ ಇನ್ನೊಂದು ವ್ಯಂಗ್ಯವಿದೆ : ಹಿಟ್ಲರನ ದೈತ್ಯ ಹಲ್ಲೆಗೆ ಗುರಿಯಾಗಿದ್ದ ಜನಾಂಗದ ಪ್ರತಿನಿಧಿಯಾದ ಇಸ್ರೇಲ್ ಪ್ರಸ್ತುತ ತಾನು ಪ್ಯಾಲಿಸ್ಟೈನಿನ ಮೇಲೆ ಹಲ್ಲೆ ನಡೆಸುತ್ತಿದೆ; ಹಿಟ್ಲರನ ಹಲ್ಲೆಯನ್ನು ಖಂಡಿಸಿದ್ದ ಭಾರತವು ನವ-ಹಲ್ಲೆಕೋರರ ಮೈತ್ರಿ ಸಾಧಿಸಹೊರಟಿದೆ. ಈ ತಿರುವು ನಮ್ಮ ದೇಶದ ಮೇಲೆ ಎಂತಹ ಪರಿಣಾಮ ಬೀರಬಹುದೆಂದು ಯೋಚಿಸುವುದು ಅಗತ್ಯ.

## ಅಂದಿನ ಸ್ವಾತಂತ್ರ್ಯಕ್ಕೆ

ಎಂದೋ ಸಿಕ್ಕಿದ ಸ್ವಾತಂತ್ರ್ಯಕ್ಕೆ
ಈಗ ಉತ್ತರ ಹುಡುಕುತ್ತಿದ್ದೇವೆ
ಗಲ್ಲಿ ಗಲ್ಲಿಗಳಲ್ಲಿ ಉದ್ದನೆಯ
ತಲವಾರಿನೊಂದಿಗೆ
ಹರಿಯುತ್ತಿರುವ ನೆತ್ತರ ಧಾರೆಯೊಂದಿಗೆ

ಅಂದು ಸಿಕ್ಕ ಸ್ವಾತಂತ್ರ್ಯಕ್ಕೆ
ಈಗ ಬೆಲೆಕಟ್ಟಲಾಗದೇ ಏಗುತ್ತಿದ್ದೇವೆ
ಮಾತನಾಡಿದರೆ ಹಣೆ ಸೀಳುವ
ಗುಂಡಿನೊಂದಿಗೆ
ನಾಲಿಗೆಯ ಕತ್ತರಿಸುವ ಬೆದರಿಕೆಯೊಂದಿಗೆ

ಯಾವತ್ತೋ ಸಿಕ್ಕ ಸ್ವಾತಂತ್ರ್ಯಕ್ಕೆ
ಈಗ ಉಸಿರುಗಟ್ಟಿ ವಿಲಗುಡುತ್ತಿದ್ದೇವೆ
ನಮ್ಮಿಷ್ಟದ ಆಹಾರ ತಿನ್ನುವುದಕ್ಕೂ
ಬೇರೆಯವರು
ಎಳೆಯುವ ಲಕ್ಷ್ಮಣರೇಖೆಯ ವಕ್ರತೆಯೊಂದಿಗೆ

ಮೊದಲಿನ ಸ್ವಾತಂತ್ರ್ಯದಲ್ಲೀಗ ಬಸವಳಿದಿದ್ದೇವೆ
ಹೆಣ್ಣೆಂಬ ಮೂದಲಿಕೆಗೆ
ಮಾತನಾಡಕೂಡದೆಂಬ ಕಟ್ಟಪ್ಪಣೆಗೆ
ಹೆಜ್ಜೆ ಹೆಜ್ಜೆಗೂ ಎದುರಾಗುವ ಅಲಿಖಿತ
ಕಾನೂನಿಗೆ...

ಹೋರಾಡಿದ್ದೂ ನಾವೇ... ಸತ್ತಿದ್ದೂ ನಾವೇ
ಅಂದು ಬ್ರಿಟಿಷರ ನೆರಳಲ್ಲಿ
ಬಚ್ಚಿಟ್ಟುಕೊಂಡವರೆಲ್ಲ
ಇಂದು ನಿಗ ನಿಗರಿ ರಾಷ್ಟ್ರಪ್ರೇಮದ ಪಾಠ
ಹೇಳುತ್ತಿದ್ದಾರೆ
ನಾವು ಮೌನವಾಗಿ ಕೇಳುತ್ತಿದ್ದೇವೆ, ಬಾಗಿದ
ಕುತ್ತಿಗೆಯೊಂದಿಗೆ.

ಶ್ರೀದೇವಿ ಕೆರೆಮನೆ




## ವೃದ್ಧಾಶ್ರಮಗಳು ಕೆಟ್ಟ ಮಕ್ಕಳ ಜನ್ಮದಾತರ ತವರು

ಮಾತೃ ದೇವೋ ಭವ ಪಿತೃ ದೇವೋ ಭವ ಎಂದು ತಂದೆ ತಾಯಿಯರಲ್ಲಿ ಕಾಣುತ್ತೇವೆ. ಅವರನ್ನೇ ದೇವರೆಂದು ಕರೆಯುತ್ತೇವೆ. ಶ್ರವಣ ಕುಮಾರನ ಮಾತಾ ಪಿತೃಭಕ್ತಿಯಿಂದ ಹೆತ್ತವರ ಅವಶ್ಯಕತೆ ಎಷ್ಟಿದೆ ಎಂಬುದು ತಿಳಿದು ಬರುತ್ತದೆ. ತಂದೆ ತಾಯಿಯರ ಸೇವೆ ಮಾಡಿದರೆ ಮಕ್ಕಳಿಗೆ ಸ್ವರ್ಗ ಲಭಿಸುತ್ತದೆ. ಅವರ ಮನಸ್ಸಿಗೆ ನೋವು ನೀಡಿದರೆ ರವರವ ನರಕವೇ ಪ್ರಾಪ್ತಿ, ಹರಿಹರ ಬ್ರಹ್ಮಾದಿಗಳೇ ತಂದೆ ತಾಯಿಗಳಿಗೆ ಶಿರಬಾಗಿ ಶರಣಾಗಿದ್ದಾರೆ. ತಾಯಿ ಪ್ರೀತಿಗೆ ಸಮನಾಗಿರುವುದನ್ನು ಆ ಸೃಷ್ಟಿಕರ್ತನಿಂದಲೂ ಸೃಷ್ಟಿಸಲು ಸಾಧ್ಯವಾಗಲಿಲ್ಲ. ಹೀಗೆಲ್ಲಾ ಹೇಳುವುದು ರೂಢಿಯಲ್ಲಿತ್ತು. ವಾಸ್ತವಾಂಶ ಹೀಗಿರುವಾಗ ಮಕ್ಕಳಿಗೆ ಹೆತ್ತವರೆ ಪ್ರಪಂಚ. ಆದರೆ ಆ ಮಕ್ಕಳಿಂದಲೇ ತಂದೆ ತಾಯಿಗಳು ಈ ಪ್ರಪಂಚವನ್ನೇ ಬಿಡುತ್ತಿರುವುದನ್ನು ಕಂಡರೆ ಸ್ವರ್ಗದಲ್ಲಿ ನರಕ ಸೃಷ್ಟಿಯಾದಂತಹ ಅನುಭವವಾಗುತ್ತದೆ.

ಹೆತ್ತ ಮಕ್ಕಳನ್ನು ತಾಯಿ ಕೂಲಿನಾಲಿ ಮಾಡಿ ಸಾಕಿ ಸಲಹುತ್ತಿದ್ದಾಳೆ. ಆದರೆ ಬೆಳೆದುನಿಂತ ಆ ಹತ್ತು ಮಕ್ಕಳಲ್ಲಿ ಒಬ್ಬನೂ ತಾಯಿಯನ್ನು ಸಾಕಲಾಗದೆ ವೃದ್ಧಾಶ್ರಮಕ್ಕೆ, ಬೀದಿಗೆ ತಳ್ಳುತ್ತಿದ್ದಾರೆ. ಇಂತಹ ಮತಿಹೀನ ಮೂರ್ಖ ಮಕ್ಕಳಿಗೆ ಏನು ಹೇಳಬೇಕು ? ಹೆಂಡತಿಯ ಮಾತು ಕೇಳಿದ ಗಂಡ ತನ್ನ ವಯೋವೃದ್ಧ ತಂದೆ ತಾಯಿಯನ್ನು ವೃದ್ಧಾಶ್ರಮಕ್ಕೆ ಸೇರಿಸುತ್ತಿದ್ದಾನೆ. ಗಂಡ ಹೆಂಡತಿ ಇಬ್ಬರೂ ಕೆಲಸದಲ್ಲಿ ಬ್ಯುಸಿ, ವೃದ್ಧ ಪಾಲಕರನ್ನು ವೃದ್ಧಾಶ್ರಮಕ್ಕೆ ಸೇರಿಸುತ್ತಿದ್ದಾರೆ.

ನಿಜಕ್ಕೂ ಇದು ನಾಗರಿಕ ಸಮಾಜ ತಲೆ ತಗ್ಗಿಸಬೇಕಾದ ಸಂಗತಿಯಾಗಿದೆ. ನಾವು ಮಗುವಾಗಿದ್ದಾಗ ತಂದೆ ತಾಯಿ ಕೈ ಹಿಡಿದು ಶಾಲೆಗೆ ಕರೆತಂದು ಬಿಡುವಾಗ ಅಲ್ಲಿ ಮಗ ಮಗಳ ಮುಂದೆ ಸಂತೋಷದಿಂದ ಕಷ್ಟಕಾರ್ಪಣ್ಯಗಳಿಲ್ಲದಂತೆ ಬದುಕಲಿ, ನಮ್ಮಂತೆ ಅವರ ಬಾಳು ಗೋಳಾಗುವುದು ಬೇಡ ಎಂಬ ಕಾಳಜಿ, ಪ್ರೀತಿ ಇರುತ್ತದೆ. ಆದರೆ ಬೆಳೆದು ಮದುವೆಯಾಗಿ ಹೆಂಡತಿ ಬಂದಮೇಲೆ ವಯಸ್ಸಾದ ತಂದೆ ತಾಯಿಯನ್ನು ಕೈ ಹಿಡಿದು ತಂದು ವೃದ್ಧಾಶ್ರಮಗಳಲ್ಲಿ ಬಿಟ್ಟು ತೊಲಗಿದರೆ ಸಾಕು, ಕಿರಿಕಿರಿ ವಟವಟಾ ಯಾವುದಕ್ಕೂ ಬಿಡಲ್ಲ ಎಂದು ಹಳೆ ಗಾಡಿಯನ್ನು ಗುಜರಿಗೆ ಹಾಕಿದಂತೆ ಅವರನ್ನು ನೂಕಿ ಬರುತ್ತಾರಲ್ಲ, ನಿಜಕ್ಕೂ ಅವರಿಗೆ ಮನುಷ್ಯತ್ವ ಇದೆಯಾ ? ಎಂಬ ಪ್ರಶ್ನೆ ಮನದಲ್ಲಿ ಹುಟ್ಟುತ್ತದೆ.

ತಮ್ಮ ಜನನಕ್ಕೆ ಕಾರಣರಾದವರನ್ನೇ ನೋಡಿಕೊಳ್ಳಲಾಗದವರು ಇನ್ನೇನು ನೋಡಿಕೊಳ್ಳಲು ಸಾಧ್ಯ ? ಇದರಿಂದ ದೇಶ ಏನು ನಿರೀಕ್ಷೆ ಮಾಡುವುದು ?

*ಸಿಂಧನೂರು* **ಸುರೇಶ ಹಡಪದ**

## ಮತ್ತೊಂದ ಗೋಪುರವ ಕಟ್ಟಿರುವರು ನೋಡಿರಯ್ಯ !!!!

ಮೊನ್ನೆ ಮೊನ್ನೆ ರಾತ್ರೋರಾತ್ರಿ ಕಟ್ಟಿದ್ದರಲ್ಲಾ, ಆಗಸವನ್ನೆ ನಾಚಿಸುವಂತಹ ಒಂದು ಗೋಪುರವ !! ಮಂದಿಯ ದರ್ಶನಕ್ಕೆ ನವೆಂಬರ್ ೮ರ ರಾತ್ರಿಯೇ




ತೆರೆದಿಡಲಾಯಿತು. ಅದರ ತುತ್ತತುದಿಯಲ್ಲಿ 'ಕಪ್ಪುಹಣ' ಎಂಬ ಚೀಲ ಒಂದನ್ನು ಕಟ್ಟಿಡಲಾಗಿತ್ತು. ಮಂದಿಗೆ ಬೆರಗೋ ಬೆರಗು ! ಪೂಜಾರಿಯ ಮಂತ್ರಗಳಲ್ಲಿ ಯಾವುದೊ ಕಾಣದ ಶಕ್ತಿ ಮಂದಿಯನ್ನು ಮೂಕರನ್ನಾಗಿ ಮಾಡಿತ್ತು. ನಮ್ಮ ಸಾಮಾಜಿಕ ದುಡಿಮೆಯಿಂದ ಬಂದ ಹಣ ಆ ಚೀಲದಲ್ಲೇ ಇರುವುದೆಂದು, ದೇಶದ ಪ್ರಧಾನಿಯೆಂಬ ಪೂಜಾರಿಯೇ ಅದನ್ನು ನಮಗೆ ದಕ್ಕಿಸಿಕೊಡುವಲ್ಲಿ ಮುಂಚೂಣಿಯಲ್ಲಿರುವವರೆಂದು, ನಾವು ಅದಕ್ಕೆ ಉಘೇ ಎನ್ನಲೇಬೇಕೆಂದು ಪೂಜಾರಿಯ ಹಿಂಬಾಲಕ ಸೈನ್ಯ ಬೊಬ್ಬೆ ಇಟ್ಟಿತು. ಆ ಗೋಪುರದ ತುತ್ತತುದಿಯಲ್ಲಿರುವುದು 'ಕಪ್ಪುಹಣವೇ' ಎಂದು ಪೂಜಾರಿಗೆ ಖಚಿತಪಡಿಸಲು ಸ್ವತಃ ಭಾರತದ ಇಡೀ ದುಡಿಯುವ ಜನತೆ 'ಬ್ಯಾಂಕ್' ಎಂಬ ಕಟ್ಟಡದ ಬಳಿಹೋಗಿ ಹನುಮಂತನ ಬಾಲದಂತೆ ಬೆಳೆದ ಸಾಲುಗಳಲ್ಲಿ ದಿನವೆಲ್ಲಾ ನಿಂತು, ಅವರ ಬಳಿ ಕಪ್ಪು ಹಣವಿಲ್ಲವೆಂದು, ಇರುವುದು ಬೆವರಿಳಿಸಿ ದುಡಿದ, ಕಷ್ಟಕಾಲಕ್ಕೆಂದು ಅಲ್ಪ–ಸ್ವಲ್ಪ ಕೂಡಿಟ್ಟ ಹಣವೆಂದು, ಇದ್ದ ಹಣವನ್ನು ಬ್ಯಾಂಕಿಗೆ ಹಾಕಿ ಗಣಕಯಂತ್ರದ ಮೂಲಕ ಸಾಬೀತುಪಡಿಸಬೇಕಾಯಿತು. ಮಂದಿಯಲ್ಲಿ ಯಾರೊ ಒಬ್ಬ, "ಪನಾಮ ಪೇಪರ್ಸ್ ಎಂಬುದರಲ್ಲಿ ಬಯಲಾಗಿದೆಯಲ್ಲಾ, ಅದರಲ್ಲಿ ಕಪ್ಪುಹಣವುಳ್ಳ ಮಂದಿಯೇ ಇರುವುದು ಸಾಕ್ಷಿ ಇದೆಯಲ್ಲಾ ? ನಾವ್ಯಾರು ಅದರಲ್ಲಿ ಇಲ್ಲ" ಎಂದ ಕೂಡಲೆ ಪೂಜಾರಿಯ ಹಿಂಬಾಲಕರು ಅವನನ್ನು ತೋರಿಸಿ ಮಂದಿಗೆ 'ಇವನು ದೇಶದ್ರೋಹಿ' ಎಂದರು. ದೇಶದ್ರೋಹಿಗಳಾಗಲು ಇಚ್ಛಿಸದೆ, ದೇಶದ ಹಿತ ಬಯಸಿ ಮಂದಿ ಸುಮ್ಮನಾದರು. ದಿನಗಳು ಉರುಳಿದವು, ಮಂದಿ ಸಾವು–ನೋವು ಅನುಭವಿಸಿದರು, ತಿಂಗಳುಗಳು ಹಿಂದೆ ಸರಿದವು, ಕಪ್ಪುಹಣದ ಚೀಲವೇ ಕಾಣದೆ, ಪೂಜಾರಿ ತೋರಿಸಿದ್ದು 'ಗಾಳಿಗೋಪುರ', ಮರುಳಾದದ್ದು ನಾವೆಂದು ಮಂದಿ ಸುಮ್ಮನಾದರು.

ಈಗ ಮತ್ತದೇ ರಾತ್ರೋರಾತ್ರಿ ಕಟ್ಟಿರುವರಲ್ಲಾ ಮತ್ತೊಂದು ಗೋಪುರವ ! ಎಂತಹ ಧೀರ ಹೆಜ್ಜೆ ! ಅರೆ, ಈಗಲೂ ತುತ್ತ ತುದಿಯಲ್ಲಿ ನೇತಾಡುತ್ತಿರುವುದು ಮತ್ತದೇ 'ಕಪ್ಪುಹಣ'ವೆಂಬ ಚೀಲ. ಹಿಂದೆ ಆ ಗೋಪುರ ಕಟ್ಟಲು ಬಳಸಿದ್ದ, 'ದೇಶ', 'ದೇಶಪ್ರೇಮ', 'ದೇಶದ ಹಿತ' ಎಂಬ ಸಾಮಗ್ರಿಗಳನ್ನೇ ಬಳಸಿರುವರು. ತುಸು ವ್ಯತ್ಯಾಸವೆಂದರೆ 'ಒಂದೇ' ಎನ್ನುವುದನ್ನು ಸೇರಿಸಿರುವುದು. 'ಒಂದೇ ದೇಶ', 'ಒಂದೇ ನೀತಿ' ಇರಲಿ, ಈ ಗೋಪುರಕ್ಕೆ ಹಲವಾರು ವಿಶೇಷಗಳಿವೆ. ಇದಕ್ಕೆ, ರಾಜ್ಯ ಜಿಎಸ್‌ಟಿ, ಅಂತರರಾಜ್ಯ ಜಿಎಸ್‌ಟಿ ಮತ್ತು ಕೇಂದ್ರ ಜಿಎಸ್‌ಟಿ ಎಂಬ ಮೂರು ನಾಮಫಲಕಗಳಿದ್ದರೂ, ಇಲ್ಲಾ 'ಒಂದೇ' ಎಂದು ಬಿಂಬಿಸುವುದು. ಇದಕ್ಕೆ ೩%, ೫%, ೧೨%, ೨೮%, ಭೀಕರ ಅವಶ್ಯಕ್ಕೆಂದು ೪೦% ಎಂಬ ಐದು ಹೆದ್ದಾರಿಗಳಿದ್ದರೂ, ಇಲ್ಲ ಇರುವುದು 'ಒಂದೇ' ಎಂದು ಚಿತ್ರಿಸುವುದು. ಮತ್ತೊಂದು ವಿಶೇಷವೆಂದರೆ, ಇಡೀ ಗೋಪುರವನ್ನು ಮೂರು ಭಾಗಗಳನ್ನಾಗಿ ಮಾಡಿ, ಒಂದಕ್ಕೆ 'ಐಶಾರಾಮಿ ಸುಂಕ', ಇನ್ನೊಂದಕ್ಕೆ 'ಅತ್ಯಗತ್ಯ ವಸ್ತು ಸುಂಕ', ಮತ್ತೊಂದಕ್ಕೆ 'ಸುಂಕ ರಹಿತ' ಎಂಬ ಮೂರು ಮುಖ್ಯ ದ್ವಾರಗಳನ್ನು ಇಟ್ಟಿರುವುದು. ಇವುಗಳ ಅಡಿಯಲ್ಲಿ ಯಾವ ಯಾವ ಸರಕುಗಳು ಎಂದು ವಿಂಗಡಿಸಿದ ಬಗೆ ಹೇಗೆಂದು ತಿಳಿಯೋಣ.

ಉದಾಹರಣೆಗೆ, ೧. ಹೆಣ್ಣುಮಕ್ಕಳು ಮತ್ತು ಮಹಿಳೆಯರು ಈ ದೇಶದ ಸಂಸ್ಕೃತಿಯನ್ನು ಪ್ರಪಂಚಕ್ಕೆ ಸಾರಬೇಕು, ಇದಕ್ಕೆ ಬೇಕಾದ ಕುಂಕುಮ, ಬಳೆ, ಬಿಂದಿಗಳಿಗೆ ಯಾವುದೇ ಸುಂಕದ ಅವಶ್ಯಕತೆ ಇಲ್ಲ. ಆದರೆ ನೈಸರ್ಗಿಕವಾಗಿ ಬಂದಿರುವ ಋತುಚಕ್ರದ ಸಮಯದಲ್ಲಿ ಅವರ ಅತ್ಯವಶ್ಯಕವಾಗಿ ಮತ್ತು ಆರೋಗ್ಯ ಕಾಪಾಡುವಲ್ಲಿ ಅತ್ಯಗತ್ಯವಾಗಿ ಬೇಕಾದ ಸ್ಯಾನಿಟರಿ ಪ್ಯಾಡ್‌ಗಳು ಐಶಾರಾಮಿ ವಸ್ತು ಎಂದು ಕರೆದು ಅದಕ್ಕೆ ೧೨% ಸುಂಕ.

೨. ದೇಶದ ಮಿಲಿಯಾಂತರ ಜನರು, ಅದರಲ್ಲೂ ಮುಖ್ಯವಾಗಿ ಮಕ್ಕಳು ತಿನ್ನುವ ಬಿಸ್ಕತ್ ಐಶಾರಾಮಿ ಸರಕು, ಆದ್ದರಿಂದ ೧೮% ಸುಂಕ. ಅದೇ, ದೇಹದ ಅಗತ್ಯ ಬಯಕೆಯಲ್ಲದಿದ್ದರೂ ಚಿನ್ನದ ಬಿಸ್ಕತ್‌ಗೆ ಅತ್ಯಗತ್ಯವಸ್ತುವೆಂದು ಕರೆದು ೩% ಸುಂಕ.

ಅಂದ ಹಾಗೆ ಇವನ್ನೆಲ್ಲಾ ತೀರ್ಮಾನಿಸಿದವರು ಅದೇ ಪರಿಚಿತ ಪೂಜಾರಿ ಮತ್ತು ಹಿಂಬಾಲಕರೇ. ಇದನ್ನೆ ಜೂನ್ ೩೧ರ ರಾತ್ರಿ 'ಇದು ಅಭಿವೃದ್ಧಿಯ ಮಂತ್ರ, ಇದನ್ನು ಎಲ್ಲರೂ ಪಾಲಿಸಿದರೆ, ಎಲ್ಲೆಡೆ ಕಪ್ಪು ಚೀಲದ ಹುಡುಕಾಟದ ಅವಶ್ಯಕತೆಯೇ ಇಲ್ಲ' ಎಂದು ತಿಳಿಸಿರುವರು.

ಅರೇ, ಅಲ್ಲಿ ಮಂದಿಯ ಮಧ್ಯದಲೊಬ್ಬ ಎದ್ದು ಏನೋ ಹೇಳುತ್ತಿದ್ದಾನಲ್ಲಾ, 'ಇದು ಮತ್ತೊಂದು ಗಾಳಿ ಗೋಪುರ... ಈ ಬಾರಿ ಇದು ಸಣ್ಣಪುಟ್ಟ ವ್ಯಾಪಾರಿಗಳನ್ನು ಗುಡಿಸಿಹಾಕಿ ಮರೆಯಾಗಿಸುವ ಹುನ್ನಾರ'. ಇನ್ನೊಬ್ಬ, 'ಪರೋಕ್ಷ ತೆರಿಗೆ, ಬಡವರಿಂದ ಲೂಟಿ'. ಪೂಜಾರಿಯ ಹಿಂಬಾಲಕರು ಮತ್ತದೇ ಜೋರು ಧ್ವನಿಯಲ್ಲಿ ಘರ್ಜಿಸುತ್ತಿರುವರು ಈ 'ದೇಶದ್ರೋಹಿಗಳು' !!

*ಹೊಳವನಹಳ್ಳಿ* ***ನಿರ್ಮಲ ಹೆಚ್. ಎಲ್.***

ಜೂನ್ ೨೦೧೭ರ 'ಹೊಸತು' ಮುಖಪುಟ ಸಮಯೋಚಿತವಾಗಿದೆ, ಸಂಪಾದಕೀಯ ಮನ ಮಿಡಿಯುವಂತಿತ್ತು, ಇಂದಿನ ಪರಿಸ್ಥಿತಿಯ ಕೈಗನ್ನಡಿಯಂತಿದೆ. ಭಗವದ್ಗೀತೆಯ ವಿಚಾರ ಬಹಳ ಚೆನ್ನಾಗಿ ಅರ್ಥವಾಗುವಂತೆ ವಿವರಿಸಲಾಗಿದೆ. ಕನ್ನಡ ಶಾಲೆಗಳ ದುಃಸ್ಥಿತಿ ಕುರಿತ ಲೇಖನ ಇಂದು ಎಲ್ಲರೂ ಯೋಚಿಸುವಂತಿದೆ. ಸಂತೆಯ ಮೆರವಣಿಗೆ ಓದಿದಾಗ ಬಾಲ್ಯದ ನೆನಪಾಯ್ತು. ದೇವರ ಬಗ್ಗೆ ವಿಚಾರ ತಿಳಿಸಿದ ಪಾಷಾರವರಿಗೆ ನಮನಗಳು. ಪ್ರೊ॥ ಎಚ್ಚೆಸ್ಕೆ ಅವರ ಪ್ರೇರಣೆ ನೆನಪಾಯಿತು. ಹುಲಿಕಲ್ ಕಾಡಿನ ನೈಜ ಅನುಭವ ತಿಳಿಸಿದ ಸ್ವಾಮಿ ಅವರಿಗೆ ನಮನ ಹೇಳಲೇಬೇಕು. 'ಹೊಸತು' ಇದೇ ರೀತಿ ಪ್ರತಿ ತಿಂಗಳು ಹೊಸತನದಿಂದ ಮೂಡಿ ಬರಲೆಂದು ಆಶಿಸುತ್ತೇನೆ.

*ಮಡಿಕೇರಿ* ***ಪಾಂಡವಪುರ ಮೃತ್ಯುಂಜಯ***

ನೇರವಾಗಿ ರಾಷ್ಟ್ರಪತಿ ಭವನದ ಮುಂಭಾಗದ ಮುಖಪುಟವನ್ನೊಳಗೊಂಡ ಹೊಸತಿನ ಹೊಸ ಆವಿಷ್ಕಾರಕ್ಕೆ ಮೊತ್ತ ಮೊದಲ ನಮಸ್ಕಾರಗಳು.

ರಾಷ್ಟ್ರವಿಡೀ ಚರ್ಚಿಸುತ್ತಿರುವ ಮುಂದಿನ ರಾಷ್ಟ್ರಪತಿಗಳಾರಾಗಬಹುದು ಎಂಬ ಮುಖ್ಯ ಚಿಂತನೆಯ ಕುರಿತಾಗಿ ನೀವು ನೆನಪು ಮಾಡಿಕೊಟ್ಟಿದ್ದೀರಿ. ಈ ಕುರಿತಾಗಿ ಸಂಪಾದಕೀಯ ಬರಹದಲ್ಲಿ ಹಲವಾರು ವಿವರಣೆಗಳನ್ನು ನೀಡಿದ್ದರೂ ನಿಶ್ಚಿತವಾದ ಧೋರಣೆಗೆ ಮಣೆ ನೀಡಿದ ಹಾಗೆ ಕಂಡುಬರಲಿಲ್ಲ. ಅದು ಸಾಧುವೂ ಅಲ್ಲ. ಇಂತಹ ಉತ್ತಮ ನಡತೆಯನ್ನು ತೋರಿಸಿ ಕೊಟ್ಟಿದ್ದೀರಿ. ಬೌದ್ಧ ಧರ್ಮದ ಕುರಿತಾಗಿ ಹಲವರ ಹೇಳಿಕೆಗಳು ಒಳಹೊರ ಎಂಬ ಹಾಗೆ ಈ ಸಂಚಿಕೆಯಲ್ಲಿ ಕಾಣಬರುತ್ತವೆ. ಇದೂ ಕೂಡ ಉತ್ತಮ ಬೆಳವಣಿಗೆಯೇ. ಹೇಳಿಕೆಗಳು ಯಾವಾಗಲೂ ಪರವಾಗಿಯೇ ಇರಬೇಕೆಂಬುದನ್ನು ನೀವು ಬಯಸುವುದಿಲ್ಲ. ಹಾಗೆ ಬಯಸುವುದು ಸರಿಯಲ್ಲ. ನಮ್ಮದು ಪ್ರಜಾಪ್ರಭುತ್ವದ ರಾಷ್ಟ್ರ. ಇಲ್ಲಿ ಆಳುವವ ಆಳಿಸಿಕೊಳ್ಳುವವ ಎಂಬ ಭೇದಭಾವ ನಿಜಕ್ಕೂ ಸಲ್ಲದು ಎಂಬುದು ಪ್ರಜಾಪ್ರಭುತ್ವ ರಾಷ್ಟ್ರದ ಮುಖ್ಯ ಉದ್ದೇಶ. ಆದರೆ ನಮ್ಮಲ್ಲಿ ವಾಸ್ತವವಾಗಿ ನಡೆಯುತ್ತಿರುವುದೆಲ್ಲಾ ತಿರುಗು ಮುರುಗಾಗಿಯೆ ಇದೆ.

*ಕಾಸರಗೋಡು* ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

'ಹೊಸತು' ಪತ್ರಿಕೆಯ ಕೃಷಿ ಶ್ರಮಿಕರಿಗೆಲ್ಲ ನಮನಗಳು.

'ಜುಲೈ' ಮಾಸದ ಹೊಸತು ಅದ್ಭುತವಾಗಿ ಮೂಡಿಬಂದಿದೆ.

ಡಾ॥ ರಹಮತ್ ತರೀಕೆರೆ ಅವರ ಲೇಖನ "ತತ್ವಪದ ಸಂಪಾದನೆಯ ಅನುಭವಗಳು" ಮನೋಲ್ಲಾಸ ನೀಡುವುದಾಗಿದೆ. ಅವರೇ ಹೇಳುವಂತೆ "ತತ್ವಪದ ಸಾಹಿತ್ಯದ ಮುಖ್ಯ ಉದ್ದೇಶವೇ ಚೈತನ್ಯವನ್ನು ಕಂಡುಕೊಳ್ಳುವುದು" ಎಂದು. ಸೃಜನಶೀಲ ಚೈತನ್ಯಪೂರ್ಣಶೀಲರಾದ ರಹಮತ್‌ರು ಮಹತ್ತರ ಕೆಲಸ 'ಸೂಫಿ' ಸಾಹಿತ್ಯದ ಕುರಿತು ಮಾಡಿದ್ದಾರೆ, ಮಾಡುತ್ತಲೇ ಇದ್ದಾರೆ. 'ಜಮಖಂಡಿ'ಯ ಭಾಗದಲ್ಲಿಯ ತತ್ವಪದ ಗಾಯಕಿಯರನ್ನು ಮೆಚ್ಚಿ ತಲೆದೂಗಿದ್ದು ಸಂತಸದ ವಿಷಯ. ಬೆಳಗಾವಿ ಜಿಲ್ಲೆಯ 'ಹಾರುಗೇರಿ'ಯಲ್ಲಿ ಬರುವ ತತ್ವಪದಕಾರ 'ಅಲಭೈರಿ'ಯನ್ನು ಆಕಸ್ಮಿಕವಾಗಿ ಮರೆತಿರಬಹುದು. ಬಹುತೇಕ ತಮ್ಮ ಸಂಪುಟಗಳಲ್ಲಿ ಅವರಿಗೆ ಸ್ಥಾನ ಸಿಕ್ಕಿದ್ದರೆ ಮಹದಾನಂದದ ವಿಷಯ.

*ಕೂಡ್ಲಿಗಿ* ***ಡಾ॥ ಸಿ. ಮಂಜುನಾಥ***

**ದಕ್ಷಿಣ ಕನ್ನಡ – ಕೋಮು ಅಟ್ಟಹಾಸಕ್ಕೆ ಕೊನೆ ಎಂದು – ಹೇಗೆ ?**

ಶಾಂತಿ – ಸೌಹಾರ್ದತೆ, ಪ್ರೀತಿ–ವಿಶ್ವಾಸಗಳ ನೆಲೆವೀಡಾಗಿದ್ದ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆ ಈಗ ಕೋಮುದಳ್ಳುರಿಯಲ್ಲಿ ಬೇಯುತ್ತ ರಾಜ್ಯಕ್ಕೊಂದು ತಲೆನೋವಾಗಿ ಪರಿಣಮಿಸಿ ದೇಶದಲ್ಲಿ ರಾಜ್ಯದ ಶಾಂತಿ ಸೌಹಾರ್ದತೆಯ ಪ್ರತಿಷ್ಠೆಗೆ ಕುಂದು ತರುತ್ತಿದೆ. ಇದು ಕೇವಲ ದಕ್ಷಿಣ ಕನ್ನಡದವರು ಮಾತ್ರವೇ ಚಿಂತಿಸದೆ ಇಡೀಯ ಕರ್ನಾಟಕವೇ ಚಿಂತಿಸುವಂತೆ ಮಾಡಿದೆ.

ರಾಜ್ಯದಲ್ಲಿ ಕಾಂಗ್ರೆಸ್ ಸರ್ಕಾರ ಅಸ್ತಿತ್ವಕ್ಕೆ ಬಂದ ನಂತರ ೨೪ಕ್ಕೂ ಹೆಚ್ಚು ಬಿಜೆಪಿ ಹಾಗೂ ಆರ್.ಎಸ್.ಎಸ್. ಕಾರ್ಯಕರ್ತರ ಹತ್ಯೆಯಾಗಿದೆ ಎಂದು ಬಿಜೆಪಿಯ ಆರೋಪ. ಆದರೆ ರಾಜಕೀಯ ಹಾಗೂ ಸೈದ್ಧಾಂತಿಕ ಸಂಘರ್ಷಕ್ಕೆ ಒಟ್ಟು ೧೨ ಜನ ಬಿಜೆಪಿ ಹಾಗೂ ಆರ್.ಎಸ್.ಎಸ್. ಕಾರ್ಯಕರ್ತರ ಕೊಲೆಯಾಗಿದೆಯೆಂದು ಇದೇ ಮೂಲಗಳ ಹೇಳಿಕೆ. ಆರ್.ಎಸ್.ಎಸ್. ಮೂಲಗಳು ಹೇಳುವಂತೆ ಕಾಂಗ್ರೆಸ್ ಸರ್ಕಾರದ ಪ್ರಾರಂಭದ ಒಂದೂವರೆ ವರ್ಷದಲ್ಲಿ ಇಂತಹ ಯಾವುದೇ ಸೈದ್ಧಾಂತಿಕ ಕೊಲೆಗಳಾಗಿಲ್ಲ. ಇವೆರಡರಲ್ಲಿ ಯಾವುದು ನಿಜ? ತತ್ವ, ಸಿದ್ಧಾಂತ ಪ್ರತಿಪಾದಿಸುವ ಬಿಜೆಪಿ, ಆರ್.ಎಸ್.ಎಸ್.ಗಳು ಇಂಥ ದ್ವಂದ್ವ ಹೇಳಿಕೆಗಳ ಮೂಲಕ ರಾಜ್ಯಕ್ಕೆ ಯಾವ ಸಂದೇಶ ನೀಡಲು ಹೊರಟಿವೆ ? ಬೇರೆ ಕೋಮುಗಳವರ ಹತ್ಯೆಗಳು ಇವರೆಲ್ಲರ ಗಮನಕ್ಕೆ ಬರುವುದಿಲ್ಲ !

ಒಂದೆಡೆ ಚಿಕ್ಕಮಗಳೂರು–ಉಡುಪಿ ಸಂಸದೆ ಶೋಭಾ ಕರಂದ್ಲಾಜೆ ಅವರು ಕಾಂಗ್ರೆಸ್ ಏನೇ ಮಾಡಿದರೂ ಸುಮ್ಮನೆ ನೋಡಲು ದಕ್ಷಿಣ ಕನ್ನಡದವರೇನು ಷಂಡರೇ, ಅವರಿಗೆ ಪೌರುಷ ಇಲ್ಲವೆ, ಇಷ್ಟು ಗಲಭೆ ಆದರೂ ಸುಮ್ಮನಿರಲು ನಾವು ಪೌರುಷಹೀನರೇ ? ಎಂದು ಪ್ರಶ್ನಿಸುವ ಮೂಲಕ ಆಜ್ಯಕ್ಕೆ ತುಪ್ಪ ಸುರಿದಿದ್ದಾರೆ. ಇನ್ನೊಂದೆಡೆ ಬಿಜೆಪಿ ರಾಜ್ಯಾಧ್ಯಕ್ಷ ಯಡಿಯೂರಪ್ಪ ಅವರು ಕಾಂಗ್ರೆಸ್ ಆಡಳಿತದಲ್ಲಿ ೨೦ಕ್ಕೂ ಹೆಚ್ಚು ಕಾರ್ಯಕರ್ತರ ಹತ್ಯೆ ನಡೆದಿದ್ದು ದ.ಕ. ಸೇರಿ ಇತರೆಡೆ ಕೋಮು ಸಂಘರ್ಷವನ್ನು ಸರ್ಕಾರವೇ ಹುಟ್ಟುಹಾಕುತ್ತಿದೆ ಎಂದು ಆರೋಪಿಸಿದ್ದಲ್ಲದೆ ಕಲ್ಲಡ್ಕ ಪ್ರಭಾಕರ ಭಟ್ಟರನ್ನು ಬಂಧಿಸಿದರೆ ರಾಜ್ಯವೇ ಹೊತ್ತಿ ಉರಿಯುತ್ತದೆಂದು ಸರ್ಕಾರಕ್ಕೆ ಸವಾಲಿನ ಎಚ್ಚರಿಕೆ ಕೊಟ್ಟು ಕಾಂಗ್ರೆಸ್ ಸರ್ಕಾರದ ತಲೆಯ ಮೇಲೆ ಗೂಬೆ ಕೂರಿಸಿದ್ದಾರೆ. ಮತ್ತೊಂದೆಡೆ ಕೇಂದ್ರ ಸಚಿವ ಹಾಗೂ ಮಾಜಿ ಮುಖ್ಯಮಂತ್ರಿ ಡಿ. ವಿ. ಸದಾನಂದಗೌಡ ಅವರು ಕಾಂಗ್ರೆಸ್ ಆಡಳಿತ ವೈಫಲ್ಯ ಮುಚ್ಚಿಕೊಳ್ಳಲು ಕೋಮುಗಲಭೆಗೆ ಕುಮ್ಮಕ್ಕು ನೀಡುತ್ತಿದೆಯೆಂದು ಆರೋಪಿಸಿ ವಿವಾದದ ಸ್ವರೂಪವನ್ನು ಚಿಗುರಿಸಿದ್ದಾರೆ. ಮಗದೊಂದೆಡೆ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಕಾನೂನು ಕೈಗೆತ್ತಿಕೊಳ್ಳುವವರು ಯಾರೇ ಆದರೂ ಯಾವುದೇ ಧರ್ಮದವರಾದರೂ ನಿರ್ದಾಕ್ಷಿಣ್ಯವಾಗಿ ಕ್ರಮ ಕೈಗೊಳ್ಳುವಂತೆ ಪೊಲೀಸ್ ಅಧಿಕಾರಿಗಳಿಗೆ ಸೂಚಿಸಿದ್ದಾರಲ್ಲದೆ ಸಾಮರಸ್ಯ ಕದಡಿದರೆ ಕಠಿಣ ಕ್ರಮ ಎಂದು ಖಡಕ್ಕಾಗಿ ಎಚ್ಚರಿಸಿದ್ದಾರೆ. ಇನ್ನೊಂದೆಡೆ ಹಿರಿಯ ಪೊಲೀಸ್ ಅಧಿಕಾರಿಯೊಬ್ಬರು ಜನರು ಪೊಲೀಸರಿಗೆ ತಿರುಗಿ ಬಿದ್ದರೆ ಫೈರ ಓಪನ್ ಮಾಡಿ ಎಂದು ಪೊಲೀಸರಿಗೆ ಮೌಖಿಕ ಸೂಚನೆ ನೀಡಿದ್ದಾರೆ. ದಕ್ಷಿಣ ಕನ್ನಡ ಉರಿಯುತ್ತಿರುವಾಗ ಜನರ ಮಧ್ಯೆ ಇದ್ದು ಶಾಂತಿ ಕಾಪಾಡಬೇಕಾದ ಜವಾಬ್ದಾರಿ ಇರುವ ಆ ಭಾಗದ ಸಂಸದ ನಳೀನಕುಮಾರ ಕಟೀಲ ಸೋಮವಾರದಿಂದ ಶುಕ್ರವಾರದವರೆಗೆ ಸಂಸದೀಯ ನಿಯೋಗದೊಂದಿಗೆ ರಶಿಯಾ ಪ್ರವಾಸ ಕೈಕೊಂಡಿದ್ದಾರೆ. ಇದೆಲ್ಲವುಗಳನ್ನು ನೋಡಿದಾಗ ಶಾಂತಿ ಸೌಹಾರ್ದದ ಕರೆ ಯಾರೂ ನೀಡಿಲ್ಲವಲ್ಲ ಎಂದು ಖೇದವೆನಿಸದೆ ಇರದು.

ಸಂಸದ ಕಟೀಲ ಅವರ ರಷ್ಯ ಪ್ರವಾಸ ನಾಡಿಗೆ ಬೆಂಕಿ ಬಿದ್ದಾಗ ಪಿಟೀಲು ಬಾರಿಸುತ್ತಿದ್ದ ನೀರೊ ದೊರೆಯ ನೆನಪಾಗುತ್ತದೆ. ಯಡಿಯೂರಪ್ಪ, ಕರಂದ್ಲಾಜೆ, ಸದಾನಂದಗೌಡ ಅವರ ಹೇಳಿಕೆಗಳಲ್ಲಿ ಶಾಂತಿ ತರುವ ಯಾವ ಲಕ್ಷಣಗಳೂ ಇಲ್ಲದೆ ಅವು

ವಿವಾದವನ್ನು ತಣ್ಣಗಾಗಿಸುವ ಬದಲು ಪ್ರಚೋದಿಸುವಂತಿವೆ. ಮು.ಮಂತ್ರಿ ಸಿದ್ದರಾಮಯ್ಯ ಅವರ ಹೇಳಿಕೆ ಸರ್ಕಾರದ ಮುಖ್ಯಸ್ಥರಾಗಿ ಗಂಭೀರವಾಗಿ, ಕಟ್ಟುನಿಟ್ಟಾಗಿ ಎಚ್ಚರಿಸಿದ್ದಾರೆಯೇ ಹೊರತು ಅವರೂ ಶಾಂತಿಮಂತ್ರ ನುಡಿದಿಲ್ಲ. ಜನರು ಪೊಲೀಸರ ಮೇಲೆ ತಿರುಗಿಬಿದ್ದರೆ ಗುಂಡು ಹಾಕಿ ಎಂದು ಹೇಳಿರುವ ಹಿರಿಯ ಪೊಲೀಸ್ ಅಧಿಕಾರಿಯ ಸೂಚನೆ ನಾಗರಿಕ ಸರ್ಕಾರದ ಲಕ್ಷಣವೂ ಅಲ್ಲ, ಮಾನವೀಯತೆಯ ಸಂಕೇತವೂ ಅಲ್ಲ. ಗುಂಡಿಗೆ ಗುಂಡು, ಕ್ರೌರ್ಯಕ್ಕೆ ಪ್ರತಿ ಕ್ರೌರ್ಯ ಎಂದು ಸಾರಿದಂತಿರುವ ಈ ಸೂಚನೆಗೆ ದಕ್ಷಿಣ ಕನ್ನಡ ಯುದ್ಧ ಭೂಮಿಯಲ್ಲ ಎಂಬುದನ್ನು ಪೊಲೀಸರು ತಿಳಿದುಕೊಳ್ಳಬೇಕು. ಇಂಥ ಸೂಚನೆ ಆಳುವ ಸರ್ಕಾರಕ್ಕೆ ಕೆಟ್ಟ ಹೆಸರು ತರುತ್ತದೆಂಬುದನ್ನು ಮುಖ್ಯಮಂತ್ರಿಗಳು ಲಕ್ಷ್ಯದಲ್ಲಿರಿಸಿಕೊಳ್ಳಬೇಕು. ಚುನಾವಣಾ ವರ್ಷದಲ್ಲಿ ಇಂಥ ಮಾತನ್ನು ಹಿರಿಯ ಪೊಲೀಸ್ ಅಧಿಕಾರಿಗಳು ಹೇಳಿದ್ದು ಸರ್ಕಾರಕ್ಕೆ ಶೋಭೆ ತರುವ ವಿಚಾರ ಅಲ್ಲ ಎಂಬುದನ್ನು ಸರ್ಕಾರದಲ್ಲಿ ಇರುವವರು ಅರಿತುಕೊಳ್ಳಬೇಕು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ದಶಕಗಳ ಹಿಂದೆ ಆರ್‌ಎಸ್‌ಎಸ್, ಜನಸಂಘ, ನಂತರದ ಬಿಜೆಪಿಯ ನೆಲೆಯಾಗಿತ್ತು ಎನ್ನುವದರಲ್ಲಿ ಸಂದೇಹ ಇಲ್ಲ. ಆಗಿನ ದಿನಗಳಲ್ಲಿ ಜಿಲ್ಲೆಯಲ್ಲಿ ಕೋಮುಗಲಭೆ, ಹತ್ಯೆ ನಡೆದುದರ ಉದಾಹರಣೆಗಳು ಇಲ್ಲ. ಆಗೆಲ್ಲ ಜಿಲ್ಲೆ ಶಾಂತಿ, ಸೌಹಾರ್ದತೆಯ ಮಡಿಲಲ್ಲಿತ್ತು. ಆದರೆ ಇತ್ತೀಚಿನ ವರ್ಷಗಳಲ್ಲಿ ಜಿಲ್ಲೆಯ ಶಾಂತಿ, ಸಾಮರಸ್ಯದ ಚಿತ್ರಣವೇ ಬದಲಾಗಿರುವದು ಅಲ್ಲಿಯ ರಾಜಕೀಯ ವಾತಾವರಣದಲ್ಲಿಯ ಪರಿವರ್ತನೆಗೆ ಸಾಕ್ಷಿಯಾಗಿದೆ ಎನ್ನಬಹುದು. ಈಚಿನ ವರ್ಷಗಳಲ್ಲಿ ಜಿಲ್ಲೆಯ ರಾಜಕೀಯ ಅಧಿಕಾರ ಸಂಘ ಪರಿವಾರದ ಕೈ ತಪ್ಪಿ ಹೋಗಿ ಕಾಂಗ್ರೆಸ್ ಆಡಳಿತ ನಡೆದಿರುವದು ಬಿಜೆಪಿ ಹಾಗೂ ಸಂಘ ಪರಿವಾರದವರಲ್ಲಿ ಆತಂಕ ಮೂಡಿಸಿದೆ ಎನ್ನಬಹುದು. ಮುಂದೆಯೂ ಇದು ಹೀಗೆಯೇ ಮುಂದುವರೆದರೆ ಜಿಲ್ಲೆಯಲ್ಲಿ ಸಂಘ ಹಾಗೂ ಬಿಜೆಪಿ ಸಾಮ್ರಾಜ್ಯದ ಪತನವಾದೀತೆಂಬ ತಲ್ಲಣ ಅವರದಾಗಿರಬಹುದು. ಈ ಹಿನ್ನೆಲೆಯಲ್ಲಿಯೇ ಯಾವುದೊಂದು ನೆಪದಲ್ಲಿಯಾದರೂ ಜಿಲ್ಲೆಯ ಶಾಂತಿ ಸುವ್ಯವಸ್ಥೆ ಕದಡುವ ಹುನ್ನಾರ ನಡೆದಿರಬಹುದು. ಅಂತೆಯೇ ಗೂಂಡಾಗಿರಿ ಇಲ್ಲಿ ಮೊದಲಾಗಿರುವದನ್ನು ನೆನಪಿಸಿಕೊಳ್ಳಬೇಕು. ಗೋ ಸಾಗಾಣಿಕೆ, ಗೋಹತ್ಯೆ ತಡೆಯುವ ನೆಪದಲ್ಲಿ ಗೂಂಡಾಗಿರಿ ನಡೆಸಿದ ಯುವಜನರೇ ಆಗಾಗ ಇಲ್ಲಿ ಕೋಮು ಸಂಘರ್ಷಕ್ಕೆ ಕಾರಣರಾಗುತ್ತಿರುವದು ವಿಷಾದನೀಯ. ಕೆಲವು ವೈಯಕ್ತಿಕ ಪ್ರಕರಣಗಳೂ ಕೂಡ ಜಾತಿವಾದದ ಹಿನ್ನೆಲೆಯಲ್ಲಿ ರಂಗಾಗಿರುವದು ಕೋಮು ಬೆಂಕಿ ತನ್ನ ಕೆನ್ನಾಲಿಗೆ ಚಾಚುತ್ತಿರುವದಕ್ಕೆ ನಿದರ್ಶನ.

ಚೋದ್ಯವೆಂದರೆ ಕೋಮುದಳ್ಳುರಿಗೆ ಬಲಿಯಾದವರಲ್ಲಿ ಹಿಂದೂಗಳೂ ಇದ್ದಾರೆ, ಮುಸ್ಲಿಮರೂ ಇದ್ದಾರೆ. ಎರಡೂ ಧರ್ಮಗಳ ಯುವಕರೇ ಹತ್ಯೆಗೀಡಾಗಿ ಅವರ ಕುಟುಂಬಗಳವರು ಅನಾಥರಾಗಿದ್ದಾರೆ. ಇವರನ್ನು ಕೋಮುತನಕ್ಕೆ ಪ್ರಚೋದಿಸಿದವರು ಯಾವುದೇ ರಾಜಕೀಯ ಪಕ್ಷಗಳವರಿರಲಿ ಅವರು ಮಾತ್ರ ಹಾಯಾಗಿ ನಿರುಮ್ಮಳವಾಗಿದ್ದಾರೆ. ಯಾವ ಹಿಂದೂವೂ, ಯಾವ ಮುಸ್ಲಿಮನೂ, ಯಾವ ಕ್ರಿಶ್ಚಿಯನ್ನೂ ಕೋಮುಗಲಭೆಗಳು ಆಗಲಿ ಎಂದು ಆಶಿಸುವದಿಲ್ಲ. ಧರ್ಮ ಹಾಗೂ ರಾಜಕೀಯದ ಹೆಸರಿನಲ್ಲಿ ನಡೆಯುವ ಕುತಂತ್ರವೇ ರಾಜಕೀಯ ಲಾಭಕ್ಕಾಗಿ ಎನ್ನುವದರಲ್ಲಿ ಎರಡಿಲ್ಲ. ಹತ್ಯೆಗೀಡಾದವರ ಫೋಟೊಗಳನ್ನು ಚುನಾವಣಾ ಸಂದರ್ಭದಲ್ಲಿ ಸಾರ್ವಜನಿಕ ಸಭೆಗಳಲ್ಲಿಟ್ಟು ಶ್ರದ್ಧಾಂಜಲಿ ಅರ್ಪಿಸಿ ತಮ್ಮ ತಮ್ಮ ಪಕ್ಷಗಳಿಗೆ ಮತ ದೋಚುವದು ಈ ರಾಜಕಾರಣಿಗಳಿಗೊಂದು ಹವ್ಯಾಸವೇ ಆಗಿಬಿಟ್ಟಿದೆ. ಉದ್ರೇಕವಾಗಿ ಭಾಷಣ ಮಾಡುವವರಾಗಲಿ, ಅವರ ಮಕ್ಕಳು–ಖಾಸಾ ಸಂಬಂಧಿಕರು ಯಾರೂ ಬೀದಿಗೆ ಬರುವದೇ ಇಲ್ಲ. ಗಲಭೆಗಳಲ್ಲೂ ಇರುವದಿಲ್ಲ. ಚೂರಿ ಇರಿತಕ್ಕೂ ಒಳಗಾಗುವದಿಲ್ಲ, ಪೊಲೀಸರ ಗುಂಡೇಟಿಗೂ ಬಲಿಯಾಗುವದಿಲ್ಲ. ಸಾಯುವವರು ಬಡವರೇ, ಯಾವುದಕ್ಕೂ ಸಂಬಂಧಿಸಿರದ ಜನಸಾಮಾನ್ಯರೆ, ರಾಜಕೀಯ ರಕ್ಕಸರ, ಧರ್ಮಾಂಧರ ತೆವಲಿಗೆ ಬಲಿ ಯಾಗುವವರು ಇದೇ ಜನ ಎಂಬುದನ್ನು ಜನರು ತಿಳಿದುಕೊಳ್ಳಬೇಕು. ಅಂತೆಯೇ ಜನರು ಈ ರಾಜಕಾರಣಿಗಳನ್ನು, ಧರ್ಮಾಂಧರನ್ನು ಅರ್ಥ ಮಾಡಿಕೊಂಡು ಶಾಂತಿಯಿಂದ ಬಾಳುವದನ್ನು ಕಲಿಯಬೇಕಿದೆ.

ಜಾತಿವಾದಿಗಳು ಹಾಗೂ ಧರ್ಮಾಂಧರಿಂದಾಗಿ ದಕ್ಷಿಣ ಕನ್ನಡ ಜಿಲ್ಲೆ ಈಗ ಕೋಮುವಾದದ ಪ್ರಯೋಗಾಲಯವಾಗುತ್ತಿಯೆಂದು ಆಪಾದಿಸಲಾಗುತ್ತಿದೆ. ಇದು ನಿಜವೆನ್ನುವಂತೆ ಅಲ್ಲಿ ಘಟನೆಗಳು ನಡೆಯುತ್ತಿವೆ. ಈ ಪ್ರಯೋಗಾಲಯವನ್ನು ಧ್ವಂಸಗೊಳಿಸಲು ಸರ್ಕಾರ ಏಕೆ ತುರ್ತುಕ್ರಮಗಳನ್ನು ಕೈಗೊಳ್ಳುತ್ತಿಲ್ಲ? ಕಟ್ಟುನಿಟ್ಟಿನ ಕ್ರಮಗಳನ್ನೇಕೆ ಜರುಗಿಸುತ್ತಿಲ್ಲ ? ಕೋಮುಸಂಘರ್ಷಕ್ಕೆ ಕಾರಣರಾಗಿರುವವರು ಯಾರೇ ಇರಲಿ, ಯಾವುದೇ ಪಕ್ಷಗಳವರಿರಲಿ ಅವರ ಮೇಲೆ ಏಕೆ ಕ್ರಮ ಕೈಗೊಳ್ಳುತ್ತಿಲ್ಲ? ಪ್ರಚೋದನಕಾರಿ ಭಾಷಣ ಮಾಡುವ ರಾಜಕೀಯ ಪ್ರಮುಖರ ಮೇಲೆ ಯಾವ ಕ್ರಮ ಸರ್ಕಾರ ಜರುಗಿಸಿದೆ? ಇವಾವ ಪ್ರಶ್ನೆಗಳಿಗೂ ಸರ್ಕಾರದ ಬಳಿ ನಿಖರವಾದ ಉತ್ತರವಿಲ್ಲದಂತಿದೆ. ಕಟ್ಟುನಿಟ್ಟಿನ ಕ್ರಮ ಕೈಗೊಳ್ಳುವದಾಗಿ ಖಡಕ್ ಎಚ್ಚರಿಕೆ ನೀಡುವದರಿಂದಾಗಲಿ, ಓಪನ್ ಫೈರ ಎಂದು ಪೊಲೀಸರಿಗೆ ಸೂಚಿಸುವದಾಗಲಿ, ಪೊಲೀಸರನ್ನು ಮುಖ್ಯಮಂತ್ರಿಗಳು ತರಾಟೆಗೆ ತೆಗೆದುಕೊಳ್ಳುವದರಿಂದ ಆಗಲಿ ಅದರಿಂದೇನೂ ಪ್ರಯೋಜನವಾಗುವದಿಲ್ಲ ಎಂಬುದನ್ನು ಸರ್ಕಾರ ತಿಳಿದುಕೊಳ್ಳಬೇಕು. ಸಮಾಜ ಸ್ವಾಸ್ಥ್ಯ ಕೆಡಿಸುವ ಸಂಘಟನೆಗಳನ್ನು ನಿಷೇಧಿಸುವಂಥ ಕ್ರಮವನ್ನು ಕೂಡ ಸರ್ಕಾರ ಈವರೆಗೂ ತೆಗೆದುಕೊಂಡಿಲ್ಲ. ಇಂಥ ಸಂದರ್ಭಗಳಲ್ಲಿ ಜನರು ತತ್‌ಕ್ಷಣದ ಪರಿಣಾಮಕಾರಿ ಕ್ರಮಗಳನ್ನು ಸರ್ಕಾರದಿಂದ ನಿರೀಕ್ಷಿಸುತ್ತಾರೆ ಎನ್ನುವದನ್ನು ಕೂಡ ಸರ್ಕಾರ ಅರ್ಥೈಸಿಕೊಳ್ಳಬೇಕು.

ಕರಾವಳಿಗೇನಾಗಿದೆ? ಯಾಕೆ ಈ ರೀತಿ ಹೆಣಗಳು ಉರುಳುತ್ತಿವೆ ? ಕಾರ್ನಾಡ ಸದಾಶಿವರಾಯರು, ಬೆನಗಲ್ ನರಸಿಂಗರಾಯರು, ಹಾಜೀ ಅಬ್ದುಲ್ ಸೇಠ. ಶಿವರಾಮ ಕಾರಂತ, ಟಿ. ಎಮ್. ಎ. ಪೈ, ಬಿ. ಇದಿನಬ್ಬ, ಜನಾರ್ದನ ಪೂಜಾರಿ, ಬಿ. ಎ. ಹಸನಬ್ಬ, ಯು. ಟಿ. ಫರೀದ, ಡಾ. ವ್ಹಿ. ಎಸ್. ಆಚಾರ್ಯ ಅವರಂಥ ನಾಯಕರನ್ನು ನಾಡಿಗೆ ನೀಡಿದ ದಕ್ಷಿಣ ಕನ್ನಡ ಜಿಲ್ಲೆ ಏಕೆ ಇಂದು ನಲುಗಿ ಬಸವಳಿದಂತಾಗಿದೆ? ಕೋಮುವಾದದ ಪ್ರಯೋಗಾಲಯವಾಗಲು ಯಾರು ಹಾಗೂ ಏನು ಕಾರಣ ಎಂಬುದರ ಬಗ್ಗೆ ಸರ್ಕಾರ ನಾಡಿನ ಜನತೆ ಚಿಂತನೆ ನಡೆಸಬೇಕಿದೆ. ಈ ದಿಶೆಯಲ್ಲಿ ಜನರು ಸರ್ಕಾರದೊಂದಿಗೆ ಕೈಜೋಡಿಸುವದು ಇಂದು ಅತ್ಯಗತ್ಯವಾಗಿದೆ.

***ಹುಕ್ಕೇರಿ*** — ***ಪ್ರಕಾಶ ದೇಶಪಾಂಡೆ***

## ಅಭಿನಂದನೆ...



ಖ್ಯಾತ ಸಂಶೋಧಕರೂ ಪ್ರಾಧ್ಯಾಪಕರೂ ಆದ ಡಾ॥ ಎಂ. ಚಿದಾನಂದಮೂರ್ತಿ ಅವರಿಗೆ ಈ ವರ್ಷದ ನೃಪತುಂಗ ಪ್ರಶಸ್ತಿ ನೀಡಲಾಗಿದೆ. 'ಹೊಸತು' ಅವರಿಗೆ ಅಭಿನಂದನೆ ಸಲ್ಲಿಸಲು ಹರ್ಷಿಸುತ್ತದೆ.

ವಿಶೇಷವಾಗಿ ಮೆಚ್ಚುಗೆಗೆ ಅರ್ಹವಾದ ವಿಷಯವೇನೆಂದರೆ ಅವರು ಪ್ರಶಸ್ತಿಯೊಡನೆ ನೀಡಲಾದ ಏಳು ಲಕ್ಷ ರೂಪಾಯಿಗಳನ್ನು ಸರ್ಕಾರಿ ಕನ್ನಡ ಶಾಲೆಗಳ ಮಕ್ಕಳಿಗಾಗಿ ವಿನಿಯೋಗಿಸಿದ್ದಾರೆಂಬುದು. ಅವರ ಹುಟ್ಟೂರು, ಚನ್ನಗಿರಿ ತಾಲೂಕಿನ ಹಿರೇಕೋಗಿಲೂರು. ಅಲ್ಲಿಯ ಸರ್ಕಾರಿ ಶಾಲೆಗೆ ನಾಲ್ಕು ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಬೆಂಗಳೂರಿನಲ್ಲಿ ತಮ್ಮ ನಿವಾಸದ ಸನಿಹದಲ್ಲಿರುವ ಅತ್ತಿಗುಪ್ಪೆಯ ಸರ್ಕಾರಿ ಶಾಲೆಗೆ ಒಂದು ಲಕ್ಷ ನೀಡಿದ್ದಾರೆ. ಇನ್ನೂ ಒಂದೂವರೆ ಲಕ್ಷವನ್ನು ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಹಂಚಿದ್ದಾರೆ. ಅವರ ಈ ಅನುಕರಣೀಯ ಕ್ರಿಯೆಗೆ ಮತ್ತೊಮ್ಮೆ ಅಭಿನಂದನೆಗಳು.

– ಸಂ.



## ಭಗವದ್ಗೀತೆ : ಒಂದು ಅವಲೋಕನ

# ೧೧. ವಿಭೂತಿ ಮತ್ತು ವಿಶ್ವರೂಪ ದರ್ಶನ

**ತಾನೇ ಸರ್ವಸ್ವ , ತನ್ನಿಂದಲೇ ಎಲ್ಲಾ, ಎಂಬುದನ್ನು ಪಟ್ಟ ಮಾಡುವ ಶ್ರೀ ಭಗವಾನ್ ಸ್ವಯಂಪ್ರೇರಿತ ಕರುಣೆಯಿಂದ ಮಾನವರಿಗೆ ಏನೆಲ್ಲಾ ಅಗತ್ಯವೋ ಅವನ್ನೆಲ್ಲಾ ಕೊಟ್ಟುಬಿಡಬಹುದಿತ್ತು. ಬೇರಾವ ಪ್ರವಾದಿಯೂ ಇಷ್ಟು ಮುಕ್ತವಾಗಿ ತನ್ನ ಮಹಾಮಹಿಮೆಯನ್ನು ಘೋಷಿಸಿಕೊಂಡಿದ್ದು ಮತಧರ್ಮಗಳ ಇತಿಹಾಸದಲ್ಲಿ ಕಾಣಸಿಗದು. ಅವೈಚಾರಿಕ ರಮಣೀಯವು ಗೀತೆಯಲ್ಲಿ ಸಾಂದ್ರವಾಗಿ ಚಿತ್ರಿತವಾಗಿರುವುದಕ್ಕೆ ಹತ್ತು ಮತ್ತು ಹನ್ನೊಂದನೆಯ ಅಧ್ಯಾಯಗಳು ಸಾಕ್ಷಿಯಾಗಿವೆ. ಅಸ್ತಿತ್ವದಲ್ಲಿರುವ ವಿಶ್ವದ ಅಗಾಧತೆ ಮತ್ತು ನಿಗೂಢತೆ ಮಾನವನ ಮನಸ್ಸನ್ನು ಎಷ್ಟು ಗಾಢವಾಗಿ ತಟ್ಟಬಲ್ಲವೆಂಬುದೂ ಈ ಅಧ್ಯಾಯಗಳಿಂದ ತಿಳಿದುಬರುತ್ತದೆ.**

**ಜಿ. ರಾಮಕೃಷ್ಣ**

ಗೀತೆಯಲ್ಲಿ ಅರ್ಜುನನು ಒಂದರ್ಥದಲ್ಲಿ ಜನಸಾಮಾನ್ಯರ ಪ್ರತಿನಿಧಿ. ಮೊದಲನೆಯ ಅಧ್ಯಾಯದಲ್ಲಿ ಅವನೆತ್ತಿರುವ ಪ್ರಶ್ನೆಗಳು ಅದನ್ನು ಸಮರ್ಥಿಸುತ್ತವೆ. ಅಸ್ತಿತ್ವದಲ್ಲಿರುವ ಸಾಮಾಜಿಕ ರೀತಿನೀತಿಗಳಿಗೆ ಯುದ್ಧದಿಂದ ಧಕ್ಕೆಯುಂಟಾಗುವ ಸಾಧ್ಯತೆಯುಂಟೆಂದು ಹೇಳುವಾಗ ಅವನು ವಿಶೇಷವಾಗಿ ಸಾಮಾಜಿಕ ಸಂರಚನೆಯನ್ನು ದೃಷ್ಟಿಯಲ್ಲಿರಿಸಿಕೊಂಡಿದ್ದಾನೆ. ಅದನ್ನವನು ವರ್ಣಸಂಕರವೆಂದು ಹೆಸರಿಸಿದ್ದಾನೆ. ನಾವು ಹಿಂದೆಯೇ ನೋಡಿರುವಂತೆ ಅಂದಿನ ಶತಮಾನಗಳಲ್ಲಿ ವರ್ಣವ್ಯವಸ್ಥೆಯ ಅಂಗೀಕಾರಾರ್ಹತೆಯನ್ನು ಪ್ರಶ್ನಿಸಿದ್ದವರುಂಟು. ಅವರಲ್ಲಿ ಬೌದ್ಧರು ಮತ್ತು ಲೋಕಾಯತರು ಪ್ರಮುಖರು. ಗೀತೆಯು ಅವರ ವಾದವನ್ನು ವಿಮರ್ಶಿಸುವ ಬದಲು ಪರಂಪರಾಗತ ಪದ್ಧತಿಯನ್ನು ಪೋಷಿಸುವ ಉದ್ದೇಶ ಹೊಂದಿದೆ. ಭಗವಾನನೇ ರಚಿಸಿರುವ ವರ್ಣವ್ಯವಸ್ಥೆಯು ಅನುಲ್ಲಂಘನೀಯವೆಂದು ಗೀತೆಯು ಜನಸಾಮಾನ್ಯರಿಗೆ ತಿಳಿವಳಿಕೆ ನೀಡಹೊರಟಿದೆ. ಆದ್ದರಿಂದ ಪದೇಪದೇ "ಸ್ವ–ಧರ್ಮ"ದ ಮಹತ್ವವನ್ನು ಒತ್ತಿಹೇಳಿದೆ. ಅದರಲ್ಲಿ ತರ್ಕವಿಲ್ಲ, ಚರ್ಚೆಯಿಲ್ಲ; ಅದು ಭಗವಾನನ ಆದೇಶ ಎಂಬುದೊಂದೇ ತೀರ್ಮಾನಕ್ಕೆ ಆಧಾರ. ಆ ಭಗವಾನನನ್ನು ಅತಿ ಎತ್ತರಕ್ಕೆ ಕೊಂಡುಹೋಗಿ ಅವನ ಅತಿಶಯ ಗುಣ, ಪ್ರಭೆ, ಔದಾರ್ಯ, ಮುಂತಾದುವನ್ನು ರಂಜನೀಯವಾಗಿಸುವುದು ಅವಶ್ಯಕ. ಅವನನ್ನು ಓಲೈಸುವ ಪರಿಯನ್ನು ೯ನೆಯ ಅಧ್ಯಾಯವು ಬೋಧಿಸಿದೆ. ಭಗವಾನನು ಅತ್ಯಂತ ಅಸಾಧಾರಣನಾದ ಮೇರು ವ್ಯಕ್ತಿ, ಅವನ ಸರ್ವಾಂಗೀಣ ವ್ಯಾಪ್ತಿಯು ಅತಿ ವಿಶಾಲವಾದ್ದು, ಅವನ ಪ್ರಾತಿನಿಧ್ಯವು ಸರ್ವತೋಮುಖವಾದ್ದು, ಎಂಬಿತ್ಯಾದಿಯಾಗಿ ಕಿವಿ ಮತ್ತು ಕಣ್ಣುಗಳಿಗೆ ಕೋರೈಸುವ ರೀತಿಯಲ್ಲಿ ಅವನ ಅತಿಮಾನುಷತ್ವವನ್ನು ಒತ್ತಿ ಹೇಳಬೇಕು. ಆಗ ಬಹುಶಃ ಜನಸಾಮಾನ್ಯರು ಸಾಮಾಜಿಕ ಸಂರಚನೆಯ ಬಗ್ಗೆ ತಕರಾರೆತ್ತದೆ ಭಗವಾನನ ಕೃಪಾಕಟಾಕ್ಷಕ್ಕೆ ಒಳಗಾಗಲು ಕಾತುರದಿಂದ ಮತ್ತು ದಂಗುಬಡಿದವರಂತೆ ಸಾಲುಗಟ್ಟಿ ನಿಂತಾರು, ಸ್ವ–ಧರ್ಮದ ಆಚರಣೆಯನ್ನು ಮೂಕರಾಗಿ ಅನುಸರಿಸಿಯಾರು. ಅಂದರೆ, ಅವರ ಮನಸ್ಸನ್ನು ಗೆಲ್ಲಲು ಗೀತೆಯ ಕರ್ತೃವು ಭಗವಾನನನ್ನು ಆಯುಧವನ್ನಾಗಿ ಮಾಡಿಕೊಂಡು, ಆಣತಿಗಳನ್ನು ಶಿರಸಾ ವಹಿಸಿ ಪಾಲಿಸುವಂತಹ ಪ್ರಜ್ಞೆಯನ್ನು ಅವರ ತಲೆಗೆ ತುಂಬಬೇಕಾಗಿದೆ. ಅದು ಗೀತೆಯ ಬ್ರಹ್ಮಾಸ್ತ್ರವೆಂದರೂ ಆದೀತು. ಡೋಲಾಯಮಾನ ಮನಸ್ಸಿನವರು, "ಪಾಪಯೋನಿಗಳು", ಸ್ವ–ಧರ್ಮದ ಸುಳ್ಳು ಶ್ರೇಷ್ಠತೆಯನ್ನು ಸುಖಾಸುಮ್ಮನೆ ಸ್ವೀಕರಿಸುವುದಿಲ್ಲ. ಆದ್ದರಿಂದ, ಅರ್ಜುನನ ಮುಖೇನ ಜನಸಮುದಾಯಕ್ಕೆ ಮತ್ತಷ್ಟು ಉಪದೇಶ ನೀಡಲು ಗೀತೆಯು ಮುಂದಿನ ಎರಡು ಅಧ್ಯಾಯಗಳನ್ನು (೧೦ ಮತ್ತು ೧೧) ಮೀಸಲಿರಿಸಿದೆ.

ಅನುಗ್ರಹ ತೋರುವ ಮೃದು ಮಾತಿನಿಂದ ೧೦ನೆಯ ಅಧ್ಯಾಯವು ಆರಂಭವಾಗುತ್ತದೆ : "ನಾನು ನಿನ್ನ ಹಿತಾಕಾಂಕ್ಷಿ , ಅದರಿಂದಾಗಿ ಇನ್ನು ಕೆಲವು ವಿಷಯಗಳನ್ನು ತಿಳಿಸಲು ಇಚ್ಛಿಸುತ್ತೇನೆ. ನನ್ನ ಗರಿಮೆಯನ್ನು ದೇವತೆಗಳು ಮತ್ತು ಋಷಿಗಳು ಸಹ ಪೂರ್ತಿಯಾಗಿ ತಿಳಿದಿಲ್ಲ" (೧೦.೧–೨). ಅದನ್ನು ಭಗವಾನ್ ಅರ್ಜುನನಿಗೆ (ಅಂದರೆ, ಜನಸಮುದಾಯಕ್ಕೆ) ಅರುಹಲು ಆಶಿಸುತ್ತಾನೆ. ಎಂತಹ ಕಾರುಣ್ಯದ ಖನಿ, ಅಲ್ಲವೆ ? ಆ ದೇವತೆಗಳಿಗೆ ಮತ್ತು ಮಹರ್ಷಿಗಳಿಗೆ ಸಹ ಭಗವಾನನೇ ಮೂಲಾಧಾರ (೧೦.೨ : ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ). ಆ ಆದಿ ಸೃಷ್ಟಿಕರ್ತನು ಸ್ವತಃ ಹುಟ್ಟು ಇಲ್ಲದವನು, ಎಲ್ಲ ಲೋಕಗಳಿಗೂ ಅವನೇ ಪರಿಪಾಲಕ. ಅದನ್ನು ತಿಳಿದು ಮೌಢ್ಯದ ನಿವಾರಣೆ ಮಾಡಿಕೊಂಡವನು ಪಾಪಗಳಿಂದ ಮುಕ್ತನಾಗುತ್ತಾನೆ (೧೦.೩ : ... ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ). ಎಲ್ಲವನ್ನೂ ಸೃಷ್ಟಿಸಿದ ಈ ಭಗವಾನ್ ಪಾಪಗಳನ್ನೇಕೆ ಸೃಷ್ಟಿಸಿದನೆಂಬ ಮರುಪ್ರಶ್ನೆಯನ್ನು ಗೀತೆ ಎತ್ತುವುದಿಲ್ಲ. ಅವನ್ನು ಸೃಷ್ಟಿಸಿಲ್ಲದಿದ್ದರೆ ಮಾನವನಿಗೆ ಜಂಜಾಟಗಳೇ ಇರುತ್ತಿರಲಿಲ್ಲವಲ್ಲ ! ಉಹುಂ, ಅವನ್ನವನು ಸೃಷ್ಟಿಸಬೇಕು, ಆಮೇಲಿಂದ ಮಾನವ ಅವುಗಳಿಂದ ಮುಕ್ತನಾಗಬೇಕು. ಅದಕ್ಕೆ ಮತ್ತೆ ಅವನನ್ನೇ ಆಶ್ರಯಿಸಬೇಕು.

ತತ್ತ್ವಶಾಸ್ತ್ರ ಗ್ರಂಥವಾಗಿದ್ದರೆ ಗೀತೆಯು ಆ ಪ್ರಶ್ನೆಯನ್ನು ಎತ್ತಿರುತ್ತಿತ್ತು; ಆದರೆ ಗೀತೆಯು ಮತಧರ್ಮ ಸಂಹಿತೆ. ಆದ್ದರಿಂದ ಏನೆಲ್ಲಾ ಭಗವಾನನಿಂದ ಆವಿರ್ಭವಿಸಿತೆಂದು ಹೇಳಲು ಗೀತೆಯು ಉಪಕ್ರಮಿಸುತ್ತದೆ. ಬುದ್ಧಿ ಮತ್ತು ಜ್ಞಾನ ಅವನಿಂದ ಹೊಮ್ಮಿವೆ. ಬುದ್ಧಿಯು ಜ್ಞಾನ ಪಡೆಯಲು ಸಾಧನ. ಈ ಪದ್ಯದ ಭಾಷ್ಯದಲ್ಲಿ ಶಂಕರಾಚಾರ್ಯರು "ಅಂತಃಕರಣದ ಸೂಕ್ಷ್ಮಗಳೂ ಸೇರಿದಂತೆ ತಿಳಿವು ನೀಡುವ ಸಾಮರ್ಥ್ಯವಿರುವುದು ಬುದ್ಧಿ" (ಅಂತಃಕರಣಸ್ಯ ಸೂಕ್ಷ್ಮಾದಿ ಅರ್ಥಾವಬೋಧನ ಸಾಮರ್ಥ್ಯಂ) ಎನ್ನುತ್ತಾರೆ. ಇವಲ್ಲದೆ ಭಗವಾನನಿಂದ ಹೊಮ್ಮಿರುವ ಇತರ ಭಾವಗಳೆಂದರೆ ಕ್ಷಮೆ, ಸತ್ಯ, ಇಂದ್ರಿಯನಿಗ್ರಹ, ಶಾಂತಿ, ಸುಖ, ದುಃಖ, ಹುಟ್ಟು , ಇರುವಿಕೆ, ಭಯ, ಇತ್ಯಾದಿಗಳು (೧೦.೪–೫). ಅಂದರೆ, ಎಲ್ಲ ಮಾನಸಿಕ ಭಾವಗಳೂ ಅವನ ಕೊಡುಗೆಗಳೇ ಆಗಿವೆ. ಇಷ್ಟೊಂದು ಸಂಕಲನ – ವ್ಯವಕಲನಗಳ ಅಗತ್ಯವಿತ್ತೆ ? ಯಾವುದು ಶ್ರೇಷ್ಠ ಮತ್ತು ಅಪೇಕ್ಷಾರ್ಹ ಭಾವಗಳೋ ಅವನ್ನಷ್ಟೇ ಜೀವಿಗೆ ಕೊಟ್ಟುಬಿಟ್ಟಿದ್ದರೆ ಸಾಕಾಗಿರುತ್ತಿತ್ತಲ್ಲ ಎಂಬ ಪ್ರತಿಪ್ರಶ್ನೆ ಅಸಂಭವವಲ್ಲ. ಏಳು ಮಹರ್ಷಿಗಳನ್ನು ಮತ್ತು ನಾಲ್ಕು ಮನುಗಳನ್ನೂ ಅವನೇ ಸೃಷ್ಟಿಸಿದ್ದನಂತೆ. ನಾಲ್ಕು ಮನುಗಳೆಂದರೆ ಸಾವರ್ಣಿ, ಧರ್ಮ ಸಾವರ್ಣಿ, ದಕ್ಷ ಸಾವರ್ಣಿ ಮತ್ತು ಸಾವರ್ಣ ಎಂದು ಹೇಳಲಾಗಿದೆ. ಭಗವಾನನ ಇಂತಹ ವಿವರಣೆಗಳು ಬಹಳ ಪ್ರಶ್ನಾರ್ಹವಾದ ಐತಿಹ್ಯಗಳೆಂದು ಧಾರಾಳವಾಗಿ ಹೇಳಬಹುದು. ಆದರೆ ಗೀತೆಯ ಪ್ರಕಾರ ಅವು ಅವನ ವಿಭೂತಿಗಳು ಅಥವಾ ಮಹಿಮೆಗಳು. ಭಗವಾನನಲ್ಲಿ ಮನಸ್ಸು ಕೇಂದ್ರೀಕರಿಸುವವರು ಸದಾ ನಲಿಯುತ್ತಾರೆ, ತೃಪ್ತರಾಗಿರುತ್ತಾರೆ (೧೦.೯ : ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ। ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥). ಭಗವಾನನನ್ನು ಪ್ರೀತಿಯಿಂದ ಭಜಿಸುವವರಿಗೆ ಅದ್ಭುತವಾದ ಬುದ್ಧಿಯನ್ನು ಅವನು ಕರುಣಿಸುತ್ತಾನಂತೆ (೧೦.೧೦).

ಇದಾದ ನಂತರದ ಅವನ ಹೇಳಿಕೆಯು ಸ್ವಾರಸ್ಯವಾಗಿದೆ : "ಅಂತಹ ಭಕ್ತರ ಮೇಲಿನ ಅನುಕಂಪದಿಂದಾಗಿ (ಶಂಕರ ಹೇಳುವಂತೆ "ದಯೆಯ ಕಾರಣದಿಂದಾಗಿ") ಅವರ ಅಜ್ಞಾನದಿಂದ ಉಂಟಾಗಿರುವ ಕತ್ತಲೆಯನ್ನು ಬೆಳಕಿನಿಂದ ದೂರಮಾಡುತ್ತೇನೆ"

(೧೦.೧೧ : ತೇಷಾಮೇವ ಅನುಕಂಪಾರ್ಥಂ ಅಹಂ ಅಜ್ಞಾನಜಂ ತಮಃ। ನಾಶಯಾಮಿ ಆತ್ಮಭಾವಸ್ಥಃ ಜ್ಞಾನದೀಪೇನ ಭಾಸ್ವತಾ ॥). ಉದ್ಧಟತನವೆಂದು ತೋರುವ ಒಂದು ಪ್ರಶ್ನೆಯನ್ನು ಹಾಕಿಕೊಳ್ಳಬಹುದಲ್ಲವೆ ? ಭಕ್ತರ ಬಗ್ಗೆ ಅನುಕಂಪ ಇರುವ ಭಗವಾನನು ಅನುಕಂಪದ ಅಗತ್ಯವಿಲ್ಲದ ಸ್ಥಿತಿಯಲ್ಲಿ ಮಾನವರನ್ನು ಇರಿಸಿಬಿಡಬಹುದಿತ್ತಲ್ಲವೆ ? ಅಜ್ಞಾನದ ಕತ್ತಲನ್ನು ತುಂಬುವುದೇಕೆ, ಆಮೇಲೆ ಜ್ಞಾನದೀಪ ತರುವುದೇಕೆ ? ಇದೊಂದು ಮೂಲಭೂತವಾದ ಪ್ರಶ್ನೆ. ಮತಧರ್ಮಗಳು ಮತ್ತು ತತ್ತ್ವಶಾಸ್ತ್ರಗಳು ಇದಕ್ಕೆ ಸಮಂಜಸ ಉತ್ತರ ಕಂಡುಕೊಳ್ಳಲು ಶತಮಾನಗಳ ಕಾಲ ತಿಣುಕುತ್ತಾ ಬಂದಿವೆ. ಉತ್ತರ ರೂಪದಲ್ಲಿ ನಮಗೀಗ ಹತ್ತಾರು ಸಿದ್ಧಾಂತಗಳು ಲಭ್ಯವಿವೆ. ಭಾರತೀಯ ಕರ್ಮಸಿದ್ಧಾಂತವು ಅಂತಹ ಒಂದು ಉತ್ತರ. ಅದಕ್ಕೆ ಪುನರ್ಜನ್ಮದ ಕಲ್ಪನೆ ಅಗತ್ಯವಾಗುತ್ತದೆ. ಎಂದೋ ಮಾಡಿದ್ದೆನ್ನಲಾದ ತಪ್ಪಿಗೆ ಇನ್ನೊಂದು ಜನ್ಮದಲ್ಲಿ ಪರಿತಪಿಸಬೇಕು. ಹಾಗೆ ಪರಿತಪಿಸುವವರು ಯಾರು ? ಹಿಂದಿನ ಅವನ ತಪ್ಪಿಗೆ ಇಂದಿನ ನಾನೇಕೆ ಸಾಲ ತೀರಿಸಬೇಕು ? ಅದಕ್ಕೆ ಉತ್ತರವಾಗಿ 'ಆತ್ಮನ್' ಎಂಬ ಕಲ್ಪನೆಯನ್ನು ಕಟ್ಟಿಕೊಳ್ಳಬೇಕು. ಇಷ್ಟಾಗಿಯೂ ಪ್ರಪ್ರಥಮ ತಪ್ಪಿಗೆ ಕಾರಣ ಯಾರು ? ಅವನು(ಳು) ತಪ್ಪು ಮಾಡಲು ಪ್ರೇರೇಪಣೆ ನೀಡಿದ್ದು ಯಾರು ಮತ್ತು ಏಕೆ ? ಶಂಕರನಂಥವರು ಅದಕ್ಕೆ "ಮೂಲಾವಿದ್ಯೆ" ಎಂಬ ಇನ್ನೊಂದು ಕಲ್ಪನೆ ತರುತ್ತಾರೆ. ಆದರೂ ಪ್ರಶ್ನೆಯು ಪ್ರಶ್ನೆಯಾಗಿಯೇ ಉಳಿಯುತ್ತದೆ. ಕ್ರೈಸ್ತಧರ್ಮದಲ್ಲಿ ಈಡನ್‌ನಲ್ಲಿ ಆ್ಯಡಂ ಮತ್ತು ಈವ್ ಕಿತ್ತು ತಿನ್ನಬಾರದ ಸೇಬನ್ನು ಕಿತ್ತು ಮೊದಲ ಪಾಪಕ್ಕೆ ಗುರಿಯಾದರೆಂಬ ಪುರಾಣ ಕತೆಯನ್ನು ಹೆಣೆಯಲಾಗಿದೆ. ಹಾಗೆ ಕಿತ್ತದ್ದೇಕೆ ? ಹಾವಿನ ರೂಪದಲ್ಲಿ ಬಂದ ಸೈತಾನನು ಈವಳನ್ನು ಹಣ್ಣು ಕೀಳಲು ಒತ್ತಾಯಿಸುವಂತೆ ಮಾಡಿದ್ದರಿಂದ ಎಂಬುದು ಉತ್ತರ. ಸೈತಾನ ಹಾಗೇಕೆ ಮಾಡಿದ ? ಸ್ವರ್ಗದಲ್ಲಿ ಅವನು ದೇವರೊಡನೆ ಜಗಳ ಮಾಡಿ ಹೊರದಬ್ಬಲ್ಪಟ್ಟಿದ್ದುದರಿಂದ. ಪ್ರಶ್ನೆಗಳ ಸರಪಳಿಯು ನಿರಂತರ. ಅದಕ್ಕೆ ಕ್ರೈಸ್ತ ದೇವತಾಶಾಸ್ತ್ರವು "ಇಚ್ಛಾ ಸ್ವಾತಂತ್ರ್ಯ"ವನ್ನು (ಫ್ರೀಡಂ ಆಫ್ ವಿಲ್) ವ್ಯಕ್ತಿಗೆ ಆರೋಪಿಸಿದೆ. ಆ ಇಚ್ಛೆಯ ಪೂರೈಕೆಯು ಮುಂದಿನ ಎಲ್ಲ ಕಷ್ಟ–ಸುಖಗಳಿಗೆ ಕಾರಣ ಎಂದುಬಿಡಲಾಗುತ್ತದೆ. ಪತ್ತೇದಾರಿ ಕಾದಂಬರಿಗಳ ರಚನೆಯಲ್ಲಿ ಅಗ್ರಳೆನಿಸಿದ ಅಗಥಾ ಕ್ರಿಸ್ತಿ ತನ್ನೊಂದು ಕಾದಂಬರಿಯಲ್ಲಿ ಸ್ಪೇನಿನ ಒಂದು ಗಾದೆಯನ್ನು ಉದ್ಧರಿಸಿದ್ದಾಳೆ : "ನಿನಗೆ ಬೇಕಾದ್ದು ತೆಗೆದುಕೊ, ಆದರೆ ಅದಕ್ಕೆ ಬೆಲೆ ತೆತ್ತಬೇಕು, ಎಂದು ದೇವರು ಹೇಳುತ್ತಾನೆ." ಅಂತೂ ದೇವರೆನ್ನುವ ಈ ಮಹಾನುಭಾವ ಕಿತಾಪತಿ ಮಾಡುತ್ತಾನೆ, ಪರಿಹಾರ ಕಂಡುಕೊಳ್ಳಿರೆಂದು ಮಾನವರಿಗೆ ಆದೇಶಿಸಿ ಮಗುಮ್ಮಾಗಿ ಕುಳಿತುಬಿಡುತ್ತಾನೆ. ಭಗವಾನನಿಗೆ ಭಕ್ತರ ಮೇಲೆ ಅನುಕಂಪವಿದೆ, ಆದ್ದರಿಂದ ಭಕ್ತನಿಗೆ ಬಿಡುಗಡೆಯ ಮಾರ್ಗವಿದೆಯೆಂದು ಗೀತೆಯು ಪ್ರತಿಪಾದಿಸುತ್ತದೆ.

ಅರ್ಜುನನೇನು ಸಾಮಾನ್ಯನೆ ? ಸಾಮಾನ್ಯ ಜನ ಪ್ರಶ್ನಿಸಲು ಆರಂಭಿಸಿದರೆ ಅವರಿಗೆ ಸಮಜಾಯಿಷಿ ನೀಡುವುದು ಸುಲಭವಲ್ಲ. ಅರ್ಜುನನಿಗೆ ವಿದ್ವಾಂಸರು, ಋಷಿಗಳು, ಭಗವಾನರ ಬಗ್ಗೆ ಹೇಳಿರುವುದೆಲ್ಲಾ ಚೆನ್ನಾಗಿ ಗೊತ್ತು. ಅವನು ಹೇಳುತ್ತಾನೆ : "ಅಯ್ಯಾ ಕೇಶವ, ನೀನು ಹೇಳುತ್ತಿರುವುದೆಲ್ಲಾ ಸರಿಯೆಂದು ಒಪ್ಪೋಣ. ನಾರದ, ಅಸಿತ, ದೇವಲ, ವ್ಯಾಸ, ಇವರೆಲ್ಲಾ ನೀನು ಪರಬ್ರಹ್ಮ, ನಿನ್ನನ್ನು ಸೇರುವುದೇ ಅಂತಿಮ ಗುರಿ, ನೀನು ಶಾಶ್ವತ, ಸರ್ವವ್ಯಾಪಿ, ಎಂದೆಲ್ಲಾ ಹೇಳುತ್ತಾರೆ. ನಿನ್ನ ಅಮೋಘ ಚರಿತೆ ದೇವ–ದಾನವರಿಗೂ ತಿಳಿಯದು, ನೀನು ಮಾತ್ರವೇ ನಿನ್ನನ್ನು ಸಮಗ್ರವಾಗಿ ಬಲ್ಲೆ. ಆದ್ದರಿಂದ ಜಗತ್ಪತಿಯೇ, ನಿನ್ನ ಮಹಿಮೆಯ ಸಾರವನ್ನು ನೀನೇ ತಿಳಿಸಿಕೊಡು" (೧೦.೧೬ : ವಕ್ತುಮರ್ಹಸಿ ಅಶೇಷೇಣ ದಿವ್ಯಾ ಹಿ ಆತ್ಮ ವಿಭೂತಯಃ). ಅಂತೆಯೇ, "ನಿನ್ನನ್ನು ಕುರಿತು ಧ್ಯಾನಿಸಲು ಯಾವ ಯಾವ ಭಾವಗಳಲ್ಲಿ ನಿನ್ನನ್ನು ಪರಿಭಾವಿಸಿಕೊಳ್ಳಬೇಕು ?" (೧೦.೧೭).

ಜನಸಾಮಾನ್ಯರು ಅರ್ಜುನನೊಡನೆ ಹಳ್ಳಕ್ಕೆ ಬೀಳುತ್ತಾರೋ ಇಲ್ಲವೋ, ಆದರೆ ಅರ್ಜುನನಂತೂ ದೀನನಾಗಿಬಿಟ್ಟ. "ನಿನ್ನ ಯೋಗ ಮತ್ತು ವಿಭೂತಿ ಕುರಿತು ವಿಸ್ತಾರವಾಗಿ ಹೇಳು. ಎಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲ" (೧೦.೧೮ : ವಿಸ್ತರೇಣ ಆತ್ಮನೋ ಯೋಗಂ ವಿಭೂತಿಂ ಚ ಜನಾರ್ದನ। ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇ ಅಮೃತಂ ॥), ಎಂದ. ತನ್ನ ಶಿಷ್ಯರು, ಆಪ್ತರು ಮತ್ತು ರಾಜರು ಬುದ್ಧನನ್ನು ಪದೇಪದೇ ಕೇಳುತ್ತಿದ್ದರು, ತನ್ನ ಬಗೆಗೆ ಏನಾದರೂ ವಿಸ್ತಾರವಾಗಿ ಹೇಳಬೇಕೆಂದು. ಅವನು ತುಟಿ ಬಿಚ್ಚಲಿಲ್ಲ. ಗೀತೆಯ ಭಗವಾನ್ ಭಾರಿ ಮಾತುಗಾರ, ತನ್ನ ಚಮತ್ಕಾರಗಳ ಬಗ್ಗೆ ಅವನಿಗೆ ಭಾರಿ ಹೆಮ್ಮೆ. ಹೇಗೂ ಅವನೇ ಪರಬ್ರಹ್ಮ ನಲ್ಲವೆ ! ಯಾವ ಪ್ರವಾದಿಯೂ ಮಾತನಾಡಿಲ್ಲದ ರೀತಿಯಲ್ಲಿ ನಿರರ್ಗಳವಾಗಿ ತನ್ನ ಬಹುಮುಖೀ ವೈಭವಗಳನ್ನು ತೆರೆದಿಟ್ಟ. ಅವನು ಏನೇನಾಗಿದ್ದಾನೆ ಎಂಬುದನ್ನು ಒಂದೊಂದು ಕ್ಷೇತ್ರಕ್ಕೂ ಅನ್ವಯಿಸಿ ತಿಳಿಸಿದ. ಪ್ರತಿ ಕ್ಷೇತ್ರದಲ್ಲೂ ಉಚ್ಚತಮವಾದದ್ದು ಅವನು. ಒಂದೊಂದು ಕ್ಷೇತ್ರದಲ್ಲಿ ಒಂದೊಂದೇ ಉಚ್ಚಸ್ತರದ್ದಾದುದು ಏಕೆ, ಎಲ್ಲವೂ ಸಮಾನವಾಗಿ ಏಕೆ ಉಚ್ಚತಮವಾಗಲಿಲ್ಲ, ಎಂಬ ಪ್ರಶ್ನೆಗಳನ್ನು ಗೀತೆಯ ಕರ್ತೃವು ಕೇಳುವುದಿಲ್ಲ. ಜೊತೆಗೆ, ಒಂದೊಂದು ಕ್ಷೇತ್ರದಲ್ಲೂ ಅವನು ಏನೋ ಒಂದು ಆಗಿದ್ದಾನಲ್ಲ, ಅವನ್ನೇ ಏಕೆ ಅವನು ಆಯ್ಕೆ ಮಾಡಿಕೊಂಡ ? ಉದಾಹರಣೆಗೆ, ಆದಿತ್ಯರಲ್ಲಿ ಅವನು ವಿಷ್ಣು, ಆಕಾಶಜ್ಯೋತಿಗಳಲ್ಲಿ ಅವನು ಸೂರ್ಯ, ವೇದಗಳಲ್ಲಿ ಸಾಮವೇದ, ನಕ್ಷತ್ರಗಳಲ್ಲಿ ಚಂದ್ರ. ಸೂರ್ಯನಿಗಿಂತಲೂ ಪ್ರಖರವಾದ ಸೂರ್ಯ ಗಳಿವೆಯೆಂದು ಖಗೋಳಶಾಸ್ತ್ರಜ್ಞರು ಹೇಳುತ್ತಾರೆ, ಚಂದ್ರನು ನಕ್ಷತ್ರವಲ್ಲವೆಂದೂ ಅವರೆನ್ನುತ್ತಾರೆ. ಸ್ವಾರಸ್ಯವೇನೆಂದರೆ ಅವನು ತಾನು ಏನಾಗಿದ್ದಾನೆಂದು ಹೇಳುತ್ತಾನೋ ಅದೇ ಪ್ರಶಸ್ತ, ಅತ್ಯುತ್ತಮ. ಸಾಮವೇದದ ಬದಲು ಋಗ್ವೇದವೆಂದು ಹೇಳಿದ್ದರೆ ಗೀತೆಯ ವ್ಯಾಖ್ಯಾನಕಾರರು ಅದಕ್ಕೂ ಸಮರ್ಥನೆ ಒದಗಿಸಿರುತ್ತಿದ್ದರು ! ಸಾಮವೇದವು ಗಾನವಾದ್ದರಿಂದ ಅವನು ಅದನ್ನು ವೇದಗಳಲ್ಲಿ ಪ್ರಶಸ್ತವಾದುದೆಂದು ಭಾವಿಸಿದ್ದಿರಬೇಕು. ಆದರೆ ದೇವತೆಗಳಲ್ಲಿ ಅವನು ಇಂದ್ರನಂತೆ. ಬಹಳ ಪ್ರಶ್ನಾರ್ಹವಾದ ಆಯ್ಕೆ, ಏಕೆಂದರೆ ಇಂದ್ರನ ತುಡುಗು ಲೋಕಪ್ರಸಿದ್ಧ; ಶರೀರವನ್ನೆಲ್ಲಾ ಕಣ್ಣುಗಳಿಂದ ತುಂಬಿಕೊಳ್ಳುವ ಪೇಚಾಟಕ್ಕೆ ಸಿಲುಕಿಕೊಂಡ. ಅದಕ್ಕೆ ಮುಂಚೆ ಋಗ್ವೇದದಲ್ಲಿ ತನ್ನ ಲೈಂಗಿಕ ಸಾಮರ್ಥ್ಯವನ್ನು ಬಣ್ಣಿಸಿಕೊಂಡು ಮೆರೆದಾಡುತ್ತಿದ್ದ. ವರುಣನಾದರೂ ಆಗಿದ್ದರೆ ಗೌರವ ಉಳಿಸಿಕೊಂಡಿರುತ್ತಿದ್ದ, ಪಾಪ. ಇಂದ್ರಿಯಗಳಲ್ಲಿ ಅವನು ಮನಸ್ಸು ಆಗಿದ್ದಾನಂತೆ (೧೦.೨೨). ತರ್ಕಶಾಸ್ತ್ರದಲ್ಲಿ ಮನಸ್ಸನ್ನು ಹತ್ತು ದ್ರವ್ಯಗಳಲ್ಲಿ ಒಂದು ಎಂದು ಪರಿಗಣಿಸಲಾಗಿದೆ, ಸಾಮಾನ್ಯವಾಗಿ ಅದನ್ನು ಇಂದ್ರಿಯ ಎನ್ನುವುದಿಲ್ಲ. ಗೀತೆಯ ಕರ್ತೃವಿಗೆ ಗೌತಮನ "ನ್ಯಾಯಸೂತ್ರ" ಅಷ್ಟಾಗಿ ಪರಿಚಯವಿರಲಿಲ್ಲವೇನೊ ! ರುದ್ರರಲ್ಲಿ ಅವನು ಶಂಕರನಂತೆ ಮತ್ತು ಶಿಖರಗಳಲ್ಲಿ ಅವನು ಮೇರು (೧೦.೨೩). ಋಗ್ವೇದದ ರುದ್ರ ಮತ್ತು ಯಜುರ್ವೇದದ ಶಿವ ಸರ್ವಥಾ ಒಂದೇ ಅಲ್ಲ, ಅದು ಬೇರೆ ವಿಷಯ. ಶಿಖರಗಳ ವಿಷಯ ನೋಡುವು ದಾದರೆ ಮೇರುವನ್ನು ತಲುಪುವುದು ಸುಲಭ, ಎವರೆಸ್ಟ್ ತಲುಪುವುದು ಕಠಿಣ; ಆದರೆ ಮೇರುವಿನ ಶಿಖರಕ್ಕೆ ಹತ್ತುವಂತಿಲ್ಲ, ಎವರೆಸ್ಟ್ ಆದರೆ ಹತ್ತಲಡ್ಡಿಯಿಲ್ಲ. ಮರಗಳಲ್ಲಿ ಅವನು ಅರಳಿ ಮರ. ಇದರ ವೈಶಿಷ್ಟ್ಯವನ್ನು ಗೀತೆಯು ೧೫ನೆಯ ಅಧ್ಯಾಯದ ಮೊದಲ ಶ್ಲೋಕದಲ್ಲಿ ಪ್ರಸ್ತಾಪಿಸಿದೆ. ಅದನ್ನು ಮುಂದೆ ಕಾಣೋಣ. ದೇವರ್ಷಿಗಳಲ್ಲಿ ಅವನು ನಾರದ ಮತ್ತು ಸಿದ್ಧರಲ್ಲಿ ಅವನು ಕಪಿಲ (೧೦.೨೬). ನಾರದನಾಗ ಬೇಕಾದ್ದು ಅಗತ್ಯ, ಏಕೆಂದರೆ ಭಾರತೀಯ ಪುರಾಣಗಳಲ್ಲಿ ಅವನು ಆದಿಮ ಪತ್ರಕರ್ತ ! ತ್ರಿಮೂರ್ತಿಗಳ ಬಳಿ ಹೋಗಿ ಅವನು ನಿವೇದಿಸಿಕೊಳ್ಳುವುದುಂಟು: "ದೇವ, ನಿಮಗೆ ತಿಳಿಯದ್ದೇನಿದೆ ? ಆದರೂ ಒಂದು ಸಂಗತಿ ತಿಳಿಸಲಿಚ್ಛಿಸುತ್ತೇನೆ." ಹೀಗೆ ಹೇಳಿ ವರದಿಗಳನ್ನು ಒಪ್ಪಿಸುವ ಮಾಧ್ಯಮ ಮಿತ್ರ ಅವನು. ಆದರೆ ಕಪಿಲನನ್ನು "ಸಿದ್ಧ" ಎಂದು ಕರೆದಾಗ ತಮಿಳುನಾಡಿನ ಸಿದ್ಧ ಪರಂಪರೆಗೆ ಅವನನ್ನು ಸೇರಿಸುವಂತಿಲ್ಲ. ಇಲ್ಲಿ ಅವನು ಹುಟ್ಟಿನಿಂದಲೇ ಪಾರಮ್ಯವನ್ನು ಸಾಧಿಸಿರುವವನು ಎಂಬರ್ಥವನ್ನು ಶಂಕರರು ಕೊಟ್ಟಿದ್ದಾರೆ (ಜನ್ಮನಾ ಏವ ಧರ್ಮಜ್ಞಾನವೈರಾಗ್ಯೈಶ್ವರ್ಯಾತಿಶಯಂ ಪ್ರಾಪ್ತಾನಾಂ ಕಪಿಲೋ ಮುನಿಃ). ಭಗವಾನನು ಸಾಂಖ್ಯ ದರ್ಶನದ ಆದ್ಯಪ್ರವರ್ತಕ ಕಪಿಲನಂತೂ ಆಗಿರಲಾರ, ಏಕೆಂದರೆ ಗೀತೆಯ ಕಾಲಕ್ಕೆ ಸಾಂಖ್ಯವು ಆಸ್ತಿಕ ದರ್ಶನವಾಗಿರಲಿಲ್ಲ. ಅದು ಮೂಲತಃ ಭೌತವಾದೀ ದರ್ಶನ; ಅದನ್ನು ಸಹಿಸಲಾಗದ ನಮ್ಮ ಪರಂಪರೆಯು ಶಸ್ತ್ರಚಿಕಿತ್ಸೆ ನಡೆಸಿ ಅದನ್ನು ಆಸ್ತಿಕವನ್ನಾಗಿಸಿತು. ಅದರ ಚರಮಗೀತೆಯನ್ನು ಈಶ್ವರಕೃಷ್ಣನು ತನ್ನ 'ಸಾಂಖ್ಯ ಕಾರಿಕೆ'ಯಲ್ಲಿ ಹಾಡಿದ್ದಾನೆ ! ಮನುಷ್ಯರಲ್ಲಿ ಭಗವಾನನು ನರಾಧಿಪ (೧೦.೨೭), ಅಂದರೆ ರಾಜ. ರಾಜರಿಲ್ಲದ ಕಾಲದಲ್ಲಿ ಭಗವಾನನ ಈ ವೈಭವವು ಮುಕ್ಕಾಗಿಹೋಗಿದೆಯೇನೊ ! ರಾಜರಿರಬೇಕೆಂಬ ಲಾಲಸೆ ಇರುವವರು ಗೀತೆಯನ್ನು ಉದ್ಧರಿಸಿ ತಮ್ಮ ಆಗ್ರಹವನ್ನು ಮಂಡಿಸಲಡ್ಡಿಯಿಲ್ಲ. ಒಟ್ಟಿನಲ್ಲಿ, ಎಲ್ಲ ಜೀವಿಗಳ ಆದಿ, ಮಧ್ಯ ಮತ್ತು ಅಂತ್ಯವಾದ ಭಗವಾನ್ ಇವೆಲ್ಲಾ ಆಗಿದ್ದಾನೆಂದು ಗೀತೆ ಉಲ್ಲೇಖಿಸುತ್ತದೆ (೧೦.೨೧–೩೮) : ವಿಷ್ಣು, ರವಿ, ಮರೀಚಿ, ಶಶಿ, ಸಾಮವೇದ, ಇಂದ್ರ, ಮನಸ್ಸು, ಚೇತನಾ, ಶಂಕರ, ಕುಬೇರ, ಪಾವಕ (ಅಗ್ನಿ), ಮೇರು, ಬೃಹಸ್ಪತಿ, ಸ್ಕಂದ, ಸಮುದ್ರ, ಭೃಗು, ಓಂಕಾರ, ಅಶ್ವತ್ಥವೃಕ್ಷ, ನಾರದ, ಚಿತ್ರರಥ (ಸಂಗೀತಗಾರ), ಕಪಿಲ, ಉಚ್ಚೈಶ್ರವಸ್ (ಕುದುರೆ), ಐರಾವತ (ಆನೆ), ರಾಜ, ವಜ್ರ (ಆಯುಧ), ಕಾಮಧೇನು, ಕಂದರ್ಪ (ಮನ್ಮಥ),

ವಾಸುಕಿ (ಸರ್ಪ), ಅನಂತ (ಅದೂ ಸರ್ಪವೇ), ವರುಣ, ಅರ್ಯಮಾ (ಪಿತೃಗಳ ಪೈಕಿ), ಯಮ, ಪ್ರಹ್ಲಾದ (ರಾಕ್ಷಸರ ಪೈಕಿ), ಕಾಲ, ಸಿಂಹ, ಗರುಡ, ವಾಯು, ರಾಮ (ಶಸ್ತ್ರಧಾರಿಗಳ ಪೈಕಿ; ಗೀತೆಯು ವಾಲ್ಮೀಕಿ ರಾಮಾಯಣದ ಕಾಲದ ನಂತರದ್ದೆಂಬುದು ಇದರಿಂದ ಖಚಿತವಾಗುತ್ತದೆ.), ಮೊಸಳೆ, ಗಂಗಾ (ನದಿಗಳಲ್ಲಿ), ಅಧ್ಯಾತ್ಮ ವಿದ್ಯೆ, ವಾದ (ವಾದಮಾಡುವವರಲ್ಲಿ), ಅಕಾರ (ಅಕ್ಷರಗಳ ಪೈಕಿ), ದ್ವಂದ್ವ (ಸಮಾಸಗಳಲ್ಲಿ), ವಿಶ್ವತೋಮುಖ, ಮೃತ್ಯು; ಕೀರ್ತಿ, ಶ್ರೀಃ, ವಾಕ್, ಸ್ಮೃತಿ, ಬುದ್ಧಿಮತ್ತೆ, ಧೃತಿ, ಕ್ಷಮೆ (ಈ ಏಳು ಸ್ತ್ರೀಯರಲ್ಲಿ), ಬೃಹತ್ಸಾಮ, ಗಾಯತ್ರೀ (ಛಂದಸ್ಸು), ಮಾರ್ಗಶಿರ (ಮಾಸ), ವಸಂತ (ಋತು), ಜೂಜು, ಆಜ್ಞೆ, ಜಯ, ಯತ್ನ, ಸತ್ತ್ವ, ವಾಸುದೇವ (ವೃಷ್ಣಿ ವಂಶದವರಲ್ಲಿ), ಅರ್ಜುನ (ಪಾಂಡವರಲ್ಲಿ), ವ್ಯಾಸ, ಉಶನಸ್ (ಕವಿ), ದಂಡ (ಶಿಕ್ಷಿಸಲು), ನೀತಿ (ವಿಜಯಿಗಳಲ್ಲಿ), ಮೌನ (ಗುಟ್ಟು ರಕ್ಷಣೆಗೆ), ಜ್ಞಾನ.

ಇನ್ನು ಪಟ್ಟಿ ಬೆಳೆಸುವುದು ಬೇಡವೆಂದು ಕಡೆಗೆ ಭಗವಾನ್ ಹೇಳುತ್ತಾನೆ : "ಎಲ್ಲ ಪದಾರ್ಥಗಳಿಗೂ ಬೀಜ ನಾನು; ನನ್ನನ್ನು ದೂರೀಕರಿಸಿ ಯಾವ ಚರಾಚರ ವಸ್ತುವೂ ಇಲ್ಲ" (೧೦.೩೯). ಅವನ ಮಹಿಮೆಗೆ ಪಾರವಿಲ್ಲ (೧೦.೪೦ : ನಾಂತ್ಯೋऽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ). ಇಷ್ಟನ್ನೆಲ್ಲಾ ಕ್ರೋಢೀಕರಿಸಿ ಭಗವಾನ್ ಹೇಳುವುದಿದು : "ಮಹತ್ವ ಮತ್ತು ಜಯಪ್ರದವಾದುವು ಏನೆಲ್ಲಾ ಉಂಟೋ, ಅವುಗಳಲ್ಲೆಲ್ಲಾ ನನ್ನ ಪ್ರಾಬಲ್ಯದ ಅಂಶವಿದೆಯೆಂದು ತಿಳಿ" (೧೦.೪೧ : ಯದ್ಯತ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ। ತತ್ತದವಗಚ್ಛ ತ್ವಂ ಮಮ ತೇಜೋಂಶಸಂಭವಂ ॥). ಈ ಪದ್ಯವನ್ನು ಅದೆಷ್ಟು ಮಂದಿ ಅದೆಷ್ಟು ಸಂದರ್ಭಗಳಲ್ಲಿ ಉದ್ಧರಿಸುತ್ತಾರೋ ಕಾಣೆವು. ಕಾಲ್ಚೆಂಡಿನಾಟದಲ್ಲಿ ಕ್ರಿಸ್ಟಿನೋ ರೊನಾಲ್ಡೊ ಸಹ ಭಗವದಂಶ ಹೊಂದಿದವನೇ ಇರಬೇಕು ! ಇಷ್ಟಕ್ಕೂ ಭಗವಾನನು ಪೂರ್ತಿಯಾಗಿ ಬ್ರಹ್ಮಾಂಡದ ಸೃಷ್ಟಿಗೆ ತನ್ನನ್ನು ತಾನು ಮುಡುಪಾಗಿಟ್ಟಿಲ್ಲ. ಅವನ ಒಂದು ಅಂಶ ಮಾತ್ರ ಇಡೀ ಜಗತ್ತಿಗೆ ಆಕರ; ಉಳಿದದ್ದು ತನ್ನಲ್ಲಿ ಶೇಖರವಾಗಿ ಉಳಿದಿದೆ (೧೦.೪೨). ವಿಭೂತಿಯುಕ್ತವಲ್ಲದವನ್ನು ಸೃಷ್ಟಿಸಿರುವುದು ಸಹ ಆ ಭಗವಾನನೇ ಎಂಬುದನ್ನು ಗಮನಿಸಬಹುದು. ಅಂತಹ ಮಹಿಮೆಯಿಲ್ಲದ ವಸ್ತುಗಳು ಮತ್ತು ವ್ಯಕ್ತಿಗಳನ್ನು ಗೀತೆಯು ಅಪಮೌಲ್ಯಗೊಳಿಸಿಲ್ಲ.

ಭಗವಾನನ ವೈಭವ–ಮಹಿಮೆಗಳು ಅರ್ಜುನನನ್ನು ದಂಗಾಗಿಸಿರಬೇಕು, ಜನಸಾಮಾನ್ಯರಂತೂ ಮೂಗಿನ ಮೇಲಿಟ್ಟ ಬೆರಳನ್ನು ಕೆಳಗಿಳಿಸಿಲ್ಲ. ಇಷ್ಟನ್ನು ಕೇಳಿದ ಮೇಲೆ ಅರ್ಜುನನಿಗೆ ಭಗವಾನನ ಮಹಿಮೆಯನ್ನು ತನ್ನ ಕಣ್ಣುಗಳಿಗೆ ತುಂಬಿಸಿ ಕೊಳ್ಳುವಾಸೆ. ಹನ್ನೊಂದನೆಯ ಅಧ್ಯಾಯದ ವಸ್ತು ಅದು. ಯಾರನ್ನಾದರೂ ಮೂಕರನ್ನಾಗಿಸಿಬಿಡುವ ಅಧ್ಯಾಯ ಇದು. ಶರಣಾಗತಿಗೆ ಒಡಂಬಡುವ ಅರ್ಜುನನ ಮನಸ್ಸು ಒಂದು ರೀತಿಯಲ್ಲಿ ಜನಸಾಮಾನ್ಯರಿಗೆ ಭಗವಾನನ ಅಯಸ್ಕಾಂತ ಶಕ್ತಿಯನ್ನು ಬಿಂಬಿಸುತ್ತದೆ. ವಿಶ್ವದ ಸರ್ವಾಂಗೀಣತ್ವ ರೂಪವೆಂದರೆ ಭಗವಾನ್ ಎಂಬ ಭಾವವು ಈ ಅಧ್ಯಾಯದಲ್ಲಿ ಮನಮುಟ್ಟುವಂತೆ ಚಿತ್ರಿತವಾಗಿದೆ. ಎಷ್ಟೋ ವ್ಯಾಖ್ಯಾನಕಾರರು ಈ ಅಧ್ಯಾಯವು ಗೀತೆಯ ಮೂಲಭೂತ ಸಾರವನ್ನು ಪ್ರತಿಫಲಿಸುತ್ತದೆಯೆಂದು ಹೇಳಿರುವುದುಂಟು. ವಿಶ್ವ ಸಾಹಿತ್ಯದಲ್ಲಿ ಮೇಲ್ಮಟ್ಟದಲ್ಲಿ ಉಳಿಯುವಂತಹ ಕೆಲವು ಭಾಗಗಳು ಈ ಅಧ್ಯಾಯದಲ್ಲಿವೆ. ಸೌಂದರ್ಯ, ಕರಾಳತೆ, ಘೋರ ಭಾವ, ವಿಸ್ಮಯಕರ ಸ್ವರೂಪ, ಎಲ್ಲವೂ ಇಲ್ಲಿವೆ.

ಭಗವಾನನ ವಿಭೂತಿಯ ಅಗಾಧ ವ್ಯಾಪಕತೆಯನ್ನು ಕೇಳಿ ತಿಳಿದ ಅರ್ಜುನ ಈಗ ಅದನ್ನು ನೋಡಿ ಆನಂದಿಸಲು ಮುಂದಾಗುತ್ತಾನೆ. ಜನಸಾಮಾನ್ಯರಿಗೆ ಭಗವಾನನ ನೇರ ದರ್ಶನ ಮಾಡಿಸಲು ಗೀತೆಗೆ ಇದೊಂದು ಉತ್ತಮ ಅವಕಾಶ. ಅಲ್ಲದೆ, ಜಗತ್ತಿನ ಸೃಷ್ಟಿಗೆ ಅವನಲ್ಲಿಯ ಒಂದು ಅಂಶವನ್ನು ಮಾತ್ರ ತೊಡಗಿಸಲಾಗಿದೆಯೆಂದು ಭಗವಾನ್ ಹೇಳಿದ್ದಾನೆ; ಹಾಗಿದ್ದರೆ ಉಳಿದದ್ದು ಇನ್ನೆಷ್ಟು ಅಗಾಧವಿರಬೇಕು. ಅದನ್ನು ನೋಡಿ ತಿಳಿಯುವ ಕುತೂಹಲವು ಅಪ್ರಾಸಂಗಿಕವಲ್ಲ. ಪರಮಾತ್ಮನಲ್ಲಿ ಭಕ್ತಿಯ ಸಾಂದ್ರತೆಯು ಎಷ್ಟು ವಿಶಿಷ್ಟವಾದುದೆಂಬುದು ಗೀತೆಯ ನಂತರದ ಶತಮಾನಗಳಲ್ಲಿ ವಿಕಾಸಗೊಂಡ ಅಂಶ. ಭಕ್ತಿ ಯೋಗವೆಂಬ ಅಧ್ಯಾಯವು ಗೀತೆಯಲ್ಲಿ ವಿಶ್ವರೂಪ ದರ್ಶನವೆಂಬ ಈ ಹನ್ನೊಂದನೆಯ ಅಧ್ಯಾಯದ ಮುಂದಿನದೇ ಆಗಿದೆ.

ನೋಡಬೇಕೆಂಬ ಕುತೂಹಲವು ಜಾಗೃತವಾಗಿರುವ ಅರ್ಜನನಲ್ಲಿ ಒಂದು ಸಂಶಯವೂ ಇದೆ : ತಾನದನ್ನು ನೋಡಲು ಶಕ್ತನೋ, ಎಂದು. ಅದನ್ನು ಭಗವಾನನೇ ತೀರ್ಮಾನಿಸಬೇಕು. ಶಕ್ಯವೆಂದಾದರೆ ತೋರಿಸಬಹುದು (೧೧.೪ : ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ। ಯೋಗೇಶ್ವರ ತತೋ ಮೇ ತ್ವಂ ದರ್ಶಯ ಆತ್ಮಾನಮವ್ಯಯಂ ॥). ತೋರಿಸಿದರೆ, ಶಂಕರನು ಹೇಳುವಂತೆ, ಅರ್ಜುನನು "ಜ್ಞಾನೈಶ್ವರ್ಯ ಶಕ್ತಿಬಲವೀರ್ಯ ತೇಜೋಭಿಃ" ಸಂಪನ್ನವಾದ ಪುರುಷೋತ್ತಮನ ರೂಪವನ್ನು ಪ್ರತ್ಯಕ್ಷವಾಗಿ ಕಂಡು ಕೃತಾರ್ಥನಾಗಬಹುದು. ಅವನ ರೂಪವಾದರೋ ನೂರು, ಸಾವಿರ, ಹೀಗೆ ನಾನಾವಿಧವಾದ್ದು; ಅದರ ಬಣ್ಣಗಳೂ ಅಷ್ಟೇ ಬಹುಲ (೧೧.೫). ಅರ್ಜುನ ಏನೆಲ್ಲಾ ನೋಡಬಹುದು ? ಆದಿತ್ಯರು, ವಸುಗಳು, ರುದ್ರರು, ಇಬ್ಬರು ಅಶ್ವಿನಿ ದೇವತೆಗಳು, ಮರುತ್ತುಗಳು, ಇತ್ಯಾದಿಗಳನ್ನೆಲ್ಲಾ ಕಾಣಬಹುದು. ಇವೆಲ್ಲಾ ಋಗ್ವೇದ ಮತ್ತು ಇತರ ವೇದಗಳಲ್ಲಿ ಮೊದಲಿಗೆ ಚಿತ್ರಿತವಾದ ದೇವಗಣಗಳು. ಇಡೀ ಬ್ರಹ್ಮಾಂಡವೇ ಭಗವಾನನಲ್ಲಿ ಅಂತರ್ಗತವಾಗಿದೆ. ಅಷ್ಟು ಬೃಹತ್ತಾದ, ವೈಚಿತ್ರ್ಯಮಯವಾದ, ವಿಶ್ವರೂಪವನ್ನು ಸಾಮಾನ್ಯ ಕಣ್ಣುಗಳಿಂದ ನೋಡಲಾದೀತೆ ? ಆದ್ದರಿಂದ ಮೊದಲು ಭಗವಾನನು ಕುತೂಹಲಿ ಶರಣಾರ್ಥಿ ಅರ್ಜುನನಿಗೆ "ದಿವ್ಯವಾದ" ಕಣ್ಣುಗಳನ್ನು ಕೊಡಲು ಮುಂದಾಗುತ್ತಾನೆ (೧೧.೮). (ಅದೊಂದು ತರಹ "ತ್ರೀ–ಡಿ" ಸಿನಿಮಾದಂತೆ. ಅದಕ್ಕೆ ವಿಶಿಷ್ಟವಾದ ಕನ್ನಡಕ ಕೊಡುತ್ತಾರಲ್ಲ, ಹಾಗೆ).

ಅದೊಂದು ಅನನ್ಯವಾದ ದೃಶ್ಯ : ಅದೆಷ್ಟು ಮುಖಗಳು, ಕಣ್ಣುಗಳು, ಅದೆಷ್ಟು ಅದ್ಭುತವಾದ ನೋಟಗಳು, ಅದೇನು ದೈವೀ ಅಲಂಕಾರಗಳು, ಅವೆಷ್ಟು ಹೊಳಪಿನ ಆಯುಧಗಳು ! ಆ ಸ್ಫುರದ್ರೂಪಿ ದೈವಕ್ಕೆ ದಿವ್ಯಮಾಲೆಗಳು, ದಿವ್ಯಗಂಧ, ಅತ್ಯಾಶ್ಚರ್ಯ ಜನಕವಾದ ಪ್ರಭುವಿಗೆ ಅದೆಷ್ಟು ಮುಖಗಳು ! (೧೧.೧೧ : ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ। ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ॥). ಅದೆಂತಹ ಕಣ್ಣು ಕೋರೈಸುವ ಪ್ರಭೆ ! ಸಾವಿರ ಸೂರ್ಯರು ಒಂದೇ ಗಳಿಗೆಯಲ್ಲಿ ಅಂತರಿಕ್ಷದಲ್ಲಿ ತೋರಿಬಂದರೆ ಆ ಬೆಳಕು, ಕಾಂತಿ, ಎಷ್ಟು ಉಜ್ವಲವಾಗಿರಬಹುದು ! ಪುರುಷೋತ್ತಮನ ಕಾಂತಿಯು ಅದನ್ನು ಹೋಲುತ್ತದೆ, ಅದನ್ನು ಮೀರುತ್ತದೆ ಕೂಡ (೧೧.೧೨ : ದಿವಿ ಸೂರ್ಯಸಹಸ್ರಸ್ಯ ಭವೇತ್ ಯುಗಪತ್ ಉತ್ಥಿತಾ। ಯದಿ ಭಾಃ ಸದೃಶೀ ಸಾ ಸ್ಯಾತ್ ಭಾಸಃ ತಸ್ಯ ಮಹಾತ್ಮನಃ ॥).

ರಾಬರ್ಟ್ ಯುಂಗ್ಕ್ ಬರೆದಿರುವ ಒಂದು ಅಮೋಘವಾದ ಪುಸ್ತಕದ ಹೆಸರು "ಸಾವಿರ ಸೂರ್ಯರಿಗಿಂತಲೂ ಹೆಚ್ಚು ಪ್ರಕಾಶಮಾನವಾದ್ದು" ಎಂದಿದೆ. ಅದು ಮೊದಲು ಪ್ರಕಟಿತವಾದ್ದು ೧೯೫೬ರಲ್ಲಿ. ಆಂಗ್ಲಭಾಷಾ ಆವೃತ್ತಿ ೧೯೫೮ರಲ್ಲಿ ಬಂತು. ಆಮೇಲೆ ಹಲವು ಭಾಷೆಗಳಲ್ಲಿ ಅದು ನೂರಾರು ಮುದ್ರಣಗಳನ್ನು ಕಂಡಿದೆ. ಪುಸ್ತಕದ ಶೀರ್ಷಿಕೆಗೆ ಭಗವದ್ಗೀತೆಯ ಪದ್ಯವೇ ಮೂಲ. ಬರ್ಟ್ರಂಡ್ ರಸೆಲ್ ಆ ಗ್ರಂಥದ ಬಗೆಗೆ ನೀಡಿದ್ದ ಅಭಿಪ್ರಾಯ ಇದು : "ನಾನೋದಿರುವ ಪುಸ್ತಕಗಳಲ್ಲಿ ಇದೂ ಒಂದು ಅತಿ ಆಸಕ್ತಿದಾಯಕ ಕೃತಿ. ಯಾವುದೇ ಕಾದಂಬರಿಗಿಂತಲೂ ಹೆಚ್ಚು ಅದ್ಭುತ ವಾಗಿದೆ; ಜೊತೆಗೆ ಮಾಹಿತಿಯ ಮೂಟೆಗಟ್ಟಲೆ ಸಂಗ್ರಹ ಇಲ್ಲಿದೆ. ಆ ಮಾಹಿತಿಯಲ್ಲಿ ಎಷ್ಟೋ ನೂತನವಾದವು, ಮೌಲಿಕವಾದವು." ಅಮೆರಿಕಾದ ಲೋಸಾಲ್ಮೋಸ್‌ನಲ್ಲಿ "ಮ್ಯಾನ್‌ಹಟನ್ ಯೋಜನೆ"ಯಡಿ ಅಣ್ವಸ್ತ್ರದ ತಯಾರಿಕೆ ನಡೆದು ೧೯೪೫ರ ಜುಲೈ ೧೫ರಂದು ಸೂರ್ಯೋದಯಕ್ಕೆ ಮುಂಚೆ ಅದರ ಪ್ರಾಯೋಗಿಕ ಸ್ಫೋಟವನ್ನು ಆಯೋಜಿಸಲಾಗಿತ್ತು. ಯೋಜನೆಯ ನಿರ್ದೇಶಕ ಖ್ಯಾತ ಪರಮಾಣು ವಿಜ್ಞಾನಿ ರಾಬರ್ಟ್ ಓಪನ್‌ಹೈಮರ್. ಅದು ಸ್ಫೋಟಿಸಿದಾಗ ಗೀತೆಯ ಈ ಪದ್ಯವನ್ನು ಅವನು ಉದ್ಗರಿಸಿದ. ಎಡ್ಗರ್ಟನ್ ಬಳಿ ಸಂಸ್ಕೃತ ಕಲಿತು ಗೀತೆಯನ್ನು ಆತ ಬಹಳ ಆಳವಾಗಿ ಅಭ್ಯಾಸ ಮಾಡಿದ್ದ ಮತ್ತು ಗೀತೆಯು ಅವನಿಗೆ ಕಂಠಸ್ಥವಾಗಿದ್ದಿತು. ಸ್ಫೋಟವಾದಾಗ ಈ ಶ್ಲೋಕವನ್ನು ಗಟ್ಟಿಯಾಗಿ ಹೇಳಿಕೊಂಡ. ಕೆಲವೇ ಸೆಕೆಂಡುಗಳ ನಂತರ ಅದೇ ಗೀತೆಯ ಇನ್ನೊಂದು ಪದ್ಯವು ಅವನ ಮನಸ್ಸಿಗೆ ಬಂದು ಅದು ಅವನನ್ನು ಬಲವಾಗಿ ಚುಚ್ಚಿತು. ಭಗವಾನನು ಅಲ್ಲಿ ಹೇಳುತ್ತಾನೆ, "ನಾನು ಸಾವು, ಸರ್ವವನ್ನೂ ನಾಶಗೈಯ್ಯುವಂಥವನು; ನಾನು ಅಗಾಧವಾಗಿ ಬೆಳೆದಿದ್ದೇನೆ. ಜನರನ್ನೆಲ್ಲಾ ಆಹುತಿ ತೆಗೆದುಕೊಳ್ಳಲು ಆರಂಭಿಸಿದ್ದೇನೆ" (೧೧.೩೨ : ಕಾಲೋऽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ). ಭಗವಾನನ ಎರಡು ಮುಖಗಳೂ ಇಲ್ಲಿವೆ, ಭವ್ಯವಾದ್ದು ಮತ್ತು ಕರಾಳವಾದ್ದು. ಗೀತೆಯನ್ನು ಪ್ರವಚನಗಳಲ್ಲಿ ರಾಗರಾಗವಾಗಿ ಪಠಿಸುವಂತೆಯೇ ಅದನ್ನು ಅಣುಬಾಂಬ್ ಪ್ರಯೋಗ ನಡೆದ ಅಮೆರಿಕಾದ ಒಂದು ಮರುಭೂಮಿಯ ಪ್ರದೇಶದಲ್ಲೂ ಭಾಗಶಃ ಪಠಿಸಲಾಗಿತ್ತು : ವಿಸ್ಮಯ ಮತ್ತು ಅದ್ಭುತ ಒಂದುಕಡೆ, ವ್ಯಗ್ರತೆ ಮತ್ತು ವಿಧ್ವಂಸ ಇನ್ನೊಂದು ಕಡೆ.

ಜಗತ್ತೆಲ್ಲಾ ಒಂದೆಡೆ ಕೇಂದ್ರಿಕೃತವಾಗಿದ್ದಂತೆ ಕಂಡುಬಂದಿತು ಅರ್ಜುನನಿಗೆ.

"ದೇವತೆಗಳು, ಪಿತೃಗಳು ಮತ್ತು ಮನುಷ್ಯರು, ಎಲ್ಲಾ ಭಗವಾನನ ವಿಶ್ವರೂಪದಲ್ಲಿ ಏಕತ್ರ ಸಮ್ಮಿಳಿತರಾಗಿದ್ದಂತೆ ಕಂಡಿತು" ಎಂದಿದ್ದಾರೆ ಶಂಕರರು ತಮ್ಮ ಭಾಷ್ಯದಲ್ಲಿ. ಅರ್ಜುನ ವಿಸ್ಮಿತನಾದ, ರೋಮಾಂಚನಗೊಂಡ, ತತ್ತರಿಸಿಹೋದ, ತಲೆ ಬಗ್ಗಿಸಿ ಕೈ ಜೋಡಿಸಿದ (೧೧.೧೪). ಇನ್ನು ಮುಂದಿನ ೩೬ ಶ್ಲೋಕಗಳು ಬೇರೆ ಛಂದಸ್ಸಿನಲ್ಲಿ ನಿಬಂಧನೆಗೊಂಡಿವೆ. ಅನುಷ್ಟುಪ್ ಛಂದಸ್ಸನ್ನು ಬಿಟ್ಟು ತ್ರಿಷ್ಟುಪ್ ಛಂದಸ್ಸಿನಲ್ಲಿ ಹೇಳಲುಪಕ್ರಮಿಸುವುದು ಅವು ಸ್ತೋತ್ರ ರೂಪದವೆಂಬ ಕಾರಣದಿಂದ ಇರಬೇಕು. ಈ ಛಂದಸ್ಸು ಇಂದ್ರವಜ್ರವೆಂದು ಹೇಳಿದರೂ ಆದೀತು. ಅರ್ಜುನನು ಗದ್ಗದಿತನಾಗಿ ನುಡಿದ : "ನಾನೇನೆಲ್ಲಾ ಕಾಣುತ್ತಿದ್ದೇನೆ, ದೇವ ! ದೇವತೆಗಳು, ಎಲ್ಲ ವರ್ಗಗಳ ಜೀವಿಗಳು, ತಾವರೆಯ ಮೇಲೆ ಕುಳಿತ ಬ್ರಹ್ಮ, ಋಷಿಗಳು, ವಾಸುಕಿ ಮುಂತಾದ ದಿವ್ಯ ಉರಗಗಳು (ಹಾವುಗಳು). ನಿನಗವೆಷ್ಟು ಕೈಗಳು, ಹೊಟ್ಟೆಗಳು, ಬಾಯಿಗಳು ಮತ್ತು ಕಣ್ಣುಗಳು ! ನಿನ್ನದು ಅನಂತ ರೂಪ. ನಿನಗೊಂದು ಎಲ್ಲೆಯುಂಟೆ ? ನಿನ್ನ ಆದಿ–ಮಧ್ಯ–ಅಂತ್ಯ ಗಳು ಗೋಚರಿಸುವುದೇ ಇಲ್ಲವಲ್ಲ !" (೧೧.೧೫–೧೬). ನಿನ್ನ ಕಿರೀಟ, ಗದೆ, ಚಕ್ರ, ನಿನ್ನ ತೇಜೋಮಯ ದಿವ್ಯಪ್ರಭೆ : ನೋಡುವುದೇ ಕಷ್ಟ ಎನಿಸುತ್ತಿದೆ. ನಿನ್ನನ್ನು ಅಗ್ನಿ ಮತ್ತು ಸೂರ್ಯ ಆವರಿಸಿದಂತಿದೆ (೧೧.೧೭ : ...ಪಶ್ಯಾಮಿ ತ್ವಾಂ ದುರ್ನಿರೀಕ್ಷಂ ಸಮಂತಾತ್ ದೀಪ್ತಾನಲಾರ್ಕದ್ಯುತಿಮಪ್ರಮೇಯಂ). "ನೀನು ಎಂದೂ ನಶಿಸದ (ಅಕ್ಷರ) ಪರಮ ವಸ್ತು, ಇಡೀ ವಿಶ್ವಕ್ಕೆ ನೀನು ಆಸರೆ; ನೀನು ಶಾಶ್ವತ ಧರ್ಮದ ರಕ್ಷಕ, ನೀನು ಸನಾತನ ಪುರುಷ" (೧೧.೧೮). ಸೂರ್ಯ–ಚಂದ್ರರೇ ಅವನ ಕಣ್ಣುಗಳು, ಬಾಯೋ ಒಂದು ಉರಿಯುವ ಕುಂಡದಂತಿದೆ. ಇಡೀ ವಿಶ್ವವು ಅವನ ತೇಜಸ್ಸಿನಿಂದ ಕಂಗೊಳಿಸುತ್ತಿದೆ (೧೧.೧೯). ಅವನು ಸರ್ವಾಂತರ್ಯಾಮಿ, ಅವನ ಅದ್ಭುತ ರೂಪವನ್ನು ಕಂಡು ಮೂರು ಲೋಕಗಳು ನಡುಗಿಹೋಗಿವೆ (೧೧.೨೦ : ... ದೃಷ್ಟ್ವಾ ಅದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್). ದೇವತೆಗಳು ಸಹ ಭೀತರಾಗಿದ್ದಾರೆ, ಕೈಮುಗಿದು ಸ್ತುತಿಸುತ್ತಿದ್ದಾರೆ; ಋಷಿಗಳ ಮತ್ತು ಸಿದ್ಧರ ಗುಂಪುಗಳು 'ಜಗತ್ತಿಗೆ ಒಳ್ಳೆಯದಾಗಲಿ' ಎಂದು ಅರ್ಥವತ್ತಾದ ಸೂಕ್ತಗಳನ್ನು ಪಠಿಸುತ್ತಿವೆ (೧೧.೨೧).

ಪರಮದೇವತೆಯನ್ನು ಕಂಡು ಜನರು ಹಾಗೂ ದೇವತೆಗಳು ಮಂದಸ್ಮಿತರಾಗಬೇಕು; ಆ ಕರುಣಾಳುವನ್ನು ಕಂಡು ದೇವತೆಗಳು ಭೀತರೇಕಾಗುತ್ತಾರೋ ತಿಳಿಯದು. ಮುಂದೆ ಅರ್ಜುನನು ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ಅಶ್ವಿನಿ ದೇವತೆಗಳು, ಮರುತ್ತುಗಳು, ಊಷ್ಮಪರು (ಕುದುರೆ, ಸಿಂಹ, ಇತ್ಯಾದಿ), ಗಂಧರ್ವರು, ಯಕ್ಷರು, ಮುಂತಾದವರನ್ನು ಕಂಡು ವಿಸ್ಮಿತನಾದ (೨೨). ಹೇಳಿದ : "ನಿನ್ನ ರೂಪವು ಅಳೆಯಲಸದಳವಾದ್ದು, ಬಾಯಿ, ಕಣ್ಣು, ಕೈ, ತೊಡೆ, ಪಾದ, ಹೊಟ್ಟೆ, ಎಲ್ಲಾ ಬಹುಳ; ಹಲ್ಲುಗಳೋ ಭಯಂಕರ. ನಾನು ಮತ್ತು ಲೋಕದ ಜನ ಭಯಪಡುವಂತಾಗಿದೆ (೨೩). ಎತ್ತರವನ್ನು ನೋಡಿದರೆ ಆಕಾಶದೆತ್ತರ, ಅಗಲವಾದ ಕಣ್ಣುಗಳು, ತೆರೆದಿಟ್ಟ ಬಾಯಿ. ಹಲ್ಲುಗಳನ್ನು ನೋಡಿದರೆ ಪ್ರಲಯ ಕಾಲವು ಸನ್ನಿಹಿತವಾಯಿತೋ ಎನಿಸುತ್ತದೆ. ಅರ್ಜುನ ದಿಕ್ಕುತೋಚದಾದ, ನೆಮ್ಮದಿ ಇಲ್ಲವಾಯಿತು. ಪ್ರಸನ್ನನಾಗು, ದೇವ, ಎನ್ನಬೇಕಾಯಿತು (೧೧.೨೫ : ... ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ)."

ಯುದ್ಧರಂಗಕ್ಕೆ ಸಂಬಂಧಿಸಿದಂತೆಯೂ ಕೆಲವು ಸಂಗತಿಗಳು ಗೋಚರವಾದವು. ಧೃತರಾಷ್ಟ್ರನ ಮಕ್ಕಳೆಲ್ಲಾ ಪರಮಪುರುಷನ ಬಾಯೊಳಕ್ಕೆ ಧಾವಿಸುತ್ತಿದ್ದಾರೆ; ಅವರೊಟ್ಟಿಗೆ ಭೀಷ್ಮ, ದ್ರೋಣ, ಕರ್ಣ (ಸೂತಪುತ್ರ), ಅರ್ಜುನನ ಕಡೆಯ ಹಲವು ಸೈನಿಕರು, ನುಗ್ಗುತ್ತಿದ್ದಾರೆ. ಕೆಲವರಂತೂ ಕರಾಳ ಹಲ್ಲುಗಳ ನಡುವೆ ಸಿಕ್ಕಿಕೊಂಡು ಚಟ್ನಿ ಆಗಿಹೋಗುತ್ತಿದ್ದಾರೆ (೨೭). ಇದನ್ನೆಲ್ಲಾ ವಿವರಿಸುವುದಾದರೂ ಹೇಗೆ ? ಎಲ್ಲ ನದಿಗಳೂ ಸಮುದ್ರದೊಳಕ್ಕೆ ಸೇರಿಕೊಳ್ಳುವಂತೆ ಈ "ನರಲೋಕವೀರರು" ಜ್ವಾಲೋಪೇತವಾದ ಪರಮಪುರುಷನ ಬಾಯೊಳಕ್ಕೆ ನುಗ್ಗುತ್ತಿದ್ದಾರೆ (೨೮). ದೀಪದತ್ತ ಧಾವಿಸಿ ಸುಟ್ಟುಹೋಗುವ ಪತಂಗಗಳ ಕತೆ ಇವರದು (೨೯). "ಓ ವಿಷ್ಣುವೆ, ಹೀಗೆ ನುಗ್ಗಿಬಂದವರು ನಿನ್ನ ಮುಖಜ್ವಾಲೆಯಲ್ಲಿ ಸತ್ತುಬೀಳುತ್ತಿರುವಾಗ ನೀನು ನಿನ್ನ ತುಟಿಗಳನ್ನು ನೆಕ್ಕುತ್ತಾ ಅವರನ್ನು ನುಂಗುತ್ತಿರುವೆ. ನಿನ್ನ ತೇಜಸ್ಸು ಇಡೀ ಜಗತ್ತನ್ನು ಆವರಿಸಿದೆ, ನಿನ್ನ ಜ್ವಾಲೆಯ ಶಾಖವು ಸುಡುವಂತಿದೆ (೩೦)."

ಈ ವಿವರಣೆಗಳನ್ನು ಅದ್ಭುತವೆಂದು ಸ್ವೀಕರಿಸಬೇಕೋ, ಬೀಭತ್ಸವೆಂದು ಮುಖ ಮುಚ್ಚಿಕೊಳ್ಳಬೇಕೋ ಗೀತೆಯ ಓದುಗರು ತೀರ್ಮಾನಿಸಬೇಕು. ಅರ್ಜುನನಲ್ಲಿ ನಡುಕ ಹುಟ್ಟಿದೆ. ಅಂಗಲಾಚಿ ಬೇಡಿಕೊಳ್ಳುತ್ತಾನೆ : "ಇಷ್ಟು ಉಗ್ರರೂಪದ ನೀನು ಯಾರೆಂಬುದನ್ನಾದರೂ ಹೇಳಬಾರದೆ ? ದೇವಶ್ರೇಷ್ಠನೇ, ನಿನಗೆ ನಮಸ್ಕಾರ. ನೀನು ಪ್ರಸನ್ನನಾಗು. ನಿನ್ನನ್ನು ಸಾದ್ಯಂತವಾಗಿ ತಿಳಿಯ ಬಯಸುತ್ತೇನೆ, ನಿನ್ನ ಕ್ರಿಯೆಗಳನ್ನು ನಾನು ಅರ್ಥ ಮಾಡಿಕೊಳ್ಳಲಾರೆನಲ್ಲ !" (೧೧.೩೧ : ಆಖ್ಯಾಹಿ ಮೇ ಕೋ ಭವಾನುಗ್ರರೂಪೋ ನಮೋಽಸ್ತು ತೇ ದೇವವರ ಪ್ರಸೀದ ।). ಇದಕ್ಕೆ ಭಗವಾನನ ಪ್ರತಿಕ್ರಿಯೆಯೇ ನಾವು

## ಪಂಜು ಬೆಳಕು




ಸತಿಯರೂ ಇದ್ದಾರೆ
ಪದ್ಧತಿಗಳೂ ಇವೆ
ಸತಿಪದ್ಧತಿ ಈಗಿಲ್ಲವಂತೆ

ಕಣ್ಣಲ್ಲೆ ಸುಡುವ
ಬಯಲಲ್ಲೆ ದಹಿಸುವ
ಪುರುಷ ಚಿತೆ ಇನ್ನೂ ಆರಿಲ್ಲ

ಅಕ್ಕ ಒಲೆಯೊಳಗಿಕ್ಕಿದ
ಲೌಕಿಕ ಗಂಡಂದಿರು
ಇನ್ನೂ ಸುಟ್ಟು ಭಸ್ಮವಾಗಿಲ್ಲ

ಕುಂಕುಮ, ಬಳೆ
ಕಾಲುಂಗುರ, ಮೂಗುತಿ, ತಾಳಿ
ಯಾವುದೂ ಹೊಸ್ತಿಲು ದಾಟಿಲ್ಲ

ಮೂರನೇ ಕಣ್ಣಿನವ
ನವಿಲುಗರಿ ಹೊತ್ತವ
ವನವಾಸಕ್ಕೆ ಜೊತೆಯಾದವ
ಇವರಾರು ಈಗ ಜೊತೆಗಿಲ್ಲ

ನಾ ಹಿಡಿದ ಪಂಜು
ದುರುಳರನು ಸುಟ್ಟೀತು
ಇಳೆಗೆ ಬೆಳಕಾದೀತು
ಸಕಲರಿಗೂ ಸಮತೆ ಕಂಡೀತು

**ಸಾವಿತ್ರಿ ಮುಜುಮದಾರ**
ಆಲವಂಡಿ, ಕೊಪ್ಪಳ – ೫೮೩ ೨೨೬



ಹಿಂದೆ ಪ್ರಸ್ತಾಪಿಸಿದ ಓಪನ್‌ಹೈಮರ್‌ಗೆ ಭಾಸವಾದ ಪದ್ಯ : "ನಾನು ಕಾಲ (ಸಾವು ನೀಡುವವನು), ನಾನು ಸರ್ವನಾಶ ಮಾಡುವವನು. ಜನಗಳನ್ನು ನುಂಗಲು ನಾನೀಗ ಸನ್ನದ್ಧನಾಗಿದ್ದೇನೆ. ನೀನಿಲ್ಲದೆಯೂ ಈ ರಣರಂಗದಲ್ಲಿ ಕಾದಾಡಲು ಸಜ್ಜಾಗಿರುವವರೆಲ್ಲಾ ಇಲ್ಲವಾಗುತ್ತಾರೆ" (೧೧.೩೨ : ಕಾಲೋऽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ। ಋತೇऽಪಿತ್ವಾ ನ ಭವಿಷ್ಯಂತಿ ಸರ್ವೇ ಯೇऽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ॥). ಭಗವಾನನು ಕುರುಕ್ಷೇತ್ರದ ಯುದ್ಧರಂಗಕ್ಕೆ ಮರಳಿದ್ದಾನೆಂದಾಯಿತು. ವಿಷಾದದಿಂದ ಸಮಚಿತ್ತವನ್ನು ಕಳೆದುಕೊಂಡಿದ್ದ ಧನುರ್ಧಾರಿ ಅರ್ಜುನನು ಗಾಂಡೀವವನ್ನೆತ್ತಿ ಈಗಾಗಲೆ ಅಸುನೀಗಿರುವವರನ್ನು ಔಪಚಾರಿಕವಾಗಿ ರಣರಂಗದಲ್ಲಿ ಕೊಲ್ಲಬೇಕು, ಅಷ್ಟೆ (೧೧.೩೩ : ತಸ್ಮಾತ್ ತ್ವಂ ಉತ್ತಿಷ್ಠ ಯಶೋ ಲಭಸ್ವ ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಂ। ಮಯಾ ಏವ ಏತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥). ಯೋಧರ ಕರ್ಮವಿಪಾಕವು ಪರಮಪುರುಷನಿಂದಾಗಿ ಆಗಲೇ ರೂಪುಗೊಂಡಿದೆ. ಆಂಗ್ಲಭಾಷೆಯಲ್ಲಿ "ದೇರ್ ಗೂಸ್ ಈಸ್ ಆಲ್‌ರೆಡಿ ಕುಕ್ಡ್" ಎನ್ನುತ್ತಾರಲ್ಲ, ಹಾಗೆ. ದ್ರೋಣ, ಭೀಷ್ಮ, ಜಯದ್ರಥ, ಕರ್ಣ, ಮತ್ತಿತರರ ಭವಿಷ್ಯವನ್ನಾಗಲೆ ಬರೆದಾಗಿದೆ. ಹತರಾಗಿರುವವರನ್ನು ಯುದ್ಧದಲ್ಲಿ ಗೆಲ್ಲುವುದಷ್ಟೇ ಅರ್ಜುನನಿಗೆ ಉಳಿದಿರುವ ಕೆಲಸ (೩೪).

ಇವನೆಂತಹ ಮಹಾಪುರುಷನೆಂಬುದು ಹಿಂದೆಂದೂ ವೇದ್ಯವಾಗಿರದಿದ್ದಷ್ಟು ಈಗ ಅರ್ಜುನನಿಗೆ ಸ್ಪಷ್ಟವಾಗಿದೆ. ಅಂಥವನ ಮುಂದೆ ರಾಕ್ಷಸರಾದಿಯಾಗಿ ಎಲ್ಲರೂ ಭೀತರಾಗಿ, ಕಾಂದಿಶೀಕರಾಗಿ, ಚೆಲ್ಲಾಪಿಲ್ಲಿಯಾಗುತ್ತಾರೆ, ಜಗತ್ತಿನ ಜನ ಅತೀವ ಸಂತೋಷದಿಂದ ಬೀಗುತ್ತಾರೆ (೧೧.೩೬). ಅರ್ಜುನನ ಸ್ತುತಿಯು ಪರಾಕಾಷ್ಠೆಯನ್ನು ಮುಟ್ಟಿದೆ. ಅವನು ತಗ್ಗಿ ಬಗ್ಗಿ ನಮಿಸಿ ನುಡಿಯುತ್ತಾನೆ. "ಮಹಾತ್ಮ ನೀನು, ಹೇಗೆ ತಾನೆ ಅವರು ನಿನಗೆ ಬಾಗಿ ನಮಿಸದಿರಲು ಸಾಧ್ಯ ? ನೀನು ಅನಂತ, ದೇವತೆಗಳ ಒಡೆಯ, ಜಗತ್ತಿಗೆ ಆಧಾರ, ನೀನು ಅವಿನಾಶಿ" (೩೭). ಭಕ್ತಿ ಪುರಸ್ಸರವಾಗಿ ಅವನು ಪರಮಪುರುಷನನ್ನು ಶ್ಲಾಘಿಸುತ್ತಾನೆ : "ನೀನು ಆದಿಯ ಸೃಷ್ಟಿಕರ್ತ, ಆದಿ-ಅಂತ್ಯ ಇಲ್ಲದವನು, ಇಡೀ ವಿಶ್ವಕ್ಕೆ ನೀನು ಆಲಂಬನ. ನೀನೇ ಜ್ಞಾತೃ ಮತ್ತು ಜ್ಞೇಯ. ನೀನೇ ಪರಮ ಗತಿ. ಈ ವಿಶ್ವವು ನಿನ್ನಿಂದಾಗಿದೆ" (೧೧.೩೮ : ತ್ವಮಾದಿದೇವಃ ಪುರುಷಃ ಪುರಾಣಃ ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ। ವೇತ್ತಾऽಸಿ ವೇದ್ಯಂ ಚ ಪರಂ ಚ ಧಾಮ ತ್ವಯಾ ತತಂ ವಿಶ್ವಂ ಅನಂತರೂಪ ॥) "ನೀನೇ ವಾಯು, ಯಮ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ, ಪ್ರಪಿತಾಮಹ. ನಿನಗೆ ಸಾವಿರ ಬಾರಿ ನಮಸ್ಕಾರ. ಮತ್ತೆ ಮತ್ತೆ ನಿನಗೆ ನಮಿಸುವೆ" (೩೯ : ವಾಯುರ್ಯಮೋऽಗ್ನಿರ್ವರುಣಃ ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ। ನಮೋ ನಮಸ್ತೇऽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋऽಪಿ ನಮೋ ನಮಸ್ತೇ ॥ – ಪ್ರೌಢಶಾಲೆಯಲ್ಲಿ ಈ ಎರಡು ನಮ್ಮ ಬೆಳಗಿನ ಪ್ರಾರ್ಥನಾ ಶ್ಲೋಕಗಳಲ್ಲಿ ಸೇರಿದ್ದವು. ಸಂಸ್ಕೃತ ಅಧ್ಯಾಪಕ ವಿದ್ವಾನ್ ಎಸ್. ರಾಮಚಂದ್ರ ಭಟ್ಟರು ಅವನ್ನು ಅತಿರಮ್ಯವಾಗಿ ಹೇಳಿಕೊಡುತ್ತಿದ್ದರು.)

ಎಷ್ಟು ನಮಿಸಿದರೂ ಸಾಲದು, ಎಷ್ಟು ರೀತಿಗಳಲ್ಲಿ ನಮಿಸಿದರೂ ಸಾಲದು. ಮುಂದಿನಿಂದ, ಹಿಂದಿನಿಂದ, ಎಲ್ಲ ಪಕ್ಕಗಳಿಂದ, ಈ ಅಗಣಿತ ಶಕ್ತಿಯ, ಅಮಿತ ವಿಕ್ರಮದ, ಸರ್ವಸ್ವವೂ ಆಗಿರುವ, ಭಗವಾನನಿಗೆ ಅರ್ಜುನನು ನಮಿಸಿ ಶರಣಾಗುತ್ತಾನೆ (೧೧.೪೦). ಅವನು ಲೋಕಗಳ ಒಡೆಯ, ಚರಾಚರಗಳಿಗೆಲ್ಲಾ ಒಡೆಯ; ಅವನು ಪೂಜನೀಯ, ಅತಿಶ್ರೇಷ್ಠ ಗುರು. ಬೇರಾರೂ ಅವನಿಗೆ ಸಮವಿಲ್ಲ. ಮೂರು ಲೋಕಗಳಲ್ಲಿ ಅವನೇ ಅಪ್ರತಿಮ ಪ್ರಭಾವ ಉಳ್ಳವನು (೧೧.೪೩ : ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್। ನ ತ್ವತ್ಸಮೋऽಸ್ತ್ಯಭ್ಯಧಿಕಃ ಕುತೋऽನ್ಯೋ ಲೋಕತ್ರಯೇऽಪ್ಯಪ್ರತಿಮ ಪ್ರಭಾವ ॥). ಆದ್ದರಿಂದ ಅರ್ಜುನ ಅವನಿಗೆ ನಡುಬಗ್ಗಿಸಿ ನಮಸ್ಕರಿಸುತ್ತಾನೆ. 'ತಂದೆಯಂತೆ ಸಲಹು, ಸ್ನೇಹಿತನಂತೆ ಸಂಭಾಳಿಸು' ಎಂದು ಮೊರೆಯಿಡುತ್ತಾನೆ (೪೪). ಎಂದೂ, ಯಾರೂ, ನೋಡದ ದರ್ಶನ ಇವನಿಗೆ ಲಭಿಸಿತು, ಅದರಿಂದ ಹರ್ಷ ತುಂಬಿದೆ. ಆದರೆ ಒಂದು ರೀತಿಯ ಭೀತಿಯೂ ಆವರಿಸಿದೆ. ಆದ್ದರಿಂದ ಅವನು ತನ್ನ ನೆಚ್ಚಿನ ಮಿತ್ರ ಮತ್ತು ಸಾರಥಿಯನ್ನು ಅವನ ಪರಿಚಿತ ಪೂರ್ವರೂಪದಲ್ಲಿ ನೋಡಬಯಸುತ್ತಾನೆ (೪೬). ಯಾರಿಗೂ ದರ್ಶನಕ್ಕೆ ಲಭಿಸಿಲ್ಲದಿದ್ದುದನ್ನು ಅರ್ಜುನನಿಗೆ ದರ್ಶನ ಮಾಡಿಸಿದ ಭಗವಾನ್ ಆ ದಿವ್ಯದರ್ಶನವು ಎಂತೆಂಥವರಿಗೂ ಎಷ್ಟು ದುರ್ಲಭ ಎನ್ನುವುದನ್ನು ಒತ್ತಿಹೇಳುತ್ತಾನೆ (೪೭-೪೮). ಅರ್ಜುನನೂ ಸಹ ತನ್ನ ಭೀತಿಯಿಲ್ಲದ ಸಹಜ ಭಾವಕ್ಕೆ ಮರಳಿ ಎಂದಿನಂತೆ ತನಗೆ ಚಿರಪರಿಚಿತನಾದ ಕೃಷ್ಣನಿಗೆ ಹೇಳಿದ : "ನಿನ್ನನ್ನು ಮನುಷ್ಯರೂಪದಲ್ಲಿ ನೋಡುವಾಗ ನೀನೆದೆಷ್ಟು ಸೌಮ್ಯ; ನನ್ನ ಮನಸ್ಸು ಈಗ ಶಾಂತವಾಯಿತು, ಪೂರ್ವರೂಪವನ್ನು ತಾಳಿ ಸಮಾಧಾನವಾಯಿತು" (೧೧.೫೧ : ...ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ). ತನ್ನ ಮಹಿಮೆಯನ್ನು ಭಗವಾನನು ಹಿಂದಿಕ್ಕಲಾರ. ಅದಕ್ಕೇ ಹೇಳಿದ : "ನೀನು ಕಂಡ ನನ್ನ ರೂಪವು ಸುಲಭಗೋಚರವಲ್ಲ; ದೇವತೆಗಳು ಸಹ ಅದನ್ನು ಕಾಣಲು ಕಾತುರರಾಗಿರುತ್ತಾರೆ. ವೇದಪಾರಂಗತರಿರಬಹುದು, ಉಗ್ರ ತಪಸ್ಸು ಮಾಡಿದವರಿರಬಹುದು, ಹೇರಳವಾಗಿ ದಾನ ಮಾಡಿದ ಕೊಡುಗೈಯವರಿರಬಹುದು, ಯಜ್ಞಗಳನ್ನು ಮಾಡಿದವರಿರಬಹುದು, ಅವುಗಳಿಂದ ಈ ಮಹಾನ್ ದರ್ಶನವನ್ನು ಪಡೆಯಲಾಗದು (೧೧.೫೨-೫೩). ಇರುವುದೊಂದೇ ಹಾದಿ : ಅನನ್ಯವಾದ ಭಕ್ತಿಯಿಂದ ಮಾತ್ರವೇ ನನ್ನ ಈ ರೂಪವನ್ನು ಕಾಣಲು ಶಕ್ಯ. ಭಕ್ತಿಪುರಸ್ಸರವಾಗುವುದು ನನ್ನನ್ನು ತಿಳಿಯಲು, ಕಾಣಲು ಮತ್ತು ಸೇರಲು ಇರುವ ಸಿದ್ಧಮಾರ್ಗ (೧೧.೫೪ : ಭಕ್ತ್ಯಾ ತು ಅನನ್ಯಯಾ ಶಕ್ಯಃ ಅಹಮೇವಂ ವಿಧೋऽರ್ಜುನ। ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥).

ಈ ಅಧ್ಯಾಯದ ಕೊನೆಯ ಪದ್ಯದ ಬಗ್ಗೆ ಶಂಕರರು ಹೇಳುವುದಿದು : "ಇಡೀ ಗೀತಾಶಾಸ್ತ್ರದ ಸಾರಸರ್ವಸ್ವವೆಂದರೆ ಇದೇ; ಪರಮಪದದ ಗಳಿಕೆಗೆ ಇದು ಹಾದಿ" (ಸರ್ವಸ್ಯ ಗೀತಾಶಾಸ್ತ್ರಸ್ಯ ಸಾರಭೂತಃ ಅರ್ಥೋ ನಿಃಶ್ರೇಯಸಾರ್ಥಃ ಅನುಷ್ಠೇಯತ್ವೇನ ಸಮುಚ್ಚಿತ್ಯ ಉಚ್ಯತೇ). ಆ ಹಾದಿ ಯಾವುದು ? "ಯಾರು ನನಗಾಗಿ ಕ್ರಿಯಾವಂತರೋ, ಯಾರು ನನ್ನನ್ನು ಅಂತಿಮ ಗಮ್ಯವೆಂದು ತಿಳಿಯುತ್ತಾರೋ, ಯಾರು ನನ್ನ ಭಕ್ತರೋ, ಯಾರು ತ್ಯಾಗಮಯಿಗಳೋ, ವೈರಭಾವವನ್ನು ಹೊಂದುವುದಿಲ್ಲವೋ, ಅವರು ನನ್ನನ್ನು ಸೇರಿಕೊಳ್ಳುತ್ತಾರೆ" (೧೧.೫೫ : ಮತ್ಕರ್ಮಕೃತ್ ಮತ್ಪರಮಃ ಮದ್ಭಕ್ತಃ ಸಂಗವರ್ಜಿತಃ। ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥). ಶಂಕರರ ವ್ಯಾಖ್ಯಾನ ನೋಡಿ : "ಮತ್ಪರಮಃ ಕರೋತಿ ಭೃತ್ಯಃ ಸ್ವಾಮಿಕರ್ಮ ನ ತು ಆತ್ಮನಃ" (ಸೇವಕನು ಯಜಮಾನನ ಕೆಲಸಕ್ಕೆ ಆದ್ಯತೆ ಕೊಡುತ್ತಾನೆ, ತನಗಲ್ಲ). ಭಕ್ತನಿಗೆ ಸ್ವಂತದ ಸಂಪತ್ತು, ಮಗ-ಮಡದಿ, ಮಿತ್ರ, ಬಂಧು, ಇಂಥವೆಲ್ಲಾ ಅಪ್ರಕೃತ. ಅದು ನೈಜವಾದ ಭಕ್ತಿ, ಶ್ರೇಯೋಮಾರ್ಗ.

ಈ ಮೊದಲು ಭಗವಾನನು ಅರ್ಜುನನಿಗೆ ಹೇಳಿದ್ದ : ಈಗಾಗಲೆ ಸತ್ತಿರುವವರನ್ನು ಸಾಯಿಸಲು ನೀನು ಕೇವಲ ನಿಮಿತ್ತ, ಎಂದು. ಅಂದರೆ, ಎಲ್ಲವೂ ಪೂರ್ವನಿಯಂತ್ರಿತ. ಅದನ್ನು ಯಾರೂ ತಡೆಯುವಂತಿಲ್ಲ, ಬದಲಿಸುವಂತಿಲ್ಲ. ಸೇವಕನು ಸೇವಕ ಮತ್ತು ಯಜಮಾನನು ಯಜಮಾನ, ಅದು ಅವರವರ ಪಾಲಿನ ಧರ್ಮ, ಅದು ಪ್ರಶ್ನಾರ್ಹವಲ್ಲ. ನೇರವಾಗಿ ಅಲ್ಲದಿದ್ದರೂ ಭಕ್ತಿಯು "ಬಡವಾ, ನೀ ಮಡಗಿದ್ಹಂಗಿರು" ಎಂದು ಪರಿಸಮಾಪ್ತವಾಗುತ್ತದೆ. ಭಗವಂತನಿಗೆ ಕೈಂಕರ್ಯ ಸಲ್ಲಿಸುವುದರ ಪರ್ಯಾಯ ರೂಪ ಸ್ವ-ಧರ್ಮದಲ್ಲಿ ನಿರತರಾಗಿದ್ದು ಮೇಲ್ವರ್ಗದವರಿಗೆ ನಡುಬಗ್ಗಿಸಿ ದುಡಿಮೆಯ ಫಲ ಸಲ್ಲಿಸುವುದು. ಮಧ್ಯಯುಗೀನ ಯೂರೋಪಿನಲ್ಲಿ ಊಳಿಗಮಾನ್ಯ ಪದ್ಧತಿಯ ಸಮರ್ಥನೆಗೆ ಇಂಥದೇ ಸೂತ್ರವನ್ನು ಅಳವಡಿಸಲಾಗಿತ್ತು. ಆಕಾಶಕಾಯಗಳು ಯಾವ ದ್ವಂದ್ವವೂ ಇಲ್ಲದೆ ತಮ್ಮತಮ್ಮ ವಲಯದಲ್ಲಿರುವಂತೆ ಸಮಾಜದಲ್ಲಿ ಎಲ್ಲರೂ ಅವರವರ ಸ್ಥಾನದಲ್ಲಿರುತ್ತಾರೆ, ಇರಬೇಕು. ಆದ್ದರಿಂದ ಭೂಮಿಯು ಸ್ಥಿರ, ಸೂರ್ಯ ಮತ್ತು ಗ್ರಹಗಳು ಭೂಮಿಯ ಸುತ್ತ ಸುತ್ತುತ್ತಿರುತ್ತಾರೆ ! ಕೋಪರ್ನಿಕಸ್, ಗೆಲಿಲಿಯೊ, ಮುಂತಾದವರು ಆ ಸುಸ್ಥಿರ ವಿಶ್ವವನ್ನು ತಿರುಚಲು ಹೊರಟದ್ದು ಆಳುವ ವರ್ಗಕ್ಕೆ ಹಿಡಿಸಲಿಲ್ಲ. ನಮ್ಮ ದೇಶದ ಸಂದರ್ಭದಲ್ಲಿ ಗೀತೆಗೊಬ್ಬ ಗೆಲಿಲಿಯೊ ಇದ್ದಾನೆ. ಅವನು ಬೌದ್ಧ ಮತ್ತು ಲೋಕಾಯತ ದರ್ಶನಗಳ ರೂಪದಲ್ಲಿ ಪ್ರಶ್ನೆಗಳ ನ್ನೆತ್ತುತ್ತಾನೆ. ಪರಮಲೋಕ ಮತ್ತು ಪರಲೋಕಗಳನ್ನು ತೋರಿಸಿ ದುಡಿಯುವ ಜನರು ಕಾಣದ ದೈವಕ್ಕೆ ಶರಣಾಗಿ ಸ್ವ-ಧರ್ಮದಲ್ಲಿ ಅವರು ನಿಶ್ಚಲವಾಗಿರುವಂತೆ ಬೋಧಿಸುವುದು ಭಗವದ್ಗೀತೆ.

ಜಿ. ರಾಮಕೃಷ್ಣ
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್,
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



# ಚಂದ್ರಗ್ರಹಣದ ಸೊಬಗು

**ಕ**ಳೆದೆರಡು ವರ್ಷಗಳಿಂದ ಗ್ರಹಣಗಳನ್ನೇ ಕಾಣದೆ ಬೇಸತ್ತಿದ್ದ ಕ್ಯಾಮೆರಾಗಳಿಗೆ ಈ ತಿಂಗಳ ಹುಣ್ಣಿಮೆ ಒಂದು ಅಪೂರ್ವ ಅವಕಾಶ ಒದಗಿಸಲಿದೆ. ಚಂದ್ರಗ್ರಹಣ ನೋಡಲು ಬಹಳ ಚೆಂದ; ಕವಿಗಳನ್ನು, ಕಲಾವಿದರನ್ನು ಆಕರ್ಷಿಸುವ ವಿಶೇಷ ಘಟನೆ. ನಡುರಾತ್ರಿ ಆರಂಭವಾಗುವ ಈ ಗ್ರಹಣದ ಪೂರ್ಣ ಸೌಂದರ್ಯ ಆಸ್ವಾದಿಸಲು ನಿದ್ದೆ ತಪ್ಪಿಸಿ ಒಮ್ಮೆಯಾದರೂ ಆಚೆ ಬಂದು ನೋಡಲೇ ಬೇಕು. ರಾತ್ರಿ ೧೧:೫೦ಕ್ಕೆ ಗ್ರಹಣದ ಗರಿಷ್ಠ. ಅಂದರೆ ಚಂದ್ರನ ಗರಿಷ್ಠ ಭಾಗ ನೆರಳಲ್ಲಿರುವುದು. ಇದು ಪಾರ್ಶ್ವಗ್ರಹಣವಾದದ್ದರಿಂದ ಚಂದ್ರನ ಮುಕ್ಕಾಲು ಭಾಗ ಕಾಣುತ್ತಲೇ ಇರುತ್ತದೆ. ದಕ್ಷಿಣದ ಅಂಚು ಕ್ರಮೇಣ ಕಿತ್ತಲೆ ಬಣ್ಣ ತಳೆಯುವುದನ್ನು ಕಾಣಬಹುದು. ಪ್ರತಿ ಹತ್ತು ನಿಮಿಷಕ್ಕೊಂದು ಚಿತ್ರ ತೆಗೆದು ಅವನ್ನೆಲ್ಲಾ ಒಟ್ಟುಗೂಡಿಸಿ (ಸ್ಟಿಚ್ ಮಾಡಿ) ಭೂಮಿಯ ನೆರಳಿನ ಆಕಾರವನ್ನು ಗುರುತಿಸ ಬಹುದು. ಚಂದ್ರ ಪೂರ್ಣ ಛಾಯೆಯನ್ನು ಪ್ರವೇಶಿಸುವ ಮೊದಲು ಅಂದರೆ ೯:೨೦ರಿಂದ ೧೦;೫೨ರವರೆಗೆ ಪಾರ್ಶ್ವ ಛಾಯೆಯಲ್ಲಿರುತ್ತದೆ. ಇದನ್ನು ಗುರುತಿಸುವುದೇ ಒಂದು ಸವಾಲು. ಆಕಾಶದಲ್ಲಿ ನೋಡದೆ ಕೇವಲ (ಮರುದಿನ ಪ್ರಕಟವಾಗುವ) ಚಿತ್ರವನ್ನು ಮಾತ್ರ ನೋಡಿದಲ್ಲಿ ಒಂದು ಪ್ರಶ್ನೆ ಏಳುತ್ತದೆ. ಇದು ಅರ್ಧಾಧಿಕ (ಅಂದರೆ ಗಿಬಸ್, ಹುಣ್ಣಿಮೆಗೆ ೪ – ೫ ದಿನ ಮುಂಚೆ ಅಥವಾ ಆಮೇಲೆ ಕಾಣುವ ಅಂಶ) ಚಂದ್ರನೂ ಇರಬಹುದು ಅಲ್ಲವೇ? ಇದಕ್ಕೆ ಉತ್ತರ ಪಡೆಯಲು ಗ್ರಹಣವನ್ನು ನೋಡಲೇಬೇಕು.

**ಗ್ರಹಣದ ಸಮಯದ ವಿವರಗಳು**

| | |
|---|---|
| ಪಾರ್ಶ್ವ ಛಾಯೆಯನ್ನು ಪ್ರವೇಶಿಸುವ ಸಮಯ | ರಾತ್ರಿ ೦೯:೨೦ |
| ಪೂರ್ಣ ಛಾಯೆಯನ್ನು ಪ್ರವೇಶಿಸುವ ಸಮಯ | ರಾತ್ರಿ ೧೦:೫೨ |
| ಗ್ರಹಣದ ಗರಿಷ್ಠ | ರಾತ್ರಿ ೧೧:೫೦ |
| ಪೂರ್ಣಛಾಯೆಯಿಂದ ನಿರ್ಗಮಿಸುವ ಸಮಯ | ರಾತ್ರಿ ೧೨:೪೮ |
| ಪಾರ್ಶ್ವಛಾಯೆಯಿಂದ ನಿರ್ಗಮಿಸುವ ಸಮಯ | ಮರುದಿನ ೦೨:೨೧ |

ಇದಲ್ಲದೆ ಈ ತಿಂಗಳಲ್ಲಿ ಸೂರ್ಯಗ್ರಹಣವೂ ಇದೆ. ಅದು ಭಾರತಕ್ಕೆ ಕಾಣುವುದಿಲ್ಲ. ಆದರೆ ಅಮೆರಿಕಕ್ಕೆ ಕಾಣುತ್ತದೆ. ಬಹಳ ವರ್ಷಗಳ ನಂತರ ಅಮೆರಿಕಕ್ಕೆ ಅವಕಾಶ ಸಿಕ್ಕಿದೆ; ಅಲ್ಲದೆ ಅಮೆರಿಕದ ಹೊರತಾಗಿ ಬೇರೆ ಯಾವ ದೇಶಕ್ಕೂ ಕಾಣದಿರುವುದರಿಂದ ಇದು ದೊಡ್ಡ ಸುದ್ದಿಯಾಗುವುದು.



*ಆಗಸ್ಟ್ ೧೯ರ ಮುಂಜಾನೆ*
*ಶುಕ್ರ – ಚಂದ್ರ ಜೋಡಿ*

ದಿನೇ ದಿನೇ ನಕ್ಷತ್ರಗಳ ನಡುವೆ ಓಟವನ್ನು ಮುಂದುವರೆಸುವ ಚಂದ್ರ ರೋಹಿಣಿ ನಕ್ಷತ್ರವನ್ನೂ ೧೬ರಂದು ಮರೆಮಾಡುತ್ತದೆ. ಆದರೆ ಆ ನೋಟ ನಮಗಿಲ್ಲ. ೧೬ರ ಬೆಳಿಗ್ಗೆ ಅವೆರಡೂ ಸನಿಹದಲ್ಲಿರುವುದನ್ನು ಕ್ಯಾಮೆರಾದಿಂದ ಸೆರೆಹಿಡಿಯಬಹುದು. ಅಂದು ಕೃಷ್ಣ ಜನ್ಮಾಷ್ಟಮಿ; ಚಂದ್ರ ಅರ್ಧ ರಾತ್ರಿಯಲ್ಲಿ ಉದಯಿಸಿದಾಗ ರೋಹಿಣಿಯ ಪಕ್ಕದಲ್ಲಿಯೇ ಇತ್ತು ಎಂದು ಭಾಗವತ ಹೇಳುತ್ತದೆ. ಇದನ್ನು ಪರಿಶೀಲಿಸಲು ಇದು ಒಳ್ಳೆಯ ಅವಕಾಶ.

ಇದೇ ರೀತಿ ೧೯ರ ಬೆಳಗಿನ ಜಾವ ರೇಖಾ ಚಂದ್ರ ಮತ್ತು ಶುಕ್ರ ಜೋಡಿ ಯಾಗಿರುವುದನ್ನು ಸೆರೆಹಿಡಿಯಬಹುದು. ಕ್ಯಾಮೆರಾಗೆ ಕೆಲಸ ಕೊಡಲು ಇನ್ನೊಂದು ಅಪೂರ್ವ ಅವಕಾಶವಿದೆ. ಅದು ೧೧, ೧೨, ೧೩ ಈ ತಾರೀಖುಗಳಲ್ಲಿ ಕಾಣುವ ಪರ್ಸಿಯೈಡ್ ಉಲ್ಕಾವೃಷ್ಟಿ ಕ್ಯಾಮೆರಾಗೆ ಫ್ಲಿಶ್ಐ ಅಳವಡಿಸಿ ಆಕಾಶಕ್ಕೆ ತಿರುಗಿಸಿಟ್ಟರೆ ಸಾಕು ಅದು ವಿಡಿಯೋ ತೆಗೆಯುತ್ತಿದ್ದರೆ ನೀವು ಕಾಲು ಚಾಚಿ ಮಲಗಿ "ಅಲ್ಲೊಂದು ಇಲ್ಲೊಂದು" ಎಂದು ಎಣಿಸಬಹುದು. ಗಂಟೆಗೆ ೩೦–೪೦ ಉಲ್ಕೆಗಳು ಕಾಣುವ ನಿರೀಕ್ಷೆ ಇದೆ. ಈ ಎಲ್ಲಾ ವೀಕ್ಷಣೆಗೆ ಮತ್ತು ನಕ್ಷತ್ರ ವೀಕ್ಷಣೆಗೆ ಮೋಡಗಳು ಅಡ್ಡಿ ಉಂಟು ಮಾಡುವ ಸಾಧ್ಯತೆ ಇದೆ. ಆದರೆ ಬಿಡುವು ಕೊಟ್ಟಾಗ ಸಂಜೆಯ ಆಕಾಶದಲ್ಲಿ ಆಕಾಶ ಗಂಗೆಯ ಹರವನ್ನು ಮರೆಯದೇ ಗುರುತಿಸಿ. ಗುರು ಮತ್ತು ಶನಿ ಈ ಎರಡೂ ಗ್ರಹಗಳನ್ನೇ ಮಾರ್ಗದರ್ಶಿ ಯಾಗಿ ಬಳಸಿ. ಶನಿಯ ಆಸುಪಾಸನ್ನು ದುರ್ಬೀನಿನಿಂದ ವೀಕ್ಷಿಸಿದರೆ ನಕ್ಷತ್ರಗಳ ದಟ್ಟಣೆ ಸ್ಪಷ್ಟವಾಗಿ ಗೋಚರಿಸುತ್ತದೆ. ವೃಶ್ಚಿಕ ರಾಶಿಯ ಸೊಬಗು, ಧನುರಾಶಿಯ ನೆಬ್ಯುಲಗಳ ತಾಣ ಇವೆಲ್ಲವೂ ನೋಡಲು ಚೆನ್ನ. ಅದಕ್ಕಾಗಿ ಯಾವುದಾದರೂ ದೂರದ ಹಳ್ಳಿಗೆ ಹೋದರೆ ಒಳ್ಳೆಯದು. ವಿದ್ಯುದ್ದೀಪಗಳ ಕಾಟ ಇರುವುದಿಲ್ಲ.

ಸಂಜೆಯ ಆಕಾಶದಲ್ಲಿ ಶನಿ ಮತ್ತು ಗುರು ಗ್ರಹಗಳು ಕಾಣುತ್ತವೆ. ಮುಂಜಾವಿನಲ್ಲಿ ಶುಕ್ರ ಮತ್ತು ಮಂಗಳ ಕಾಣುತ್ತವೆ. ಬುಧ ಸೂರ್ಯನನ್ನು ಹಾದು ತಿಂಗಳ ಕೊನೆಗೆ ಸಂಜೆಗೆ ಬರುತ್ತವೆ.




**ಆಗಸ್ಟ್ ತಿಂಗಳ ಖಗೋಳ ದಿನಚರಿ**

| | |
|---|---|
| ೨ | ಚಂದ್ರ – ಭೂಮಿ ನಡುವೆ ಗರಿಷ್ಠ ದೂರ |
| ೩ | ಶನಿ – ಚಂದ್ರ ಜೋಡಿ |
| ೭ | ಹುಣ್ಣಿಮೆ – ಪಾರ್ಶ್ವಗ್ರಹಣ |
| ೧೨ | ಪರ್ಸಿಯೈಡ್ ಉಲ್ಕಾವೃಷ್ಟಿ |
| ೧೫ | ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ) |
| ೧೬ | ಚಂದ್ರ – ರೋಹಿಣಿ ಜೋಡಿ |
| ೧೮ | ಚಂದ್ರ – ಭೂಮಿಯ ನಡುವೆ ಕನಿಷ್ಠ ದೂರ |
| ೧೯ | ಶುಕ್ರ – ಚಂದ್ರ ಜೋಡಿ |
| ೨೧ | ಚಂದ್ರ – ಮಂಗಳ ಜೋಡಿ |
| ೨೧ | ಅಮಾವಾಸ್ಯೆ (ಸೂರ್ಯಗ್ರಹಣ ಭಾರತಕ್ಕೆ ಕಾಣುವುದಿಲ್ಲ) |
| ೨೨ | ಬುಧ – ಚಂದ್ರ ಜೋಡಿ |
| ೨೫ | ಗುರು – ಚಂದ್ರ ಜೋಡಿ |
| ೨೫ | ಶನಿಗ್ರಹದ ಹಿನ್ನಡೆ ಮುಕ್ತಾಯ |
| ೨೯ | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ) |
| ೩೦ | ಚಂದ್ರ – ಭೂಮಿ ನಡುವೆ ಗರಿಷ್ಠ ದೂರ |

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೧




# ದಮಯಂತಿ

ಎಚ್. ವಿ. ಸಾವಿತ್ರಮ್ಮ

ಭಾಸ್ಕರ ನಿರಾಶ್ರಿತರ ವಸತಿಯನ್ನು ಬಿಟ್ಟು ಸ್ವಲ್ಪ ದೂರ ಬಂದಿದ್ದನು. ಭಜನೆಯ ಸದ್ದು ಇನ್ನೂ ಕೇಳಿಸುತ್ತಿತ್ತು. ಭಜನೆ ಮಾಡುತ್ತಾ ಮೈಮರೆತು ನಿರಾಶ್ರಿತರು ಇಹಲೋಕದ ಕಷ್ಟವನ್ನು ಮರೆಯಲು ಪ್ರಯತ್ನ ಮಾಡಿದಂತಿತ್ತು. "ಸಬ್‌ಕೋ ಸನ್ಮತಿ ದೇ ಭಗವಾನ್" ಈ ಪ್ರಾರ್ಥನೆಯನ್ನು ಎಷ್ಟು ಸಲ ಮಾಡಿದರೂ ಸಾಕಾಗುವಂತಿರಲಿಲ್ಲ. ಎಷ್ಟು ಸಮಸ್ಯೆಗಳು ! ಎಂತಹ ಸಮಸ್ಯೆಗಳು ! ಭಗವಂತ ಸನ್ಮತಿಯ ಪ್ರವಾಹವನ್ನೇ ಹರಿಸಿದರೂ ಎಲ್ಲವನ್ನೂ ಬಿಡಿಸಲು ಶಕ್ತಿ ಉಂಟಾಗುತ್ತಿದ್ದಿತೋ ಇಲ್ಲವೋ !

ಭಾಸ್ಕರನಿನ್ನೂ ಪೆಟ್ಟಿನಿಂದ ಚೇತರಿಸಿಕೊಂಡಿರಲಿಲ್ಲ. ದಮಯಂತಿಯನ್ನು ಎಂದಾದರೊಂದು ದಿನ ಸಂಧಿಸಬಹುದೆಂಬ ಅನುಮಾನವಿದ್ದಿತು. ಆದರೆ ಇಲ್ಲಿ ಈ ಸ್ಥಿತಿಯಲ್ಲಿ ಅವಳು ಕಾಣಬಹುದೆಂದುಕೊಂಡಿರಲಿಲ್ಲ. ಅವಳನ್ನು ನೋಡಿ ಗುರುತು ಹಿಡಿಯುತ್ತಲೇ ಗಾಬರಿಯಿಂದ ಹೊರಟು ಬಂದಿದ್ದನು. ಅವಳು ಇವನನ್ನು ನೋಡಲಿಲ್ಲ. ಆದರೆ ಭಾಸ್ಕರನ ಮನಸ್ಸಿನಲ್ಲಿ ಬಿರುಗಾಳಿಯೇ ಎದ್ದಿತ್ತು. ಒಂದು ಸಲ, ಅಪಾಯದಿಂದ ಅವಳನ್ನು ರಕ್ಷಿಸುವುದು ತನ್ನ ಕೆಲಸವಲ್ಲವೇ ?

ಹಿಂದಿನ ನೆನಪುಗಳು ಚಲನಚಿತ್ರದಂತೆ ಮನಸ್ಸಿನ ಮುಂದೆ ಸುಳಿದುವು. ತಾನೆಂತಹ ಅಂಜುಬುರುಕನೆಂಬ ಅರಿವು ಭಾಸ್ಕರನಿಗೇ ಇರಲಿಲ್ಲ. ಈಗಲೂ ತನ್ನ ವರ್ತನೆಯನ್ನು ತಿಳಿದು ನಾಚಿಕೆಯಿಂದ ಅವನ ಮೈ ಬಿಸಿಯಾಗುತ್ತಿತ್ತು. ಅಭಿಮಾನಕ್ಕೆ ಧಕ್ಕೆಯುಂಟಾದುದನ್ನು ನೋಡಿದವಳು, ಅರಿತವಳು ದಮಯಂತಿಯೊಬ್ಬಳೇ. ಆದ್ದರಿಂದಲೇ ಅವನಿಗೆ ಅವಳ ಮೇಲೆ ಅಷ್ಟು ಆಕ್ರೋಶ. ಅವನು ಆ ಸಂದರ್ಭದಲ್ಲಿ ಹೆದರಿದುದೇನೂ ಅಷ್ಟು ಅಸ್ವಾಭಾವಿಕವಲ್ಲ. ಹೆದರಲು ಬೇಕಾದಷ್ಟು ಕಾರಣವಿತ್ತು. ಬುದ್ಧಿಯು ಹಿಡಿತ ತಪ್ಪಿದುದರಲ್ಲಿ ಏನೂ ಆಶ್ಚರ್ಯವಿಲ್ಲ. ಯಾರಿಗಾದರೂ ಹಾಗೇ ಆಗುತ್ತಿತ್ತೆಂದು ಎಷ್ಟೋ ಸಲ ಸಮಾಧಾನ ಹೇಳಿಕೊಂಡಿದ್ದನು. ಆದ್ದರಿಂದ ಒಂದು ವಿಧವಾದ ಶಾಂತಿಯೂ ದೊರೆತಿತ್ತು. ಆ ಶಾಂತಿ ಎಲ್ಲಿಯವರೆಗೆ ? ದಮಯಂತಿಯನ್ನು ಈ ದಿನ ಕಾಣುವವರೆಗೆ, ಈಗ ಪುನಃ ಮನಸ್ಸಿನಲ್ಲಿಯೇ ಟೀಕೆಯೆದ್ದಿತು.

ಅನಾಹುತ ನಡೆದು ಆರು ತಿಂಗಳಾಗಿದ್ದರೂ ಆ ಘಟನೆಗಳು ಭಾಸ್ಕರನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿದ್ದವು. ಆ ದಿನ ಮನೆಗೆ ಬರುವ ವೇಳೆಗೆ ಕತ್ತಲಾಗಿತ್ತು. ಊಟ ಮಾಡುತ್ತಲೇ ಇಬ್ಬರೂ ಮಲಗಿದ್ದರು. ದಮಯಂತಿ ನಿತ್ಯದಂತೆ ಹರಟುತ್ತಿರದೆ ಬಹುಬೇಗ ನಿದ್ರೆ ಹೋಗಿದ್ದಳು. ಭಾಸ್ಕರನು ಯಾವುದೋ ಪುಸ್ತಕವನ್ನೋದುತ್ತಾ ಮಲಗಿದ್ದನು. ಅರೆಜ್ಞಾನದಲ್ಲಿ ಎಲ್ಲೋ ಸದ್ದು ಕೇಳಿಸಿದಂತಾಯಿತು. ಪುಸ್ತಕದಲ್ಲಿ ತಲ್ಲೀನನಾಗಿದ್ದ ಭಾಸ್ಕರ ಬಹಳ ಹೊತ್ತಿನವರೆಗೆ ಅದನ್ನು ಗಮನಿಸಲಿಲ್ಲ. ತೀರ ಹತ್ತಿರ ಕೇಳಿ ಬಂದಾಗ ಎದ್ದು ಕಿಟಕಿಯಿಂದ ನೋಡಿದನು. ನೋಡುತ್ತಲೇ ಅವನ ಬುದ್ಧಿಯೇ ಹೋದಂತಾಯಿತು. ಮನೆಯ ಮುಂದೆ ಜನರ ಗುಂಪು ಸೇರಿತ್ತು. ದೀಪಗಳ ಬೆಳಕಿನಲ್ಲಿ ಸಹಸ್ರಾರು ಜನರು ನೆರೆದಂತಿತ್ತು. ಬಾಗಿಲಿಗೆ

ಆಗಲೇ ಅಗ್ನಿಸ್ಪರ್ಶ ಮಾಡಿದ್ದರು. ಭಾಸ್ಕರ ಒಂದೇ ಉಸಿರಿಗೆ ಓಡಿದನು. ಕೋಣೆಯಿಂದ ಹೊರಗೆ ಬಂದಾಗ ದಮಯಂತಿ ಚೀರಿದಂತಾಯಿತು. ತಿರುಗಿ ಕೂಡ ನೋಡದೆ ಓಡಿ ಬಂದಿದ್ದನು. ಹಿತ್ತಿಲು ಬಾಗಿಲನ್ನು ಸೇರಿಸಿ ಆ ಕಡೆ ಯಾರೋ ಎಳೆದಂತಿತ್ತು. ಅದಕ್ಕೂ ಗಮನ ಕೊಡದೆ ಓಡಿದನು. ಎಷ್ಟು ದೂರ ಓಡಿದನೆಂಬುದರ ನೆನಪೇ ಅವನಿಗಿರಲಿಲ್ಲ. ವೈದ್ಯರು ಅದಕ್ಕೆ ಕ್ಷಣಿಕ ಚಿತ್ತ ಭ್ರಮಣವೆನ್ನಬಹುದು. ಬೆಳಗಾಗುವ ವೇಳೆಗೆ ಮನೆಯಿಂದ ಬಹುದೂರ ಬಂದು ಹೊಲದಲ್ಲಿ ಬಿದ್ದಿದ್ದನು. ನಡೆದುದೆಲ್ಲಾ ನೆನಪಾಯಿತು. ಜೀವ ಹೊಡೆದುಕೊಳ್ಳುತ್ತಿದ್ದರೂ ಮನೆಯ ಕಡೆ ತಿರುಗಿದನು. ಮನೆಯಿದ್ದೆಡೆ ಮರುಭೂಮಿ; ಮನೆಯಿನ್ನೂ ಅಲ್ಲಲ್ಲಿ ಉರಿಯುತ್ತಿತ್ತು. ದಮಯಂತಿ ಪತ್ತೆಯೇ ಇರಲಿಲ್ಲ.

ಅನಂತರ ನಡೆದುದೆಲ್ಲಾ ಒಂದು ದುಃಸ್ವಪ್ನದಂತಿತ್ತು. ಆ ನಿರಾಶ್ರಿತರ ತಂಡ! ಲೋಕದ ಸಮಸ್ತ ದುಃಖದ ಸಾರಾಂಶವೂ ಆ ಗುಂಪಿನಲ್ಲಡಗಿತ್ತು! ಹೆಜ್ಜೆ ಹೆಜ್ಜೆಗೂ ಅಲ್ಲಿ ಪ್ರಾಣಭಯ! ಕತ್ತಲಾದಾಗ ಜೀವವೇ ಹಾರಿ ಹೋಗುವಂತಿತ್ತು. ಕಾಯಿಲೆ, ನರಳಾಟ, ಸಾವು ಎಲ್ಲ ಅಲ್ಲಿ ಮನೆಮಾಡಿದ್ದವು! ಸತ್ತವರನ್ನು ಬಿಸುಟು ಅವರ ಮೈಮೇಲಿನ ಬಟ್ಟೆಗಳನ್ನು ಸುಲಿದುಕೊಂಡು ಅವರ ಮಕ್ಕಳೇ ಮುಂದುವರಿಯುತ್ತಿದ್ದರು. ಮಾನವ ಜೀವಕ್ಕೆ ಬೆಲೆ, ಅಲ್ಲಿ ಬಿಡಿಕಾಸೂ ಇರಲಿಲ್ಲ. ಸಮಸ್ತ ಸಂಸ್ಕೃತಿಯೂ ನಾಶವಾಗಿ, ನಾಗರಿಕತೆಯ ಸಣ್ಣ ಮುಸುಕೂ ಇಲ್ಲದೆ, ತೋಳಗಳಿಂದ ತಪ್ಪಿಸಿಕೊಂಡು ಓಡುವ ಕುರಿ ಹಿಂಡಿನಂತೆ ಆ ಗುಂಪು ಮುಂದೆ ಸಾಗುತ್ತಿತ್ತು. ಭಾಸ್ಕರ ಸಾಗರೋಪಮವಾದ ಆ ಗುಂಪನ್ನು ಸೇರಿದ ಒಂದು ಹನಿ. ಅವನು ಆಶ್ರಿತರಾರೂ ಇಲ್ಲದೆ ನಿರಾಲಂಬನಾಗಿ ಹೊರಟಿದ್ದರೂ, ದಮಯಂತಿಯನ್ನು ಬಿಟ್ಟೋಡಿಬಂದ ಹೇಡಿತನದ ದೋಷ ಅವನ ಹಿಂದೆ ಕಾಳಛಾಯೆಯಂತೆ ಬರುತ್ತಿದ್ದುದರಿಂದ ಮನಸ್ಸು ನೆಮ್ಮದಿಯಾಗಿರಲಿಲ್ಲ. ಆ ಗುಂಪಿನಲ್ಲಿಯೂ ದಮಯಂತಿ ಇರಬಹುದೇನೋ ಎಂದು ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸಿದನು. ಸಿಕ್ಕುವಳೇನೋ ಎಂಬ ಆಸೆಯಿದ್ದರೂ ಅವಳ ದೃಷ್ಟಿಗೆ ಬೀಳುವ ಹೆದರಿಕೆಯೂ ಇತ್ತು.

ರಾವಿ ನದಿಯನ್ನು ದಾಟಿದಾಗ ಇನ್ನೂ ಕತ್ತಲು ಕತ್ತಲಾಗಿತ್ತು. ಒಬ್ಬ ಹೆಂಗಸು ದಡವನ್ನು ಸೇರಿದಾಗ ತನ್ನನ್ನೇ ತೀಕ್ಷ್ಣವಾಗಿ ದೃಷ್ಟಿಸಿ ನೋಡಿದಂತಾಯಿತು. ಆದರೆ ಆಕೆ ನೋಡಿದಳು ಮಾತ್ರ. ಮಾತನಾಡಿಸಲಿಲ್ಲ. ಪುನಃ ಯಾರೂ ಆ ಗುಂಪಿನಲ್ಲಿ ದಮಯಂತಿಯಂತೆ ಕಾಣಲಿಲ್ಲ. ನದಿಯನ್ನು ದಾಟಿದ ಮೇಲೂ ಪ್ರಯಾಣ ಸುಗಮವಾಗಿರಲಿಲ್ಲ. ಕಾಲರಾ ತಗುಲಿ ಹೆಣಗಳು ಬೀಳುತ್ತಲೇ ಇದ್ದುವು. ಭಾಸ್ಕರನಿಗೆ ನಾನಾ ಆಲೋಚನೆಗಳು : "ಆ ಹೆಣಗಳಲ್ಲೊಂದು ದಮಯಂತಿಯದ್ದಿರಬಹುದು." ತನ್ನ ಹೇಡಿತನದ ಫಲವಾಗಿ ಅವಳು ನರಕವಾಸವನ್ನು ಅನುಭವಿಸುವುದಕ್ಕಿಂತ ಹೀಗೆ ಸಾಯುವದೇ ಮೇಲು ಎನ್ನಿಸಿತು. ಭಾಸ್ಕರನಿಗೆ ತನ್ನ ವರ್ತನೆಯನ್ನು ಹೇಡಿತನವೆಂದುಕೊಳ್ಳುವುದಕ್ಕೆ ಇಷ್ಟವಿಲ್ಲ. ಬುದ್ಧಿ ಭ್ರಮಣೆಯಾದರೆ ಯಾರೇನು ಮಾಡಲಾದೀತು? ಅಥವಾ ತಾನಲ್ಲೇ ನಿಂತಿದ್ದರೂ ದಮಯಂತಿಗೆ ಏನು ಉಪಕಾರವಾಗುತ್ತಿತ್ತು? ಆ ಸಹಸ್ರಾರು ಜನರೆದುರು ತಾನೊಬ್ಬನೇನು ಮಾಡಲು ಸಾಧ್ಯವಿತ್ತು? ಹೀಗೆ ಅಂತರಾತ್ಮವನ್ನು ಸಮಾಧಾನಗೊಳಿಸಲು ನಾನಾ ಪ್ರಯತ್ನಗಳನ್ನು ಮಾಡುತ್ತಿದ್ದನು.

ದೆಹಲಿಯನ್ನು ಸೇರಿ ಐದಾರು ತಿಂಗಳಾದರೂ ದಮಯಂತಿ ಎಲ್ಲೂ ಕಾಣಲಿಲ್ಲ. ಅವಳು ಸತ್ತಿರಬೇಕೆಂದು ಭಾಸ್ಕರನಿಗೆ ದೃಢವಾಯಿತು. ಬೇರೆಯೇನಾದರೂ ಆಗಿರಬಹುದೆಂದು ಎಣಿಸುವುದಕ್ಕೂ ಅವನಿಗೆ ಇಷ್ಟವಿರಲಿಲ್ಲ. ಆದರೆ ಈ ದಿನ ಪುನಃ ದಮಯಂತಿ ಪ್ರತ್ಯಕ್ಷಳಾಗಿದ್ದಳು. ಅವಳನ್ನು ನೋಡಿದುದು ಕ್ಷಣಮಾತ್ರವಾದರೂ ಭಾಸ್ಕರನಿಗೆ ಅವಳ ಗುರುತು ಚೆನ್ನಾಗಿ ತಿಳಿಯಿತು. ಸದ್ದಿಲ್ಲದೆ ಅಲ್ಲಿಂದ ಜಾರಿಕೊಂಡಿದ್ದನು. ಆ ಸ್ಥಳವನ್ನು ಬಿಟ್ಟು ಬಂದ ಮೇಲೆ ಅವನ ಮನಸ್ಸಿಗೆ ಅಳುಕುಂಟಾಯಿತು. ತಾನು ಮಾಡಿದ, ಮಾಡುತ್ತಿರುವ ಪಾಪಕ್ಕೆ ಪ್ರಾಯಶ್ಚಿತ್ತವುಂಟೇ? ತನ್ನನ್ನೇ ನಂಬಿದ್ದವಳನ್ನು ಆ ರಾತ್ರಿ ಹಾಗೆ ಬಿಟ್ಟು ಬಂದು ಈಗ ಪುನಃ ದೊರೆತರೂ ಸಂತೈಸದಿರುವುದೆ? ದಮಯಂತಿ ಸತ್ತಳೆಂದೂ, ಅವಳನ್ನುಳಿಸಲು ತಾನೆಷ್ಟು ಕಷ್ಟಪಟ್ಟಿದ್ದರೂ ಸಾರ್ಥಕ ವಾಗುತ್ತಿರಲಿಲ್ಲವೆಂದೂ ನಂಬಿ ಮನಸ್ಸಿಗೆ ಸ್ವಲ್ಪ ಸಮಾಧಾನ ತಂದುಕೊಂಡಿದ್ದನು. ಈಗ ಅದೂ ಅಳಿಸಿಹೋಗಿ ಪುನಃ ಮನಸ್ಸಿನಲ್ಲಿ ಆಂದೋಲನವೆದ್ದಿತ್ತು.

* * *

ಭಾಸ್ಕರ ನಿಧಾನವಾಗಿ ನಡೆಯುತ್ತಿರಲು ವಸತಿಯಲ್ಲಿ ಇವನೊಡನೆ ಕೆಲಸ ಮಾಡುತ್ತಿದ್ದ ಡಾಕ್ಟರ್ ಮಹಮ್ಮದ್, ಹಿಂದಿನಿಂದ ಬಂದು ಭುಜದ ಮೇಲೆ ಕೈಹಾಕಿದರು. "ಏನು ಡಾಕ್ಟರ್, ಇಷ್ಟು ಬೇಗ ಹೊರಟಿರಿ?" ಎಂದು ಭಾಸ್ಕರ ಪ್ರಶ್ನಿಸಿದನು.

"ಇವತ್ತೇನೋ ಸ್ವಲ್ಪ ತಲೆ ನೋಯುತ್ತಿತ್ತು, ಬಂದುಬಿಟ್ಟೆ."

"ನಿಮ್ಮ ಹಾಗೆ ದುಡಿದರೆ ಯಾರಾದರೂ ಕಾಯಿಲೆ ಬೀಳುವುದೇ. ನಿಮಗೆ ವಿಶ್ರಾಂತಿಯ ಅಗತ್ಯವೇ ಇಲ್ಲವೆಂದು ಕಾಣುತ್ತೆ."

"ವಿಶ್ರಾಂತಿಯಲ್ಲಿ ಸುಖವಿಲ್ಲ ಭಾಸ್ಕರ್. ನಮ್ಮವರು ಈ ಅನಾಥರಿಗೆ ಮಾಡಿದ ಅನ್ಯಾಯವನ್ನಳಿಸಲು ನನ್ನ ಕೈಲಾದಷ್ಟು ಮಾಡುತ್ತಿದ್ದೇನೆ."

ದೂರದಿಂದ ಭಜನೆಯ ಸದ್ದು ಗಾಳಿಯ ಮೇಲೆ ಅಲೆ ಅಲೆಯಾಗಿ ತೇಲಿ ಬಂತು : "ಈಶ್ವರ್ ಅಲ್ಲಾ ತೇರೇ ನಾಮ್."

ಡಾಕ್ಟರ್ ಮಹಮ್ಮದ್ ಮುಂದುವರಿಸಿದರು : "ಇಂತಹ ಅನ್ಯಾಯಗಳು ನಡೆಯುವುವೆಂದು ಕಥೆಗಳಲ್ಲಿ ಹೇಳಿದರೆ ನಂಬಲಾಗುವುದಿಲ್ಲ; ಆದರೆ ಅವನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ. ದೇವರ ಹೆಸರಿನಲ್ಲಿ ನಾವೆಂತಹ ಪೈಶಾಚಿಕ ಕೃತ್ಯಗಳನ್ನು ಮಾಡುತ್ತೇವೆ. ಆದರೆ ಈ ಅನುಭವದಿಂದ ಒಂದು ದೊಡ್ಡ ಪಾಠವನ್ನೇ ಕಲಿತಂತಾಯಿತು. ನಿಮ್ಮ ಹಿಂದೂ ಸ್ತ್ರೀಯರಲ್ಲಿ ಇಷ್ಟು ವಿಶ್ವಾಸವಿದೆಯೆಂದು ನನಗೆ ತಿಳಿದಿರಲಿಲ್ಲ. ಎಲ್ಲರನ್ನೂ, ಎಲ್ಲವನ್ನೂ ಕಳೆದುಕೊಂಡರೂ ಎದೆಗೆಡದೆ ಜೀವನವನ್ನೆದುರಿಸಲು ಸಿದ್ಧವಾಗಿದ್ದಾರೆ. ಆ ಶಕ್ತಿಯಿರುವವರೆಗೂ ನಮ್ಮ ದೇಶಕ್ಕೇನೂ ಭಯವಿಲ್ಲ. ಈ ದೇಶ ಕೆಲವು ದಿನ ನರಳಿ, ಪುನಃ ಹೆಚ್ಚು ವೈಭವದಿಂದ ಮೆರೆಯುತ್ತದೆನ್ನುವುದಕ್ಕೆ ಸಂದೇಹವಿಲ್ಲ."

ಭಾಸ್ಕರ ಮಾತನಾಡದೆ ಮುಂದೆ ನಡೆಯುತ್ತಿದ್ದನು. ಆತ್ಮವಿಶ್ವಾಸ! ದಮಯಂತಿಗೂ ಆತ್ಮವಿಶ್ವಾಸವಿತ್ತೆ? ಅವಳು ಧೈರ್ಯದಿಂದ ಮುನ್ನಡೆಯುವ ಸಾಮರ್ಥ್ಯವನ್ನು




ನವಕರ್ನಾಟಕ ಪ್ರಕಾಶನದ ೧೫ ಶೈಕ್ಷಣಿಕ ಕೃತಿಗಳ ಲೋಕಾರ್ಪಣೆಯು ದಿನಾಂಕ ೦೧-೦೭-೨೦೧೭ ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ನಡೆಯಿತು. ಶ್ರೀ ಟಿ. ಎಂ. ಕುಮಾರ್ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ ಕೃತಿಗಳನ್ನು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಡಾ॥ ಸಿದ್ದನಗೌಡ ಪಾಟೀಲ, ಶ್ರೀ ಅಡ್ಡೂರು ಕೃಷ್ಣರಾವ್, ಡಾ॥ ಮಹಾಬಲೇಶ್ವರ ರಾವ್ ಡಾ॥ ಪ್ರತಿಭಾ ಕಾರಂತ್, ಶ್ರೀ ಟಿ. ಎಂ. ಕುಮಾರ್, ಡಾ॥ ಎ. ಓ. ಆವಲ ಮೂರ್ತಿ, ಶ್ರೀ ಎಸ್. ಮಂಜುನಾಥ ಉಪಸ್ಥಿತರಿದ್ದರು.

ಹೊಂದಿದ್ದಳೇ ? ಮಹಮ್ಮದರು ಒಟ್ಟಾಗಿ ಹಿಂದೂ ಸ್ತ್ರೀಯರನ್ನು ಸೇರಿಸಿ ಮಾತನಾಡುತ್ತಿದ್ದರೂ ಭಾಸ್ಕರನಿಗೆ ಕಾಣುತ್ತಿದ್ದುದು ದಮಯಂತಿಯೊಬ್ಬಳು ಮಾತ್ರ.

"ನಾನು ಅಮೃತಸರದಲ್ಲಿದ್ದಾಗ ಒಂದು ನಿರಾಶ್ರಿತರ ತಂಡ ಅಲ್ಲಿಗೆ ಬಂತು. ಹೊರಟವರು ಹತ್ತು ಸಾವಿರ ಜನವಾದರೂ ಅಲ್ಲಿಗೆ ತಲುಪಿದವರು ಎರಡೇ ಸಾವಿರ. ಅವರನ್ನು ಊರೊಳಗೆ ಸೇರಿಸಲೂ ಕೂಡ ಹೆದರಿಕೆಯಾಗುತ್ತಿತ್ತು. ಆದರೆ ಆ ಹೆಣ್ಣುಮಕ್ಕಳ ಧೈರ್ಯವನ್ನು ನೋಡಿ ನನಗೆಷ್ಟೋ ಸಂತೋಷವಾಯಿತು; ಕಾಯಿಲೆಯವರಿಗೆ ತಾವೇ ಇಂಜಕ್ಷನ್ ಕೊಡುವುದನ್ನು ಕೂಡ ಕಲಿತಿದ್ದರು."

ಭಾಸ್ಕರನ ಮನಸ್ಸು ಎಲ್ಲೋ ಅಲೆದಾಡುತ್ತಿತ್ತು. ಮಹಮ್ಮದರಿಗೆ ತಾವೇ ಮಾತನಾಡುತ್ತಿರುವುದು ತಿಳಿದು, "ಬರುತ್ತೇನೆ ಡಾಕ್ಟರ್" ಎಂದು ಬೇರೆ ಬೀದಿಗೆ ತಿರುಗಿದರು.

ಪುನಃ ಎರಡು ಮೂರು ದಿನ ಭಾಸ್ಕರ ಆ ವಸತಿಯ ಕಡೆ ಹೋಗಲಿಲ್ಲ. ಕಡೆಗೆ ಮಹಮ್ಮದರೇ ಹುಡುಕಿಕೊಂಡು ಬಂದರು.

"ಏಕೆ ಡಾಕ್ಟರ್ ಕಾಣಿಸಲೇ ಇಲ್ಲ ?"

"ಮೈಯ್ಯಲ್ಲಿ ಸ್ವಲ್ಪ ಸ್ವಸ್ಥವಿರಲಿಲ್ಲ."

"ಇವತ್ತು ಬರುತ್ತೀರಿ ತಾನೇ ?"

"ಏಕೆ" ಕುತೂಹಲದಿಂದ ಭಾಸ್ಕರ ಕೇಳಿದರು.

"ಸುಮ್ಮನೆ ಕೇಳಿದೆ. ಒಬ್ಬ ಹೆಂಗಸಿಗೆ ನೋವು ಪ್ರಾರಂಭವಾಗಿದೆ, ಆಪರೇಷನ್ನೇ ಆಗಬೇಕೆಂದು ತೋರುತ್ತೆ. ನೀವೂ ಇದ್ದರೆ ಸಹಾಯವಾಗುತ್ತದೆ."

ಭಾಸ್ಕರನಿಗೆ ನಾನಾ ಯೋಚನೆಗಳುಂಟಾದುವು. ದಮಯಂತಿಗೇ ಆಪರೇಷನ್ನಿರಬಹುದೇ? ಹೋಗಲು ಮನಸ್ಸು ಹಿಂಜರಿಯಿತು. ಆದರೂ ಒಂದು ವಿಲಕ್ಷಣ ಕುತೂಹಲವು ಅವನ ಮನಸ್ಸನ್ನಾವರಿಸಿತು. ಬಟ್ಟೆಗಳನ್ನು ಧರಿಸಿ ಮಹಮ್ಮದರೊಡನೆ ಹೊರಟನು.

ವಸತಿಯಲ್ಲಿ ಸರಿಯಾದ ಜಾಗವೇ ಇರಲಿಲ್ಲ. ಇದ್ದುದರೊಳಗೆ ನಾಲ್ಕು ಬಟ್ಟೆ ಮರೆಮಾಡಿ ರೋಗಿಯನ್ನು ಹಾಸಿಗೆಯ ಮೇಲೆ ಮಲಗಿಸಿದ್ದರು. ರೋಗಿಯನ್ನು ನೋಡಿ ಭಾಸ್ಕರ ಉಸಿರನ್ನೆಳೆದನು. ರೋಗಿ ದಮಯಂತಿಯ ವಯಸ್ಸಿನವಳೇ. ಆದರೂ ಅವಳಲ್ಲ. ಮಹಮ್ಮದರು ಪರೀಕ್ಷಿಸಿ ಆಪರೇಷನ್ನೇ ಆಗಬೇಕೆಂದು ನಿರ್ಧರಿಸಿದ್ದರು. ದಮಯಂತಿ ಒಂದು ಪಾತ್ರೆಯಲ್ಲಿ ಬಿಸಿನೀರನ್ನು ತಂದಳು. ಭಾಸ್ಕರನ ಮೈ ಬೆವತಿತು. ದಮಯಂತಿಯೂ ಅವನನ್ನು ನೋಡಿದಳು. ಒಂದು ನಿಮಿಷ ಪರಿಚಯದ ಗಾಬರಿಯಾದರೂ ಮರುಕ್ಷಣ ಅಪರಿಚಿತಳಂತೆ ಕೆಲಸದಲ್ಲಿ ಮಗ್ನಳಾದಳು.

ಆಪರೇಷನ್ ಮುಗಿದು ರೋಗಿಗೆ ಜ್ಞಾನ ಬರುವ ವೇಳೆಗೆ ಒಂದು ಗಂಟೆ ಆಯಿತು. ಮಗು ಹೊಟ್ಟೆಯಲ್ಲೇ ಸತ್ತಿತ್ತು. ತಾಯಿಯ ಪ್ರಾಣ ಉಳಿಯುವುದೇ ಕಷ್ಟವಾಯಿತು. ಎಲ್ಲಾ ಮುಗಿದಮೇಲೆ ತಿರುಗಿ ನೋಡಲು ದಮಯಂತಿ ಅಲ್ಲಿರಲಿಲ್ಲ. ಪುನಃ ಭಾಸ್ಕರ ಹೊರಟು ಬರುವವರೆಗೂ ಅವನೆದುರಿಗೆ ದಮಯಂತಿ ಸುಳಿಯಲಿಲ್ಲ.

ಅನಂತರ ಎರಡು ಮೂರು ದಿನವಾದರೂ ದಮಯಂತಿ ಆ ವಸತಿಯಲ್ಲಿ ಕಾಣಬರಲಿಲ್ಲ. ಮಹಮ್ಮದರೇನೋ ತಪ್ಪದೆ ಬರುತ್ತಿದ್ದರು. ಭಾಸ್ಕರ ಕಣ್ಣಲ್ಲಿ ಕಣ್ಣಿಟ್ಟು ಕಾದರೂ ದಮಯಂತಿ ಕಾಣಿಸಲಿಲ್ಲ. ತನ್ನ ಮನಸ್ಸಿನ ಭಾವನೆ ಭಾಸ್ಕರನಿಗೆ ಅರ್ಥವಾಗುತ್ತಿರಲಿಲ್ಲ. ದಮಯಂತಿ ಹೆಂಡತಿಯೆಂಬ ಸ್ವಕೀಯ ಭಾವನೆ ಅವನಿಗೆ ಇರಲಿಲ್ಲ. ತಾವು ಜತೆಯಲ್ಲಿ ಸಂಸಾರ ಮಾಡಿ ಎಷ್ಟೋ ಯುಗಾಂತರಗಳಾದ ಹಾಗಿತ್ತು. ದಮಯಂತಿಯನ್ನು ಕಂಡರೂ ತಪ್ಪಿಸಿಕೊಳ್ಳಬೇಕೆಂಬ ಹಂಬಲವೇ ಇತ್ತು. ಆದರೂ ತೀರ ಅವಳನ್ನು ಬಿಟ್ಟುಕೊಡಲು ಇಷ್ಟವಿರಲಿಲ್ಲ. ತನ್ನ ಹೊಣೆ ತೀರ ತಪ್ಪಿತೆಂಬ ನೆಮ್ಮದಿಯಿರಲಿಲ್ಲ. ಕಡೆಗೊಂದು ದಿನ ಮಹಮ್ಮದರನ್ನೇ ಕೇಳಿದನು.

"ಆ ದಿನ ಆಪರೇಷನ್ ಆದಾಗ ಸಹಾಯಕ್ಕಿದ್ದಳಲ್ಲಾ, ಆ ಹುಡುಗಿ ಎಲ್ಲಿ ?"

"ಯಾರು ? ಆ ಚೆಲುವಾಗಿ ಉದ್ದಕ್ಕಿದ್ದ ಹುಡುಗಿಯೇ ?"

ಭಾಸ್ಕರನಿಗೆ ಮಹಮ್ಮದರ ಈ ವರ್ಣನೆ ರುಚಿಸಲಿಲ್ಲ. ತನ್ನ ಹೆಂಡತಿಯ ಸೌಂದರ್ಯವನ್ನು ಈ ಮುಸಲ್ಮಾನ ವರ್ಣಿಸಬೇಕೆ ? ಆದರೆ ಆತನಿಗೆ ವಿಷಯ ತಿಳಿಯದುದಲ್ಲ.

"ಹೌದು ಆ ಹುಡುಗಿಯೇ."

"ನೀವು ಹೇಳುವುದು ದಮಯಂತಿಯಲ್ಲವೆ ? ರತ್ನದಂತಹ ಹುಡುಗಿ, ಎಂತಹ ತರಬೇತಾದ ನರ್ಸುಗಳಿಗೆ ಕೂಡ ಆಕೆಯ ಹಾಗೆ ಕೆಲಸ ಮಾಡಲು ಬರುವುದಿಲ್ಲ. ಎಷ್ಟೋ ವೇಳೆ ಆಕೆಯಿದ್ದರೆ ನಮ್ಮ ಅಗತ್ಯ ಕೂಡ ಇಲ್ಲ. ಆಕೆಯನ್ನು ಇನ್ನೊಂದು ವಸತಿಗೆ ಕಳುಹಿಸಿದ್ದೇನೆ" ಎಂದರು.

ಭಾಸ್ಕರನಿಗೆ ವಿಚಿತ್ರ ಅನುಭವವುಂಟಾಯಿತು. ತನ್ನ ಹೆಂಡತಿಯನ್ನು ವರ್ಣಿಸುವುದಕ್ಕೆ ಇವನಾರು ? ಅವಳನ್ನು ಅಲ್ಲಿ ಇಲ್ಲಿ ಕಳುಹಿಸುವ ಹಕ್ಕು ಇವನಿಗೆ ಹೇಗುಂಟಾಯಿತು ? ಆದರೆ ಸಿಯಾಲ್‌ಕೋಟೆಯಲ್ಲಿ ಅವಳನ್ನು ಬಿಟ್ಟು ಓಡಿದಾಗಲೇ ತನ್ನ ಹಕ್ಕನ್ನು ಕಳೆದುಕೊಂಡ ಹಾಗಾಗಲಿಲ್ಲವೆ ? ಮನಸ್ಸು ಒಪ್ಪಲಿಲ್ಲ. ಮಹಮ್ಮದರಿಗೆ ತನ್ನ ಗುರುತನ್ನು ಹೇಳಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ, ಸುಮ್ಮನಾದನು.

* * *

ಭಾಸ್ಕರ ಪೇಟೆಯ ಕಡೆ ಹೊರಟಿದ್ದನು. ಅದು ಪೇಟೆಯೆನ್ನುವ ಹಾಗೇ ಇರಲಿಲ್ಲ. ಎಲ್ಲೆಲ್ಲೂ ಗೊಂದಲ. ಜನಜೀವನವೇ ಬದಲಾಯಿಸಿ ಹೋಗಿತ್ತು. ರಸ್ತೆಯ ಪಕ್ಕಗಳಲ್ಲೆಲ್ಲಾ ಸಣ್ಣ ಸಣ್ಣ ಅಂಗಡಿಗಳನ್ನು ನಿರಾಶ್ರಿತರು ತೆರೆದಿದ್ದರು. ಮನುಷ್ಯನ ಜೀವನದಲ್ಲಿ ಪರಮಾತ್ಮನು ಆಶಾಕಿರಣವನ್ನಿಡದಿದ್ದರೆ ಲೋಕವ್ಯಾಪಾರ ಸಾಗುತ್ತಿತ್ತೆ ? ತನ್ನದೆನ್ನುವುದನ್ನೆಲ್ಲಾ ಕಳೆದುಕೊಂಡು ದುಃಖಸಾಗರದಲ್ಲಿ ತೇಲಿಬಂದು ಅಳಿದುಳಿದ ದಾರಗಳನ್ನೇ ಹಿಡಿದು ತಮ್ಮ ಭವಿಷ್ಯತ್ತನ್ನು ನೇಯ್ದುಕೊಳ್ಳುತ್ತಿದ್ದರು. ಕೆಲವು ಬಾರಿ ಜೀವನದಲ್ಲೇ ಬೇಸರ ಬಂದಿರಬಹುದು. ಕೆಲವು ನಿರ್ಬಲ ಜೀವಗಳು ಹಿಮ್ಮೆಟ್ಟಿ ನಾಶವಾಗಿರಬಹುದು. ಆದರೆ ಆಶಾಕಿರಣ ಅನೇಕರ ಜೀವನವನ್ನು ಮುಂದಕ್ಕೆ ನೂಕಿಕೊಂಡು ಹೊರಟಿತ್ತು. ಭಾಸ್ಕರ ತನ್ನ ಕಥೆಯನ್ನೇ ಚಿಂತಿಸುತ್ತಾ ನಡೆದನು. ದಮಯಂತಿಗೇನೂ ತನ್ನ ಅಗತ್ಯವಿದ್ದಂತಿರಲಿಲ್ಲ. ನೋಡಿಯೂ, ಗುರುತು ಹಿಡಿದೂ, ಒಂದು ಮಾತನ್ನೂ ಆಡದೆ ಹೊರಟುಹೋಗಿದ್ದಳು. ಪುನಃ ತನ್ನನ್ನು ಸಂಧಿಸುವ ಪ್ರಯತ್ನವನ್ನೇ ಮಾಡಿರಲಿಲ್ಲ. ತಾನಾದರೂ ಅವಳ ವಿಚಾರವಾಗಿ ಏಕೆ ಚಿಂತಿಸಬೇಕು ? ಆದರೆ ಅವಳು ತನ್ನ ಹೆಂಡತಿಯೆನ್ನುವ ಭಾವನೆಯನ್ನು ಸಂಪೂರ್ಣವಾಗಿ ಬಿಡಲು ಅವನಿಗೆ ಸಾಧ್ಯವಾಗಲಿಲ್ಲ.

ತಲೆಯೆತ್ತಿ ನೋಡಿ ತನ್ನ ಕಣ್ಣನ್ನು ತಾನೇ ನಂಬಲಾರದೆ ಹೋದನು. ಎದುರಿಗೆ ಸ್ವಲ್ಪ ದೂರದಲ್ಲಿ ಡಾಕ್ಟರ್ ಮಹಮ್ಮದರೂ ದಮಯಂತಿಯೂ ಹೋಗುತ್ತಿದ್ದರು. ದಮಯಂತಿ ನಿರ್ಗತಿಕ, ನಿರಾಶ್ರಿತ ಹೆಣ್ಣಾಗಿರಲಿಲ್ಲ. ಜೀವನದ ಸವಿಯನ್ನು ಅವಳು ಸ್ವಲ್ಪವೂ ಕಳೆದುಕೊಂಡ ಹಾಗಿರಲಿಲ್ಲ. ನಗುತ್ತಾ, ಮಾತನಾಡುತ್ತ ಹೋಗುತ್ತಿದ್ದಳು. ಅವಳು ಅಷ್ಟು ಚೆಲುವೆಯೆಂಬುದನ್ನು ಭಾಸ್ಕರ ಅದುವರೆಗೂ ಗಮನಿಸಿರಲಿಲ್ಲ. ಅವಳುಟ್ಟಿದ್ದುದು ಸಾಧಾರಣ ಬಿಳಿ ಸೀರೆ, ಮುಡಿದಿದ್ದುದೊಂದು ರೋಜಾ ಹೂ. ಬೇರೆ ಯಾವ ಆಭರಣವೂ ಇರಲಿಲ್ಲ. ಆದರೆ ನಡಿಗೆಯ ಗಾಂಭೀರ್ಯವೂ ಸೊಬಗೂ ಎಂತಹ ದಿವ್ಯಾಭರಣಭೂಷಿತೆಯಾದ ಮಹಾರಾಣಿಯನ್ನೂ ನಾಚಿಸುವಂತಿತ್ತು. ಅವಳು ಕುರೂಪಿಯಲ್ಲವೆಂಬುದನ್ನು ಭಾಸ್ಕರ ತಿಳಿದಿದ್ದನು. ಆದರೆ ತನ್ನವಳಾಗಿದ್ದಾಗ ಆ ಸೌಂದರ್ಯದ ಬೆಲೆಯನ್ನವನರಿತಿರಲಿಲ್ಲ. ಈಗ ಕೈತಪ್ಪಿ ಹೋಗಿ ಆ ಸೌಂದರ್ಯಕ್ಕೆ ಹೆಚ್ಚಳವುಂಟಾಗಿದ್ದಿತು. ಇದ್ದಕ್ಕಿದ್ದಂತೆ ಅವಳ ಕೊರಳಲ್ಲಿ ತಾನು ಕಟ್ಟಿದ್ದ ಮಾಂಗಲ್ಯವಿದೆಯೇ ಎಂಬ ಕುತೂಹಲವೂ ಭಾಸ್ಕರನಿಗೆ ಉಂಟಾಯಿತು.

ದಮಯಂತಿಯೂ ಮಹಮ್ಮದರೂ ಒಂದು ಅಂಗಡಿಯೊಳಕ್ಕೆ ಹೋದರು. ಭಾಸ್ಕರ ಅಲ್ಲೇ ಮರೆಯಾಗಿ ನಿಂತನು. ಅವರ ವ್ಯಾಪಾರ ಬೇಗ ಮುಗಿಯಲಿಲ್ಲ. ಭಾಸ್ಕರನಿಗೆ ಕಾಲುಗಳು ನೋಯಲಾರಂಭಿಸಿದುವು. ಅವರು ಬೇರೆ ಎಲ್ಲಿಗಾದರೂ ಹೊರಟುಹೋಗಿರಬಹುದೆಂದೇ ಅವನು ನಿರ್ಧರಿಸಿದನು. ಹೊರಡುವಷ್ಟರಲ್ಲಿ ಇಬ್ಬರೂ ಹೊರಗೆ ಬಂದರು. ಮಹಮ್ಮದರು ಕೆಲವು ಕಾಗದದ ಪೊಟ್ಟಣಗಳನ್ನು ಹಿಡಿದಿದ್ದರು. ಭಾಸ್ಕರ ದಮಯಂತಿಯ ಕೊರಳನ್ನು ನೋಡಿದನು, ಬರಿದಾಗಿತ್ತು.

* * *

ಮಾರನೆಯ ದಿನ ದಮಯಂತಿಯನ್ನು ಕಾಣಲೇಬೇಕೆಂದು ಭಾಸ್ಕರ ನಿರ್ಧರಿಸಿದನು. ಅನಿಶ್ಚಯ ಸ್ಥಿತಿಯಲ್ಲಿರುವುದು ಅಸಾಧ್ಯವಾಗಿ ತೋರಿತು. ಅವಳ ಕೊರಳು ಬರಿದಾಗಿದ್ದುದೇಕೆ ? ಅವಳೇ ಮಾಂಗಲ್ಯವನ್ನು ಕಿತ್ತೊಗೆದಿದ್ದಳೋ ? ತನ್ನ ಸಂಬಂಧವನ್ನು ಸಂಪೂರ್ಣವಾಗಿ ತ್ಯಜಿಸಿದ್ದಳೋ ? ಸಣ್ಣ ಆಸೆಯೊಂದು ಭಾಸ್ಕರನಲ್ಲಿ ತಲೆದೋರಿತು – ಯಾರೋ ದುರಾತ್ಮರು ಅದನ್ನೂ ಅಪಹರಿಸಿರಬಹುದು. ತಾನು ಬಿಟ್ಟು ಬಂದಮೇಲೆ ಅವಳೆಷ್ಟೋ ತೊಂದರೆಗಳಿಗೆ ಸಿಕ್ಕಿದ್ದಳು. ಮಾಂಗಲ್ಯವನ್ನು ಮಾತ್ರ ಹೇಗೆ ಉಳಿಸಿಕೊಳ್ಳಬಲ್ಲಳು ? ಆದರೂ ಅವಳ ನಡವಳಿಕೆಯನ್ನು ನೋಡಿದರೆ ಕಿತ್ತು ಹಾಕುವುದೂ ಅಸಂಭವವಾದುದಲ್ಲ. ಮೊದಲಿನ ದಮಯಂತಿಯೆಲ್ಲಿ ? ಇವಳೆಲ್ಲಿ ? ಅವಳು ಬಾಗಿಲು ದಾಟಿ ಹೋಗಲು ಕೂಡ ಹೆದರುತ್ತಿದ್ದಳು. ಪುನಃ ಆ ರಾತ್ರಿಯ ನೆನಪಾಯಿತು. ಆ ದಿನ ಅವಳೆಷ್ಟು ಹೆದರಿದಳೋ ! ಏನೇನು ಕಷ್ಟಪಟ್ಟಳೋ ! ಈಗ ಅವಳಿಗೆ ಯಾವ ಹೆದರಿಕೆಯೂ ಇದ್ದಹಾಗಿರಲಿಲ್ಲ. ಮಹಮ್ಮದರು ಹೇಳಿದ "ಆತ್ಮವಿಶ್ವಾಸ" ಅವಳಿಗೆ ಸಂಪೂರ್ಣವಾಗಿ ಇದ್ದಹಾಗಿತ್ತು. ಅವಳನ್ನು ಕಾಣಬೇಕೆಂದು ನಿರ್ಧರಿಸಿದರೂ ಭಾಸ್ಕರನಿಗೆ ಅದು ಏತಕ್ಕೆಂದು ಸ್ಪಷ್ಟವಾಗಿ ತಿಳಿಯಲಿಲ್ಲ. ನಿರ್ಬಲೆಯಾಗಿ ಹೆದರಿದ ದಮಯಂತಿ ಸಿಕ್ಕಿದ್ದರೆ ರಕ್ಷಣೆ ನೀಡಿ ಕರೆದುಕೊಳ್ಳಬಹುದಾಗಿತ್ತು. ಅವಳು

ಜಾತಿ ಕೆಟ್ಟಿದ್ದರೂ ಧಾರಾಳ ಬುದ್ಧಿಯಿಂದ ಕ್ಷಮಿಸಿ ಸ್ವೀಕರಿಸಬಹುದಾಗಿತ್ತು. ಅವಳು ತನ್ನನ್ನು ಕಂಡು ದೋಷಾರೋಪಣೆ ಮಾಡಿದರೆ ಏನಾದರೂ ಉತ್ತರ ಹೇಳಬಹುದಾಗಿತ್ತು. ಆದರೆ ಈ ದಮಯಂತಿ ಕ್ಷಮೆ ಬೇಡುವ ಅಬಲೆಯಾಗಿಯೂ ಇರಲಿಲ್ಲ. ತನ್ನನ್ನು ಕಾಣಬೇಕೆಂಬ ಹಂಬಲವೂ ಅವಳಿಗಿರಲಿಲ್ಲ. ಅವಳ ಅಲಕ್ಷ್ಯಕ್ಕೆ ಏನು ಪ್ರತೀಕಾರವೆಂದೇ ಭಾಸ್ಕರನಿಗೆ ತೋರಲಿಲ್ಲ. ಅವಳನ್ನು ನೋಡಲೇಬೇಕೆಂದು ನಿರ್ಧರಿಸಿದ ಮೇಲೆ ಮನಸ್ಸು ಸ್ವಲ್ಪ ಹಗುರವಾಯಿತು. ನಿಧಾನವಾಗಿ ವಸತಿಯ ಕಡೆ ಹೊರಟನು. ಏನೆಂದು ಮಾತಿಗೆ ಪ್ರಾರಂಭಿಸಬೇಕೆಂಬುದೇ ದೊಡ್ಡ ಸಮಸ್ಯೆಯಾಗಿತ್ತು. ದಮಯಂತಿ ವಸತಿಯ ಬಾಗಿಲಲ್ಲೇ ನಿಂತಿದ್ದಳು. ಇವನನ್ನು ನೋಡಿ ಕೈಜೋಡಿಸಿ "ನಮಸ್ತೇ" ಎಂದಳು. ಭಾಸ್ಕರನಿಗೆ ಅವಳ ಮುಖದಲ್ಲಿ ಮೇರೆಯಿಲ್ಲದ ತಿರಸ್ಕಾರ ಕಂಡಂತಾಯಿತು; ದಿಕ್ಕು ತೋರದಂತಾಗಿ "ದಮಯಂತೀ" ಎಂದನು. ಮುಂದೆ ಮಾತನ್ನಾಡುವುದರೊಳಗಾಗಿ ಮಹಮ್ಮದರು ಒಳಗಿನಿಂದ ಬಂದರು. ಬಂದವರೇ ದಮಯಂತಿಯನ್ನು ಕುರಿತು –

"ಗಾಬರಿಯಿಂದ ಅವಳಿಗೆ ಮನಸ್ಸು ಕೆಟ್ಟಿದೆ. ಆಪರೇಷನ್ ಆದಾಗಲೇ ಹೀಗಾಗಬಹುದೆಂಬ ಹೆದರಿಕೆ ನನಗಿತ್ತು. ಗಲಾಟೆಯಿಲ್ಲದೆ ಹುಷಾರಾಗಿ ನೋಡಿಕೊಳ್ಳಬೇಕು" ಎಂದರು. ಅಲ್ಲಿಂದಾಚೆಗೆ ದಮಯಂತಿಯ ಪ್ರಪಂಚದಲ್ಲಿ ಭಾಸ್ಕರನಿಗೆ ಸ್ಥಳವೇ ಇರಲಿಲ್ಲ. ರೋಗಿಗೆ ಮಾಡಬೇಕಾದ ಉಪಚಾರಗಳನ್ನು, ಕೊಡಬೇಕಾದ ಔಷಧಿಗಳನ್ನು ದಮಯಂತಿ ಮಹಮ್ಮದರಿಂದ ಸೂಕ್ಷ್ಮವಾಗಿ ವಿಚಾರಿಸಿ ತಿಳಿದುಕೊಂಡಳು. ಮಹಮ್ಮದರು "ನೀವು ರೋಗಿಯ ಹತ್ತಿರ ಇದ್ದರೆ ನನಗೇನೂ ಯೋಚನೆಯಿಲ್ಲ. ಡಾಕ್ಟರ್‌ನ ಅಗತ್ಯವೇ ಇಲ್ಲ" ಎಂದು ದಮಯಂತಿಗೆ ತಮ್ಮ ಮೆಚ್ಚಿಕೆಯನ್ನು ಸೂಚಿಸಿದರು.

ದಮಯಂತಿ ಕೃತಜ್ಞತೆಯಿಂದ, "ನನ್ನನ್ನೊಬ್ಬ ಮನುಷ್ಯಳನ್ನಾಗಿ ಮಾಡಿದವರೇ ನೀವು" ಎಂದಳು. ಅವಳ ಧ್ವನಿಯಲ್ಲಿದ್ದ ಭಕ್ತಿ ವಿಶ್ವಾಸಗಳು ಭಾಸ್ಕರನನ್ನು ನಡುಗಿಸಿದುವು. ತನ್ನ ವಿಚಾರವಾಗಿ ಅವಳಿಗಿದ್ದ ಅಭಿಪ್ರಾಯವೇನು ?

ಮಹಮ್ಮದರು – "ಬರುತ್ತೇನೆ, ನೀವೂ ಬರುತ್ತೀರಾ ಭಾಸ್ಕರ್ ?" ಎಂದರು.

"ಇಲ್ಲ, ಇನ್ನೂ ಈಗತಾನೆ ಬರುತ್ತಿದ್ದೇನೆ."

ದಮಯಂತಿ, "ಸ್ವಲ್ಪ ಇರಿ ನಾನು ಬರುತ್ತೇನೆ. ಪೇಟೆಯಲ್ಲಿ ಇಳಿಸಿಬಿಡಿ" ಎಂದು ಮಹಮ್ಮದರೊಡನೆ ಕಾರಿನಲ್ಲಿ ಹೊರಟಳು. ಅವಳ ಸದಭಿಪ್ರಾಯವನ್ನು ಪುನಃ ಸಂಪಾದಿಸದ ಹೊರತು ಸಮಾಧಾನವಾಗಲಾರದೆಂದು ಭಾಸ್ಕರನು ತಟ್ಟನೆ ತಿಳಿದನು. ಅವಳೀಗ ಪೇಟೆಗೆ ಹೊರಟುಹೋದುದೇಕೆ ? ತನ್ನಿಂದ ತಪ್ಪಿಸಿಕೊಂಡೆ ? ಹಾಗಾದರೆ ಅವಳಿಗೂ ಅಳುಕಿರಬಹುದೆ ? ಹಿಂದಿನ ಕಥೆಯನ್ನು ಅವಳೂ ನೆನೆಯುತ್ತಿದ್ದಳೋ ಅಥವಾ ಆ ಅಧ್ಯಾಯವನ್ನು ಪೂರ್ಣವಾಗಿ ಅಳಿಸಿಯೇಬಿಟ್ಟಿದ್ದಳೋ ? ಭಾಸ್ಕರನಿಗೊಂದೂ ತೋರಲಿಲ್ಲ.

✶ ✶ ✶

ವಸತಿಯಲ್ಲಿ ದಮಯಂತಿಯ ಆರೈಕೆಯಲ್ಲಿದ್ದ ರೋಗಿಯ ಸ್ಥಿತಿ ಕಠಿಣವಾಗಲು ಆಸ್ಪತ್ರೆಗೆ ಸಾಗಿಸಿದ್ದರು. ದಮಯಂತಿಯೂ ಅಲ್ಲಿಯೇ ಇರುತ್ತಿದ್ದಳು. ರೋಗಿಯ ಭಯಂಕರ ಕೂಗಾಟ ಕಿರಿಚಾಟಗಳನ್ನು ತಡೆಯುವುದೇ ಕಷ್ಟವಾಗುತ್ತಿತ್ತು. ದಮಯಂತಿಯೂ ಘೋರ ಯಾತನೆಯನ್ನನುಭವಿಸಿ ಪಾರಾಗಿ ಬಂದವಳೇ. ಆದರೆ ಅರಿವಿದ್ದಾಗ ಅನುಭವಿಸಿದ ಯಾತನೆಗಳಿಗಿಂತ ಈ ರೋಗಿಯ ಅರೆಮರುಳು ಕೂಗಾಟ ಘೋರವಾಗಿತ್ತು. ದಮಯಂತಿಗೆ ಕಷ್ಟಗಳೆಲ್ಲಾ ಮರುಕಳಿಸಿದಂತಿತ್ತು. ಅವಳಿಗೂ ಕಿರುಚುವ ಹಾಗಾಗುತ್ತಿತ್ತು.

ಕೊನೆಗೊಂದು ಸಂಜೆ ಆ ರೋಗಿಯ ಪ್ರಾಣ ಹಾರಿಹೋಗಿ ಅನಂತ ಶಾಂತಿಯನ್ನು ಪಡೆಯಿತು. ಹತ್ತು ದಿನಗಳಿಂದ ಒಂದೇ ಸಮನಾಗಿ ಕೂಗುತ್ತಿದ್ದ ವ್ಯಕ್ತಿ ನಿಶ್ಶಬ್ದವಾಗಿ ಬಿದ್ದಿತ್ತು. ದಮಯಂತಿಗೆ ಲೋಕದಲ್ಲೆಲ್ಲಾ ತಾನು ಏಕಾಂಗಿಯೆಂಬಂತೆ ತೋರಿತು. ಇದುವರೆಗೆ ಕೆಲಸದಲ್ಲಿ ತನ್ನನ್ನು ಮರೆತು ಶಾಂತಳಾಗಿದ್ದಳು. ಈಗ ಇದ್ದಕ್ಕಿದ್ದಂತೆ ಜೀವನ ಒಂದು ಭಯಂಕರ ಸಮಸ್ಯೆಯಾಗಿ ತೋರಿತು. ಕೊಠಡಿಯಿಂದ ಹೊರಗೆ ಬಂದಳು. ಎದುರಿಗೆ ಮಹಮ್ಮದರು ಕಾಣಿಸಿದರು. ವಿಚಾರವನ್ನಾಗಲೇ ತಿಳಿದುಕೊಂಡಿದ್ದುದರಿಂದ ಹೆಚ್ಚು ಮಾತನಾಡದೆ ದಮಯಂತಿಯ ಭುಜವನ್ನು ನೇವರಿಸಿದರು. ದಮಯಂತಿಯ ಕಣ್ಣೀರಿನ ಕಟ್ಟೊಡೆಯಿತು. ಅಲ್ಲಿದ್ದ ಬೆಂಚಿನ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮಹಮ್ಮದರ ಕಣ್ಣಿನಿಂದಲೂ ನೀರಿನ ಕೋಡಿ ಹರಿಯಿತು. "ದಮಯಂತೀ, ದಮಯಂತೀ" ಎನ್ನುತ್ತಾ ನಿಂತಿದ್ದರು. ಕೊನೆಗೆ ದಮಯಂತಿಯು ಕಣ್ಣೊರೆಸಿಕೊಂಡು ಸಮಾಧಾನ ಹೊಂದಲು ಪ್ರಯತ್ನಿಸಿದಳು.

"ನಿನಗೆ ದುಡಿದೂ ದುಡಿದೂ ಸಾಕಾಗಿದೆ ದಮಯಂತೀ, ಹೀಗಾದರೆ ನೀನು ಕಾಯಿಲೆ ಬೀಳುತ್ತೀ. ಎಲ್ಲಾದರೂ ಹೋಗಿ ನಾಲ್ಕು ದಿನ ಸುಧಾರಿಸಿಕೋ."

"ಎಲ್ಲಿಗೆ ಹೋಗಲಿ ?" ಮಹಮ್ಮದರಿಗೆ ಈ ನಿಸ್ಸಹಾಯಕ ವಾಕ್ಯವನ್ನು ಕೇಳಿ ಕರುಳು ಕಿವುಚಿತು. ದಮಯಂತಿ ನಿರ್ಗತಿಕ ನಿರಾಶ್ರಿತೆ. ಅವಳವರೆನ್ನುವ ವ್ಯಕ್ತಿಯೊಂದಾದರೂ ಇಲ್ಲ. ಅವಳ ನಗುಮುಖ ಹೃದಯದಲ್ಲಡಗಿದ್ದ ದುಃಖವನ್ನೆಲ್ಲಾ ಮರೆಸಿತ್ತು. ದುಃಖವೇ ಇಲ್ಲವೇನೋ ಎನ್ನುವಷ್ಟು ಮಾಯೆಯ ಮುಸುಕನ್ನೆಳೆದಿತ್ತು.

"ದಮಯಂತೀ" ಎಂದು ಮೃದುವಾಗಿ ಕರೆದರು.

ದಮಯಂತಿ ಚಕಿತಳಾಗಿ ತಲೆಯೆತ್ತಿದ್ದಳು.

"ನಿನ್ನವರಾರೂ ಇಲ್ಲವೇ ?"

ದಮಯಂತಿ ಹತಾಶಳಾಗಿ ತಲೆಯಾಡಿಸಿದಳು.

ಮಹಮ್ಮದರು ಹೆದರಿದಂತೆ, "ನಾನಿಲ್ಲವೇ ?" ಎಂದರು.

ದಮಯಂತಿಯ ಮೈಬೆವರಿತು. ಎದ್ದುನಿಂತಳು. ಅವಳು ಮಹಮ್ಮದರನ್ನು ಕರುಣಾಮೂರ್ತಿಯೆಂದು ತನ್ನ ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡಿದ್ದುದು ನಿಜ. ಆದರೆ ತಾನು ಆತನಿಗೆ ಪ್ರಿಯಳೆಂದು ಕನಸಿನಲ್ಲಿಯೂ ನೆನೆಸಿರಲಿಲ್ಲ ಅಥವಾ ಬರಿಯ ಕರುಣೆ ಆ ಮಾತನ್ನಾಡಿಸಿತೋ ? ಎರಡನೆಯ ಸಲ ತನ್ನ ಜೀವವನ್ನು ಬೇರೆಯವರ ಕೈಗೆ ಅಷ್ಟು ಸುಲಭವಾಗಿ ಕೊಡಲು ದಮಯಂತಿ ಸಿದ್ಧಳಾಗಿರಲಿಲ್ಲ. ಮಹಮ್ಮದರು "ಇಬ್ಬರೂ ಕೆಲವು ದಿನ ಎಲ್ಲಾದರೂ ಹೋಗಿಬರೋಣ, ಬರುತ್ತೀಯಾ ?" ಎಂದರು.

ದಯಮಂತಿಯು ಸ್ವಲ್ಪ ಗಡುಸಾಗಿಯೇ, "ನಿರ್ಗತಿಕಳೆಂದು ಹಾಸ್ಯ ಮಾಡುತ್ತೀರಾ, ಡಾಕ್ಟರ್ ?" ಎಂದಳು.

ಮಹಮ್ಮದರಿಗೆ ತುಂಬ ನೋವುಂಟಾಯಿತು – "ನಿರ್ಗತಿಕರನ್ನೆಲ್ಲಾ ಕರೆದರೆ ನಾನೀಗ ಎಷ್ಟು ಜನರನ್ನು ಕರೆಯಬಹುದು ದಮಯಂತೀ ? ದಮಯಂತಿಯೆಂದು ಕರೆಯುತ್ತಿದ್ದೇನೆ. ನನ್ನ ವಿಚಾರ ಇಷ್ಟು ದಿನಗಳ ಮೇಲೂ ನಿನಗೆ ತಿಳಿಯಲಿಲ್ಲವೇ ?"

ದಮಯಂತಿಗೆ ಪಶ್ಚಾತ್ತಾಪವಾಯಿತು. "ತಪ್ಪಾಯಿತು ಡಾಕ್ಟರ್. ನಾನು ಅನುಭವಿಸಿದ ವ್ಯಸನ ನನ್ನ ಹೃದಯವನ್ನು ಕಲ್ಲಾಗಿ ಮಾಡಿದೆ. ಅಲ್ಲಿ ಪ್ರೇಮಕ್ಕೆ ಎಡೆಯಿದೆಯೋ ಇಲ್ಲವೋ ನನಗೆ ತಿಳಿಯದು. ಈ ಸತ್ತ ಜೀವವನ್ನು ನೀವೇಕೆ ಕೊರಳಿಗೆ ಕಟ್ಟಿಕೊಳ್ಳಬೇಕು ?"

ಮಹಮ್ಮದರು, "ನಿನ್ನ ವಿಚಾರವನ್ನು ನಿನಗಿಂತ ಹೆಚ್ಚಾಗಿ ನಾನೇ ಬಲ್ಲೆ. ನಿನ್ನ ಹೃದಯ ಅನಾಥರನ್ನು ಕಂಡು, ತನ್ನ ದುರ್ದೆಶೆಯನ್ನು ಮರೆತು ಮರುಗಿರುವುದನ್ನು ನೋಡಿದ್ದೇನೆ. ಅಲ್ಲಿ ಅನಂತ ಪ್ರೇಮ ವಿಶ್ವಾಸಗಳಿಗೆ ಎಡೆಯಿದೆ. ಆ ವಿಚಾರದಲ್ಲಿ ನನಗೇನೂ ಸಂದೇಹವಿಲ್ಲ. ಬರುವೆಯಾ ದಮಯಂತೀ ?"

ದಮಯಂತಿ ಮರುಮಾತನಾಡದೆ ತನ್ನ ಕೈಯನ್ನು ಆತನ ಕೈಯಲ್ಲಿಟ್ಟಳು.

✶ ✶ ✶

ಭಾಸ್ಕರನು ತಿರುಗಿ ನೋಡಿ ತನ್ನ ಕಣ್ಣನ್ನೇ ನಂಬಲಾರದೇ ಹೋದನು. ದಮಯಂತಿ ಬಾಗಿಲಲ್ಲಿ ನಿಂತಿದ್ದಳು. ಭಾಸ್ಕರ ಎದ್ದು "ದಮಯಂತೀ" ಎಂದನು.

ದಮಯಂತಿ ಸರಿದು ನಿಂತು, "ನಿಮ್ಮ ದಮಯಂತಿ ಸಿಯಾಲ್‌ಕೋಟೆಯಲ್ಲಿಯೇ ಸತ್ತಳು. ನನಗೂ ನಿಮಗೂ ಋಣಾನುಬಂಧ ಹರಿದು ಬಹುಕಾಲವಾಯಿತು" ಎಂದಳು.

"ನಿಮ್ಮಲ್ಲಿ ಯಾವ ಭಿಕ್ಷೆಗೂ ಬರಲಿಲ್ಲ. ನೆನ್ನೆ ನನಗೆ ಮದುವೆಯಾಯಿತು. ನಾನೂ ಮಹಮ್ಮದರೂ ನಾಳೆ ಸಿಮ್ಲಾಕ್ಕೆ ಹೋಗುತ್ತೇವೆ. ನಿಮಗೊಂದು ಸಲ ತಿಳಿಸಿ ಹೋಗೋಣವೆಂದು ಬಂದೆ."

ಭಾಸ್ಕರ "ಮಹಮ್ಮದ್ ! – ಆ ತುರುಕನನ್ನೇ ?" ಎಂದು ಕೇಳಿದನು. ದಮಯಂತಿಯು ರೋಷದಿಂದ, "ಅವರ ವಿಚಾರವಾಗಿ ಮಾತನಾಡುವುದಕ್ಕೂ ನಿಮಗೆ ಯೋಗ್ಯತೆಯಿಲ್ಲ ಜೋಕೆ" ಎಂದಳು.

ಅಷ್ಟರಲ್ಲಿ ಮಹಮ್ಮದರೂ ಕಾರಿನಿಂದ ಇಳಿದು ಬಂದು ಸೌಜನ್ಯದಿಂದ, "ನಮಸ್ಕಾರ ಭಾಸ್ಕರ್ ! ಹೋಗೋಣವೇ ದಮಯಂತೀ ?" ಎಂದರು.

ದಮಯಂತಿ ಪುನಃ ತಿರುಗಿ ನೋಡದೆ ಆತನೊಡನೆ ಹೊರಟುಹೋದಳು.

*(ಕನ್ನಡದ ಹಿರಿಯ ಲೇಖಕಿ ದಿವಂಗತ ಎಚ್. ವಿ. ಸಾವಿತ್ರಮ್ಮನವರು ಐವತ್ತರ ದಶಕದಲ್ಲಿಯೇ ಸ್ವಾತಂತ್ರ್ಯ ಚಳುವಳಿ ಮತ್ತು ಆ ಸಂದರ್ಭದ ಕೋಮುಗಲಭೆಗಳನ್ನುಳ್ಳ ವಸ್ತುವನ್ನಾಧರಿಸಿದ ಹಲವಾರು ಕತೆಗಳನ್ನು ರಚಿಸಿದ್ದಾರೆ. ಈ 'ದಮಯಂತಿ' ಕತೆ ೧೯೫೪ರಲ್ಲಿ ಪ್ರಕಟವಾದ ಅವರ 'ಮರು ಮದುವೆ' ಕಥಾ ಸಂಕಲನದಲ್ಲಿ ಸೇರಿದೆ.)*

ಎಚ್. ವಿ. ಸಾವಿತ್ರಮ್ಮ



# ಭಗತ್ ಸಿಂಗ್ ನ್ಯಾಯಾಲಯದಲ್ಲಿ

**ಭಾರತದ ಕ್ರಾಂತಿಕಾರಿ ಹೋರಾಟ ಮತ್ತು ಸ್ವಾತಂತ್ರ್ಯ ಸಂಗ್ರಾಮದಲ್ಲಿ ೧೯೨೯ರ ಮೇ ೮ ಒಂದು ಮಹತ್ವದ ದಿನ. ಕ್ರಾಂತಿವೀರ ಭಗತ್ ಸಿಂಗ್ ಅಂದು ವಸಾಹತುಶಾಹಿ ಭಾರತದ ನ್ಯಾಯಾಲಯದಲ್ಲಿ ಜನತಾ ಸ್ವಾತಂತ್ರ್ಯವನ್ನು ಕುರಿತಂತೆ ಸಮಗ್ರವಾದ ವಿಶ್ಲೇಷಣೆಯೊಂದನ್ನು ನೀಡಿದ. ಇಂದಿಗೂ, ಎಂದೆಂದಿಗೂ, ನಮ್ಮ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಅದೊಂದು ಉಜ್ವಲ ಹೇಳಿಕೆ ಮತ್ತು ದಾರಿದೀಪ. ವಿಶೇಷತಃ ನಮ್ಮ ದೇಶದ ಯುವಜನಾಂಗಕ್ಕೆ ಭಗತ್ ಸಿಂಗ್‌ನ ಚಿಂತನೆ ಮತ್ತು ಸ್ಪಷ್ಟತೆ ಒಂದು ಪ್ರೇರಕಶಕ್ತಿ. ನ್ಯಾಯಾಲಯದಲ್ಲಿ ಅವನು ನೀಡಿದ್ದ ಅದ್ಭುತ ಹೇಳಿಕೆಯ ಕೆಲವು ಭಾಗಗಳನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ.**

ಜೈಲಿನಲ್ಲಿದ್ದಾಗ ನಮ್ಮನ್ನು ಸಂಧಿಸಿದ ಕೆಲವು ಪೊಲೀಸ್ ಅಧಿಕಾರಿಗಳು ನಮಗೆ ತಿಳಿಸಿರುವಂತೆ ಪಾರ್ಲಿಮೆಂಟಿನ ಜಂಟಿ ಅಧಿವೇಶನವನ್ನು ಉದ್ದೇಶಿಸಿ ಮಾತನಾಡುವಾಗ ಲಾರ್ಡ್ ಇರ್ವಿನ್ ಹೇಳಿದ್ದಾನಂತೆ: ನಮ್ಮ ಆಕ್ರಮಣವು ಯಾವ ವ್ಯಕ್ತಿಗಳ ಮೇಲೂ ಅಲ್ಲ, ಒಂದು ವ್ಯವಸ್ಥೆಯ ಮೇಲೆ, ಎಂದು. ಇದನ್ನು ಕೇಳಿದಾಗ ನಮ್ಮ ಉದ್ದೇಶವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗಿದೆಯೆಂದು ನಮಗೆ ಸಮಾಧಾನವಾಯಿತು.

ಮಾನವ ಜನಾಂಗವನ್ನು ಪ್ರೀತಿಸುವುದರಲ್ಲಿ ನಾವು ಯಾರಿಗೂ ಕಡಿಮೆಯಲ್ಲ. ಯಾವ ವ್ಯಕ್ತಿಯ ವಿರುದ್ಧವೇ ಆಗಲಿ ಸೇಡಿನ ಭಾವನೆಯನ್ನು ಹೊಂದುವ ಬದಲು ನಾವು ಮಾನವಜೀವವನ್ನು ವರ್ಣಿಸಲಸದಳ ವಾದಷ್ಟು ಪವಿತ್ರವಾದುದೆಂದು ಬಗೆಯುತ್ತೇವೆ.

✶ ✶ ✶

ಸಭೆಯಲ್ಲಿ ಅಂಗೀಕೃತವಾಗಿರುವ ಎಷ್ಟೋ ಗಂಭೀರ ನಿರ್ಣಯಗಳನ್ನು ಯಾವ ಗೌರವವನ್ನೂ ಕೊಡದೆ ಕಾಲಿನಡಿ ಹೊಸಕಿಹಾಕಿರುವ ಪ್ರಸಂಗಗಳೆಷ್ಟೋ! ದಮನಕಾರಿ ಹಾಗೂ ನಿರಂಕುಶ ಕ್ರಮಗಳನ್ನು ತೆಗೆದು ಹಾಕಬೇಕೆಂಬ ನಿರ್ಣಯಗಳನ್ನು ಅತೀವ ತಾತ್ಸಾರ ದಿಂದ ಕಡೆಗಣಿಸಲಾಗಿದೆ. ಒಪ್ಪಿಗೆಗೆ ಅನರ್ಹವೆಂದು ಶಾಸನಸಭೆಗಳ ಸದಸ್ಯರು ತಳ್ಳಿಹಾಕಿರುವ ಸರ್ಕಾರದ ಎಷ್ಟೋ ಕ್ರಮಗಳನ್ನು ಸೂಚನೆಗಳನ್ನು ಲೇಖನಿಯ ಒಂದು ಗೀಟಿನಿಂದ ಜಾರಿಗೆ ತರಲಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಈ ವ್ಯವಸ್ಥೆಯ ಅಸ್ತಿತ್ವಕ್ಕೆ ನ್ಯಾಯಸಮ್ಮತವಾದ ಯಾವೊಂದು ಕಾರಣವನ್ನೂ ನಾವು ಕಾಣಲು ಸಾಧ್ಯವಿಲ್ಲ. ವ್ಯವಸ್ಥೆಯು ಆಡಂಬರ ಮತ್ತು ಪ್ರತಾಪಗಳಿಂದ ಮೆರೆಯುತ್ತಿದೆ, ನಿಜ; ಭಾರತದ ಮಿಲಿಯಗಟ್ಟಲೆ ಜನರು ಬೆವರು ಸುರಿಸಿ ಗಳಿಸಿದ ಹಣದ ಆಧಾರದ ಮೇಲೆ ಈ ವ್ಯವಸ್ಥೆ ನಿಂತಿದೆ, ನಿಜ; ಆದರೆ, ನಮಗೆ ಕಾಣುವುದು ಈ ವ್ಯವಸ್ಥೆಯ ಅಟಾಟೋಪ ಮತ್ತು ಪೊಳ್ಳುತನಗಳು ಮಾತ್ರ. ಅಷ್ಟೇ ಅರ್ಥವಾಗದ ಇನ್ನೊಂದು ಸಂಗತಿಯೆಂದರೆ ನಮ್ಮ ಸಾರ್ವಜನಿಕ ಕ್ಷೇತ್ರದ ನಾಯಕರ ಮನೋಭಾವ. ರಂಗಮಂದಿರದಲ್ಲಿ ಯೋಜಿತವಾದ ಪ್ರಯೋಗದಂತೆ ಕೇವಲ ಕಾಲ್ಪನಿಕವಾದ ಈ ಪ್ರದರ್ಶನವನ್ನು ನಡೆಸಲು ಸಾರ್ವಜನಿಕ ಸಮಯ ಮತ್ತು ಹಣವನ್ನು ಪೋಲು ಮಾಡುವುದಕ್ಕೆ ಇವರೇಕೆ ಸಹಾಯ ಮಾಡಬೇಕು ? ಭಾರತದ ಅಸಹಾಯಕ ದಾಸ್ಯವನ್ನು ವಿಜೃಂಭಿಸು ವುದರಲ್ಲಿ ಇವರೇಕೆ ಪಾಲ್ಗೊಳ್ಳಬೇಕು ?

ಈ ಎಲ್ಲ ವಿಷಯಗಳನ್ನೂ ನಾವು ಗಾಢವಾಗಿ ಚಿಂತಿಸುತ್ತಾ ಬಂದಿದ್ದೇವೆ. ಕಾರ್ಮಿಕ ಚಳುವಳಿಯ ನಾಯಕರನ್ನು ಒಟ್ಟೊಟ್ಟಿಗೆ ದಸ್ತಗಿರಿ ಮಾಡಿರುವುದನ್ನು ನಾವು ವೀಕ್ಷಿಸಿದ್ದೇವೆ. ಕಾರ್ಮಿಕ ವಿವಾದಗಳ ಕಾಯಿದೆ ಯನ್ನು ಶಾಸನಸಭೆಯಲ್ಲಿ ಮಂಡಿಸಿದಾಗ ಅದು ಯಾವ ರೀತಿಯ ಪುರಸ್ಕಾರವನ್ನು ಪಡೆಯುತ್ತಿತ್ತೆಂಬುದನ್ನು ಅವಲೋಕಿಸಲು ನಾವು ಉತ್ಸುಕರಾಗಿದ್ದೆವು. ಅಲ್ಲಿನ ಚರ್ಚೆಯು ನಮ್ಮ ಯಾವ ಅನುಮಾನವನ್ನೂ ಸುಳ್ಳಾಗಿಸಲಿಲ್ಲ; ಶ್ರಮಜೀವನ ನಡೆಸುತ್ತಿರುವ ಮಿಲಿಯಗಟ್ಟಲೆ ಭಾರತೀಯರು ಈ ವ್ಯವಸ್ಥೆಯಿಂದ ಅಪೇಕ್ಷಿಸಬಹುದಾದದ್ದೇನೂ ಇಲ್ಲ. ಅದು ಅಸಹಾಯಕ ದುಡಿಮೆಗಾರರ ದಾಸ್ಯದ ಹಾಗೂ ಕತ್ತುಹಿಚುಕುವ ಶೋಷಕರ ದರ್ಪದ ಮೂರ್ತಿವೆತ್ತ ಕಠೋರ ಸ್ಮಾರಕದಂತಿದೆ.

✶ ✶ ✶

ಮೇಲಿನ ವಾಕ್ಯವೃಂದದಲ್ಲಿ 'ಕಾಲ್ಪನಿಕ ಅಹಿಂಸೆ' ಎಂಬ ಪದಗುಚ್ಛವನ್ನು ನಾವು ಬಳಸಿದ್ದೇವೆ. ಅದರ ಬಗ್ಗೆ ಒಂದು ವಿವರಣೆ ಅಗತ್ಯ. ಪರಾಕ್ರಮಣಕ್ಕಾಗಿ ಬಲಾತ್ಕಾರವನ್ನು ಬಳಸುವುದು 'ಹಿಂಸೆ' ಎನಿಸಿ ಕೊಳ್ಳುತ್ತದೆ. ಆದ್ದರಿಂದ ನೈತಿಕವಾಗಿ ಅದು ಸಮರ್ಥನೀಯವಲ್ಲ. ಆದರೆ ನ್ಯಾಯಸಮ್ಮತವಾದ ಗುರಿಸಾಧನೆಗಾಗಿ ಅದನ್ನು ಬಳಸಿಕೊಂಡಾಗ ಅದು ತನ್ನ ನೈತಿಕ ಸಮರ್ಥನೆಯನ್ನು ತಾನೇ ತೋರ್ಪಡಿ ಸುತ್ತದೆ. ಏನೇ ಸಂದರ್ಭವಿರಲಿ ಬಲಾತ್ಕಾರವನ್ನು ಸರ್ವಥಾ ತೊಡೆದುಹಾಕಬಹುದೆಂಬ ಚಪಲ ಕಾಲ್ಪನಿಕ ಲೋಕಕ್ಕೆ ಸೇರಿದ್ದು. ರಾಷ್ಟ್ರದಲ್ಲಿ ತೋರಿಬಂದಿರುವ ಹೊಸ ಚಳುವಳಿಯು ಗುರುಗೋವಿಂದ್ ಸಿಂಗ್ ಹಾಗೂ ಶಿವಾಜಿ, ಕೆಮಲ್ ಪಾಶಾ ಹಾಗೂ ರೀಜಾ ಖಾನ್, ವಾಷಿಂಗ್‌ಟನ್ ಹಾಗೂ ಗರಿಬಾಲ್ಡಿ, ಲಫಾಯೆತ್ ಹಾಗೂ ಲೆನಿನ್‌ರಂತಹವರನ್ನು ಸ್ಫೂರ್ತಿ ಗೊಳಿಸಿದ ಆದರ್ಶಗಳಿಂದ ಪ್ರೇರಿತವಾಗಿದೆ.

ಮೂಡಲಿರುವ ಆ ಕೆಂಪನೆಯ ಪ್ರಾತಃಕಾಲದ ಸೂಚನೆಯನ್ನು ನಾವು ಕೊಟ್ಟಿದ್ದೇವೆ.

* * *

ಕೆಳಗಿನ ನ್ಯಾಯಾಲಯದಲ್ಲಿ ನಮ್ಮ ಕ್ರಾಂತಿಯ ಕಲ್ಪನೆಯಾದರೂ ಏನೆಂಬ ಪ್ರಶ್ನೆಯನ್ನು ಹಾಕಲಾಗಿತ್ತು. ಅದಕ್ಕೆ ನಮ್ಮ ಉತ್ತರ ಇದು : "ಕ್ರಾಂತಿ" ಎಂದರೆ ರಕ್ತಗೆಂಪಿನ ಸಂಘರ್ಷವೇ ಆಗಿರಬೇಕೆಂಬ ನಿಯಮವೇನೂ ಇಲ್ಲ. ವೈಯಕ್ತಿಕ ಜಿದ್ದಿಗೂ ಅಲ್ಲಿ ಅವಕಾಶವಿಲ್ಲ. ಕ್ರಾಂತಿಯು ಬಾಂಬು ಮತ್ತು ಪಿಸ್ತೂಲುಗಳ ಆರಾಧನೆಯಲ್ಲ. ನಮ್ಮ ದೃಷ್ಟಿಯಲ್ಲಿ "ಕ್ರಾಂತಿ" ಎಂದರೆ ಸ್ಪಷ್ಟವಾಗಿ ಅನ್ಯಾಯದ ಬುನಾದಿಯ ಮೇಲೆ ರಚಿತವಾಗಿರುವ ಇಂದಿನ ವ್ಯವಸ್ಥೆ ಬದಲಾಗಬೇಕು ಎಂದರ್ಥ. ಉತ್ಪಾದಕರು ಅಥವಾ ದುಡಿಮೆಗಾರರು ಸಮಾಜದ ಅತ್ಯಂತ ಅವಶ್ಯಕವಾದ ಅಂಗವಾಗಿದ್ದಾಗ್ಯೂ ಶೋಷಕರಿಂದ ವಂಚಿಸಲ್ಪಡುತ್ತಿದ್ದಾರೆ. ಅವರ ದುಡಿಮೆಯ ಫಲ ಅವರಿಗೆ ದಕ್ಕುತ್ತಿಲ್ಲ; ಅವರ ಅತಿಸಾಮಾನ್ಯವಾದ ಹಕ್ಕುಗಳನ್ನೂ ಅವರಿಂದ ಕಿತ್ತುಕೊಳ್ಳಲಾಗಿದೆ. ಎಲ್ಲರಿಗೂ ಬೇಕಾದ ಧಾನ್ಯಗಳನ್ನು ಬೆಳೆಯುವ ರೈತ ತನ್ನ ಕುಟುಂಬದೊಡನೆ ಹಸಿವಿನಿಂದ ನರಳುತ್ತಿದ್ದಾನೆ; ಇಡೀ ಜಗತ್ತಿನ ಮಾರುಕಟ್ಟೆಯನ್ನು ತಾನು ನೇಯುವ ಬಟ್ಟೆಯಿಂದ ತುಂಬುವ ನೇಯ್ಗೆಗಾರ ತನ್ನ ಮತ್ತು ತನ್ನ ಮಕ್ಕಳ ಶರೀರವನ್ನು ಮುಚ್ಚಲು ಬೇಕಾದ ಕನಿಷ್ಠವಾದ ಬಟ್ಟೆಯನ್ನೂ ಪಡೆದಿಲ್ಲ. ಮನೆಕಟ್ಟುವವರು, ಕಮ್ಮಾರರು ಮತ್ತು ಬಡಗಿಗಳು ಭವ್ಯವಾದ ಸೌಧಗಳನ್ನೇ ಕಟ್ಟುತ್ತಿದ್ದಾರಾದರೂ ಕೊಳಚೆ ಪ್ರದೇಶಗಳಲ್ಲಿ ಜಾತಿ ಭ್ರಷ್ಟರಾಗಿ ಉಳಿದಿದ್ದಾರೆ. ಸಮಾಜದ ಪರತಂತ್ರ ಜೀವಿಗಳಾದ ಬಂಡವಳಿಗರು ಮತ್ತು ಶೋಷಕರು ಮನಸೋ ಇಚ್ಛೆಯಂತೆ ಮಿಲಿಯಗಟ್ಟಲೆ ಹಣವನ್ನು ಚೆಲ್ಲಬಲ್ಲರು. ಈ ಭಯಂಕರ ಅಸಮಾನತೆಗಳೂ ಬಲಾತ್ಕಾರವಾಗಿ ಸೆಳೆಯಲ್ಪಟ್ಟಿರುವ ಅವಕಾಶಗಳ ಅಸಮತೆಯೂ ಅಸ್ತವ್ಯಸ್ತತೆಗೆ ಹಾದಿಮಾಡಿಕೊಟ್ಟೇ ತೀರುತ್ತವೆ. ಈ ರೀತಿಯ ವ್ಯವಸ್ಥೆಯು ಬಹುಕಾಲ ಉಳಿಯಲಾರದು. ಸಮಾಜದ ವ್ಯವಸ್ಥೆ ಇಂದು ಕಾಣಬರುವ ಮೋಜು ಅಗ್ನಿಪರ್ವತದ ಅಂಚಿನಲ್ಲಿರುವ ಮೋಜೆಂಬುದು ಸ್ವಯಂಸಿದ್ಧವಾಗಿದೆ.

ಈ ನಾಗರಿಕತೆಯ ಭವ್ಯಕಟ್ಟಡವನ್ನು ಸಕಾಲದಲ್ಲಿ ಉಳಿಸದಿದ್ದರೆ ಅದು ಕುಸಿದು ಭಗ್ನವಾಗುವುದು ಖಂಡಿತ. ಆದ್ದರಿಂದ ಆಮೂಲಾಗ್ರವಾದ ಬದಲಾವಣೆ ಅತ್ಯವಶ್ಯಕ. ಅದನ್ನು ತಿಳಿದವರ ಕರ್ತವ್ಯವು ಸಮಾಜವನ್ನು ಸಮಾಜವಾದಿ ಆಧಾರದ ಮೇಲೆ ಪುನರ್‌ರಚಿಸುವುದಾಗಿದೆ. ಇದನ್ನು ಮಾಡಿದ ಹೊರತು, ಅರ್ಥಾತ್ ಮಾನವನನ್ನು ಮಾನವ ಹಾಗೂ ಒಂದು ರಾಷ್ಟ್ರವನ್ನು ಇನ್ನೊಂದು ರಾಷ್ಟ್ರವು ಶೋಷಿಸುವುದನ್ನು ಅಂತ್ಯಗೊಳಿಸಿದ ಹೊರತು, ಮಾನವನ ಜನಾಂಗವನ್ನು ಇಂದು ಬಾಧಿಸುತ್ತಿರುವ ಪಡಿಪಾಟು ಮತ್ತು ಕಗ್ಗೊಲೆಗಳನ್ನು ತಡೆಯಲಾಗುವುದಿಲ್ಲ. ಇಂದಿನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಯುದ್ಧವನ್ನು ನಿರ್ನಾಮಗೊಳಿಸುವ ಹಾಗೂ ಶಾಂತಿಯ ನವೋದಯವನ್ನು ಸೃಷ್ಟಿಸುವ ಎಲ್ಲ ಮಾತುಗಳೂ ಅನಾಚ್ಛಾದಿತ ಕಪಟತನದ ಮಾತುಗಳೇ ಆಗುತ್ತವೆ.

"ಕ್ರಾಂತಿ" ಎಂದರೆ ನಮ್ಮ ಕಲ್ಪನೆಯಲ್ಲಿ ಅಂತಿಮವಾಗಿ ಇಂತಹ ಆಘಾತಗಳಿಗೆ ತುತ್ತಾಗದಂತಹ ಸಮಾಜ ವ್ಯವಸ್ಥೆಯೊಂದರ ನಿರ್ಮಾಣ. ಅಲ್ಲಿ ದುಡಿಮೆಗಾರನ ಸಾರ್ವಭೌಮತ್ವವನ್ನು ಎಲ್ಲರೂ ಮಾನ್ಯಮಾಡುತ್ತಾರೆ. ಬಂಡವಾಳಶಾಹಿ ಪದ್ಧತಿ ಮತ್ತು ಸಾಮ್ರಾಜ್ಯಶಾಹಿ ಯುದ್ಧಗಳ ಪಿಡುಗಿನಿಂದ ಮಾನವ ಜನಾಂಗಕ್ಕೆ ಮುಕ್ತಿ ದೊರಕಬೇಕು; ಅದು ಜಾಗತಿಕ ಒಕ್ಕೂಟದ ಕೊಡುಗೆಯಾಗಿರುತ್ತದೆ.

ಇದು ನಮ್ಮ ಆದರ್ಶ. ನಮ್ಮ ಸ್ಫೂರ್ತಿಗೆ ಈ ಸಿದ್ಧಾಂತವೇ ಜೀವ ಕೊಟ್ಟಿರುವುದು. ನಾವು ಸಾಕಷ್ಟು ಪ್ರಭಾವಶಾಲಿಯೂ ಪ್ರಬಲವೂ ಆದ ಎಚ್ಚರವನ್ನು ನೀಡಿದ್ದೇವೆಂದು ಭಾವಿಸುತ್ತೇವೆ.

**ಡಾ॥ ಜಿ. ರಾಮಕೃಷ್ಣರವರು ರಚಿಸಿರುವ 'ಭಗತ್ ಸಿಂಗ್' ಪುಸ್ತಕದಿಂದ ಆಯ್ದ ಭಾಗ**

## ಸಾದರ ಸ್ವೀಕಾರ

**ಕೃಷಿ ವಿಜ್ಞಾನ** *ಡಾ॥ ಜಿ. ಕೆ. ವೀರೇಶ್, ಅಡ್ಡೂರು ಕೃಷ್ಣ ರಾವ್*
**ಪುಟ : ೧೨೦** **ಬೆಲೆ : ರೂ. ೭೫**

**ಸಾಧನೆ** (ಮಕ್ಕಳಿಗಾಗಿ ಕಥೆಗಳು) *ಗಣೇಶ ಪಿ. ನಾಡೋರ*
**ಪುಟ : ೧೨೦** **ಬೆಲೆ : ರೂ. ೭೫**

**ಸೃಜನಶೀಲ ಶಿಕ್ಷಣ** *ಡಾ॥ ಮಹಾಬಲೇಶ್ವರ ರಾವ್*
**ಪುಟ : ೧೫೬** **ಬೆಲೆ : ರೂ. ೧೦೦**

**ಅಭಿವೃದ್ಧಿ ಸಂವಹನ ಕೌಶಲ್ಯಗಳು** ಎಂ. ಅಬ್ದುಲ್ ರೆಹಮಾನ್ ಪಾಷ
**ಪುಟ : ೧೯೨** **ಬೆಲೆ : ರೂ. ೧೫೦**

**ಕಣ್ಣು ಮತ್ತು ನೋಟ** *ಡಾ॥ ಎಚ್. ಎಸ್. ಮೋಹನ್*
**ಪುಟ : ೧೧೨** **ಬೆಲೆ : ರೂ. ೯೦**

**ನೀಲಿ ಮೂಗಿನ ನತ್ತು** ಹೆಚ್. ಆರ್. ಸುಜಾತಾ
**ಪುಟ : ೨೧೨** **ಬೆಲೆ : ರೂ. ೧೯೦**

*ಮೇಲಿನ ಆರು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಸೃಷ್ಟಿಯ ಸೆಲೆ : ಆರ್. ಎಸ್. ರಾಜಾರಾಮ್ ಬದುಕು–ಸಾಧನೆ** *ನಿರೂಪಣೆ : ಪರಂಜ್ಯೋತಿ*
**ಪುಟ : ೨೦೪** **ಬೆಲೆ : ರೂ. ೧೭೫**

**ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.),** ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

**ಭದ್ರತಾ ಲೋಕದಲ್ಲಿ...** (ಸೆಕ್ಯೂರಿಟಿ ಬದುಕಿನ ಸುಖ–ದುಃಖಗಳು) *ಹೊಳೆನರಸೀಪುರ ಮಂಜುನಾಥ*
**ಪುಟ : ೧೦೪** **ಬೆಲೆ : ರೂ. ೮೦**

**ಆವಿ ಗ್ರಾಮೀಣ ಮತ್ತು ನಗರಾಭಿವೃದ್ಧಿ ಸಂಸ್ಥೆ (ರಿ),** ಕೋಡೂರು – ಅಂಚೆ, ೫೭೭ ४೧೮, ಹೊಸನಗರ ತಾಲೂಕು, ಶಿವಮೊಗ್ಗ ಜಿಲ್ಲೆ

**ಗುಬ್ಬಿಗೊಂದು ಹಾಡು** (ಮಕ್ಕಳ ಕವನ ಸಂಕಲನ) ಎಸ್. ಎಸ್. ಹಳ್ಳೂರ
**ಪುಟ : ೬೦** **ಬೆಲೆ : ರೂ. ೮೦**

**ಶ್ರೀಧರ ಪ್ರಕಾಶನ,** ಸೆಕ್ಟರ್ ನಂ. ೨೭, ಪ್ಲಾಟ್ ನಂ. ೫೦, ನವನಗರ, ಬಾಗಲಕೋಟೆ (ಜಿಲ್ಲೆ)

**ಫೋರ್ತ್ ಅಂಪೈರ್** (೭ನೇ ತರಗತಿಯ ವಿದ್ಯಾರ್ಥಿ ಬರೆದ ಕ್ರಿಕೆಟ್ ಅಂಕಣ ಪ್ರಬಂಧಗಳು) *ಅಂತಃಕರಣ*
**ಪುಟ : ೧೨೦** **ಬೆಲೆ : ರೂ. ೧೦೦**

**ದಶದಿಕ್ಕು** (೭ನೇ ತರಗತಿಯ ವಿದ್ಯಾರ್ಥಿ ಬರೆದ ಅಂಕಣ ಪ್ರಬಂಧಗಳು) *ಅಂತಃಕರಣ*
**ಪುಟ : ೧೫೨** **ಬೆಲೆ : ರೂ. ೧೨೦**

**ರೋಮಾಂಚನ** (೭ನೇ ತರಗತಿಯ ವಿದ್ಯಾರ್ಥಿ ಬರೆದ ಕ್ರೀಡಾ ಅಂಕಣ ಪ್ರಬಂಧಗಳು) *ಅಂತಃಕರಣ*
**ಪುಟ : ೯೬** **ಬೆಲೆ : ರೂ. ೭೫**

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಬೆನಕ ಬುಕ್ಸ್ ಬ್ಯಾಂಕ್,** ಯಳಗಲ್ಲು, ಕೋಡೂರು – ಅಂಚೆ, ೫೭೭ ४೧೮, ಹೊಸನಗರ ತಾಲೂಕು, ಶಿವಮೊಗ್ಗ ಜಿಲ್ಲೆ

**ಬಸವಣ್ಣ ಮತ್ತು ಅಂಬೇಡ್ಕರ್ ಹಾಗೂ ಇತರ ಲೇಖನಗಳು** *ರಂಜಾನ್ ದರ್ಗಾ*
**ಪುಟ : ೧೭೬** **ಬೆಲೆ : ರೂ. ೧೩೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಗದ್ಯದ ಗರಿಮೆ** (ಡಾ॥ ಅಶೋಕ ನರೋಡೆ ಅವರ ಗದ್ಯಾವಲೋಕನ) *ಡಾ॥ ರಾಜಶೇಖರ ಇಚ್ಚಂಗಿ*
**ಪುಟ : xxii + ೨೭೮ = ೩೦೦** **ಬೆಲೆ : ರೂ. ೨೫೦**

**ನಿವೇದಿತ ಪ್ರಕಾಶನ,** ನಂ. ३४३೭ (೧ನೇ ಮಹಡಿ), ४ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ ೨ನೇ ಹಂತ, ಬೆಂಗಳೂರು – ೨೮

**ಆಯ್ದ ಕವನಗಳು** *ಡಾ॥ ಮೈನುದ್ದೀನ ರೇವಡಿಗಾರ*
**ಪುಟ : ೧೦೦** **ಬೆಲೆ : ರೂ. ೧೨೫**

**ಹಂಬಲ ಪ್ರಕಾಶನ,** ಪ್ರಧಾನ ಅಂಚೆ ಕಚೇರಿ ಹಿಂದೆ, ಬಾಗಲಕೋಟೆ – ೫೮೭ ೧೦೧

**ಟೊಂಗೆಯಲ್ಲಿ ಸಿಕ್ಕಿಕೊಂಡ ನಕ್ಷತ್ರ** (ಕವನ ಸಂಕಲನ) ರಾಜು ಹೆಗಡೆ
**ಪುಟ : iv + ೯೬** **ಬೆಲೆ : ರೂ. ೫೦**

**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ, ಅಂಚೆ : ಅರೇಅಂಗಡಿ, ತಾಲೂಕು ಹೊನ್ನಾವರ, ಉತ್ತರ ಕನ್ನಡ – ೫೮೧ ३३४

**ಹಕ್ಕಿಗಳ ಸ್ವಾತಂತ್ರ್ಯೋತ್ಸವ** (ಮಕ್ಕಳ ಕಥನ ಕವಿತೆಗಳು) ವಿಜಯಕಾಂತ ಪಾಟೀಲ
**ಪುಟ : ೯೬** **ಬೆಲೆ : ರೂ. ೭೫**

**ಅಭಿನವ,** ೧೭/೧೮–೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು – ४०

ಹೊಸ ಓದು

## ಡಿಆರ್‌ರ ಮೂಡು ಪಡು

*ಅಜಕ್ಕಳ ಗಿರೀಶ್ ಭಟ್*

**ಪುಟ : ೩೭೮** **ಬೆಲೆ : ರೂ. ೩೦೦**

**ಚಿಂತನ ಬಯಲು (ಪ್ರ),** ಮೊಡಂಕಾಪು, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ – ೫೭೪ ೨೧೯

*'ಡಿಆರ್‌ರ ಮೂಡು ಪಡು' ಎಂಬ ಈ ಕೃತಿಯು ಮೇಲ್ನೋಟಕ್ಕೆ ಡಿ. ಆರ್. ನಾಗರಾಜ ಅವರ ಸಮಗ್ರ ಸಾಹಿತ್ಯವನ್ನು ಕುರಿತಂತಿದ್ದರೂ, ಅದರಾಚೆಗಿನ ಆಧುನಿಕೋತ್ತರ ವಿಚಾರ ಮೀಮಾಂಸೆಯನ್ನು ಒಳಗೊಂಡಿದೆ ಎಂಬುದು ಈ ಕೃತಿಯ ಹೆಗ್ಗಳಿಕೆಯಾಗಿದೆ. ಭಾರತದಂತಹ ಶ್ರೇಣೀಕೃತ ಜಾತಿಪದ್ಧತಿಯ ದೇಶಕ್ಕೆ ವಸಾಹತುಶಾಹಿ ಆಧುನಿಕತೆಯು ವರವೂ, ಶಾಪವೂ ಎರಡೂ ಆಗಿದೆ. ಒಂದು ಕಡೆ ಊಳಿಗಮಾನ್ಯ ವ್ಯವಸ್ಥೆಯ ಕ್ರೂರಹಿಡಿತದಿಂದ ಬಿಡಿಸಿಕೊಂಡ ಸ್ವಾತಂತ್ರ್ಯದ ಅನುಭವವಿದ್ದರೆ, ಇನ್ನೊಂದು ಕಡೆ ತನ್ನ ಸಾಂಸ್ಕೃತಿಕ ಚಹರೆಗಳನ್ನು ಕಳೆದುಕೊಂಡಿರುವ ಒಣಗಿದ ಬೆಂಡಿನಂಥ ಸ್ಥಿತಿಯಿದೆ. ಸಾಹಿತ್ಯಕಥನವನ್ನು ಸಾಂಸ್ಕೃತಿಕ ಕಥನವಾಗಿ ಪರಿಶೀಲಿಸಿಕೊಳ್ಳುವ ಹಿನ್ನೆಲೆಯಲ್ಲಿ ತನ್ನ ಚಿಂತನೆಗಳನ್ನು ಮಂಡಿಸುವ ಡಿ ಆರ್ ಎನ್ ಕನ್ನಡದ ತಾತ್ವಿಕ ವಾಗ್ವಾದಗಳನ್ನು ವಿಸ್ತರಿಸಿದವರು. ಅವರ ದೃಷ್ಟಿಕೋನದ ಮೂಲಕ ಆಧುನಿಕ ಮತ್ತು ವಸಾಹತೋತ್ತರ ಚಿಂತನಕ್ರಮಗಳನ್ನು ಅವರ ನಂತರದ ಕಿರಿಯ ಪೀಳಿಗೆಯವರು ಪ್ರಶ್ನಿಸಲು ತೊಡಗಿದ್ದಾರೆ; ಹಾಗೂ ಅವುಗಳಿಗೆ ಪರ್ಯಾಯ ಚಿಂತನೆಗಳನ್ನು ಕಂಡುಕೊಳ್ಳುವ ಪ್ರಯತ್ನಗಳಲ್ಲೂ ತೊಡಗಿದ್ದಾರೆ. ಅಂಥ ಒಂದು ಒಳ್ಳೆಯ ಪ್ರಯತ್ನ ಈ ಕೃತಿ. ಅದ್ವಯ ಭಾವ ಇಲ್ಲದ್ದು, ಅನುಭಾವದ ಸ್ಪರ್ಶವಿಲ್ಲದ್ದು, 'ದರ್ಶನ'ವಲ್ಲದ್ದು ಡಿಆರ್‌ಎನ್‌ಗೆ ದೇಶಿ ಪರ್ಯಾಯವಾಗಿ ಕಾಣುವುದಿಲ್ಲ. ಜನಪದ ಸಾಹಿತ್ಯದ ಮಂಟೇಸ್ವಾಮಿ ಕಾವ್ಯ ಶಿಷ್ಟ–ಜಾನಪದ ಎನ್ನುವ ದ್ವಂದ್ವ ಕಲ್ಪನೆಗಳನ್ನು ಮೀರಿ ಅನುಭಾವ ಸ್ಪರ್ಶ ಪಡೆದಿರುವುದರಿಂದ ಅದು ಡಿಆರ್‌ಗೆ ಅತಿಮುಖ್ಯ ಕೃತಿಯಾಗಿ ಕಾಣುತ್ತದೆ ಎಂಬ ಪ್ರಮೇಯಗಳನ್ನು ಈ ಕೃತಿಯಲ್ಲಿ ಗಿರೀಶ್ ಭಟ್ ನೀಡುತ್ತಾರೆ. ಇವರ ಎಲ್ಲ ಪ್ರಮೇಯಗಳನ್ನು ಒಪ್ಪಲಾಗದಿದ್ದರೂ ಆಸಕ್ತರು ಮುಖ್ಯವಾಗಿ ಗಮನಿಸಲೇ ಬೇಕಾದ ಕೃತಿ ಇದು ಎಂಬುದನ್ನು ನಿಸ್ಸಂಶಯವಾಗಿ ಒಪ್ಪಬೇಕಾಗುತ್ತದೆ.*

– ***ಡಾ॥ ರಂಗಾರೆಡ್ಡಿ ಕೋಡಿರಾಂಪುರ,*** *ಲಗ್ಗೆರೆ, ಬೆಂಗಳೂರು – ೫೬೦ ೦೫೮*



## ಸುಂದರ ಸ್ವಪ್ನದರ್ಶನ

**(ಮಲೇಶಿಯಾ, ಸಿಂಗಾಪೂರ, ಥಾಯ್‌ಲ್ಯಾಂಡ್‌ಗಳ ಪ್ರವಾಸಕಥನ)**

*ಅಶೋಕ ನರೋಡೆ*

**ಪುಟ : xxxviii + ೧೪೬ + ೮ = ೧೯೨**

**ಬೆಲೆ : ರೂ. ೧೫೦**

**ಕುಕ್ಕೇಶ್ರೀ ಪ್ರಕಾಶನ**

ನಂ. ೨೧/೧, ಮಾಚೋಹಳ್ಳಿ ಕಾಲೋನಿ, ವಿಶ್ವನೀಡಂ ಅಂಚೆ, ಬೆಂಗಳೂರು – ೫೬೦ ೦೯೧

*ಹಿರಿಯ ಬರಹಗಾರರಾದ ಡಾ॥ ಅಶೋಕ ನರೋಡೆಯವರು ಪ್ರವಾಸಪ್ರಿಯರೂ ಹೌದು. ಪ್ರಸ್ತುತ ಅವರು ಆಗ್ನೇಯ ಏಶಿಯಾ ದೇಶಗಳಾದ ಮಲೇಶಿಯಾ, ಸಿಂಗಾಪೂರ ಮತ್ತು ಥಾಯ್‌ಲ್ಯಾಂಡ್ ದೇಶಗಳಿಗೆ ತಮ್ಮ ಸಹಧರ್ಮಿಣಿ ಶ್ರೀಮತಿ ಕಾವ್ಯಾ ಅವರೊಂದಿಗೆ ಕೈಗೊಂಡ ಪ್ರವಾಸದ ವಿಶಿಷ್ಟವಾದ ಅನುಭವಗಳನ್ನು 'ಸುಂದರ ಸ್ವಪ್ನದರ್ಶನ' ಎಂಬ ಕೃತಿಯಲ್ಲಿ ದಾಖಲಿಸಿದ್ದಾರೆ. ಪ್ರವಾಸವೆಂದರೆ ಕೇವಲ ಸಂಭ್ರಮ, ಸಡಗರ, ಮೋಜು, ಮಸ್ತಿಯಂಥ ಅನುಭವಗಳಿಗೆ ಮಾತ್ರ ಸೀಮಿತಗೊಳಿಸದೆ ಅದರಾಚೆಗಿನ ಆ ದೇಶಗಳ ಆರ್ಥಿಕ, ಸಾಮಾಜಿಕ, ರಾಜಕೀಯ ವಿದ್ಯಮಾನಗಳ ಕುರಿತಾಗಿ ಆ ಸಂದರ್ಭದಲ್ಲಿ ಪಡೆದುಕೊಂಡು ಬಂದ ಅನೂಹ್ಯವಾದ ಅನುಭವಗಳಿಗೆ ಪೂರಕವಾದ ಮಾಹಿತಿಯನ್ನು ಕಲೆ ಹಾಕಿ, ವಿವರವಾಗಿ ಈ ಕೃತಿಯಲ್ಲಿ ದಾಖಲಿಸಿದ್ದಾರೆ. ಅದಕ್ಕೇ ಸಿಂಗಾಪೂರ, ಮಲೇಶಿಯಾ ಮತ್ತು ಥಾಯ್‌ಲ್ಯಾಂಡ್ ದೇಶಗಳ ಅಭಿವೃದ್ಧಿ, ಸರಕಾರದ ಕಾರ್ಯದಕ್ಷತೆ, ನಾಡ ಜನರ ಕಾರ್ಯಕ್ಷಮತೆ – ಇವೆಲ್ಲವುಗಳ ಕುರಿತಾಗಿ ವಾಸ್ತವಕ್ಕೆ ಹತ್ತಿರವಿರುವಂತೆಯೇ ವಿವರವಾದ ಮಾಹಿತಿಗಳು ಈ ಕೃತಿಯಲ್ಲಿ ಅಡಕವಾಗಿವೆ. ಹೀಗಾಗಿ, ಇದು ಕೇವಲ ಪ್ರವಾಸ ಕಥನವೆನಿಸಿಕೊಳ್ಳದೆ ಸ್ಪರ್ಧಾತ್ಮಕ ಪರೀಕ್ಷೆಗೆ ತಯಾರಾಗುವ ವಿದ್ಯಾರ್ಥಿಗಳಿಗೆ ಕೈಪಿಡಿಯಂತೆಯೂ ಇದೆ. ಈ ವಿಚಾರದಲ್ಲಿ ಡಾ॥ ಅಶೋಕ ನರೋಡೆಯವರು ಸ್ತುತ್ಯರ್ಹರು.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ*

## ಸೋತು ಗೆದ್ದ ಮನುಷ್ಯ **(ಸ್ಕಿಜೋಫ್ರೀನಿಯಾ ರೋಗಿಯೊಬ್ಬನ ಆತ್ಮಕಥೆ)**

*ತೆಲುಗು ಮೂಲ : ಮಲ್ಲಾರೆಡ್ಡಿ (ಅನು : ಕಸ್ತೂರಿ)*

**ಪುಟ : ೧೫೨** **ಬೆಲೆ : ರೂ. ೧೧೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಮಾನಸಿಕವಾಗಿ ನರಳಿದ ವ್ಯಕ್ತಿಯೊಬ್ಬ ತನ್ನ ಅನುಭವಗಳನ್ನು ಹೇಳಿಕೊಂಡು ಸರಿಯಾದ ಚಿಕಿತ್ಸೆಯಿಂದ ಮನೋರೋಗ ಗುಣವಾಗಬಲ್ಲದೆಂದು ನಿರೂಪಿಸಿ ಇತರ ಮಾನಸಿಕ ರೋಗಿಗಳಿಗೆ ಈ ಕೃತಿಯಲ್ಲಿ ಭರವಸೆಯನ್ನು ನೀಡಿರುತ್ತಾರೆ. ತನ್ನ ಅನುಭವದಿಂದ ಅನೇಕ ಸಲಹೆಗಳನ್ನೂ ನೀಡಿದ್ದಾರೆ. ಮನೋರೋಗಕ್ಕೆ ಕೌಟುಂಬಿಕ ಪರಿಸರ, ಸಮಾಜದ ನಡವಳಿಕೆ ಹೆಚ್ಚಿನ ಸಂದರ್ಭದಲ್ಲಿ ಕಾರಣವಾಗುತ್ತವೆ. ನಾವು ಊಹಿಸಿದ್ದಕ್ಕಿಂತ ಭಿನ್ನವಾಗಿ ನಡೆದುಕೊಂಡು ಶ್ರೀ ಮಲ್ಲಾರೆಡ್ಡಿಯವರಿಗೆ ಆಸರೆಯಾಗಿ ನಿಂತು ಬಹಳ ಕಾಳಜಿಯಿಂದ ಅವರನ್ನು ನೋಡಿಕೊಂಡ ಅವರ ಪತ್ನಿ ಶ್ರೀಮತಿ ಉಮಾದೇವಿಯವರಿಗೆ ವಂದನೆಗಳನ್ನೂ ಕೃತಜ್ಞತೆಗಳನ್ನೂ ಹೇಳುವುದು ಸೌಜನ್ಯವಾದೀತು. ಈ ಕಥನದಲ್ಲಿ ವಿವರಗಳನ್ನು ತುಂಬ ಮುಗ್ಧವಾಗಿ ಹೇಳಿಕೊಂಡಿದ್ದಲ್ಲದೆ ಎಲ್ಲಿಯೂ ಯಾರಿಂದಲೂ ಅನುಕಂಪ ಗಿಟ್ಟಿಸುವಂಥ ಹೇಳಿಕೆಗಳಿಲ್ಲ. ಸಹಜವಾಗಿ ನಡೆದ ಘಟನೆಗಳನ್ನಷ್ಟೇ ದಾಖಲಿಸುತ್ತ ಹೋಗಿದ್ದಾರೆ. ಸ್ಕಿಜೋಫ್ರೀನಿಯಾ, ಖಿನ್ನತೆಗಳಿಂದ ಮಾನಸಿಕ ಸ್ಥಿಮಿತ ಕಳೆದುಕೊಳ್ಳುವ ದುರ್ಬಲ ವ್ಯಕ್ತಿಗಳಿಗೆ ಧೈರ್ಯ–ಸ್ಥೈರ್ಯ ತುಂಬಬಲ್ಲ ಕೃತಿ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

## ನೈಲ್ ದಾರಿಗುಂಟ.. **(ಈಜಿಪ್ಟ್ ಪ್ರವಾಸ ಕಥನ)**

*ಡಾ॥ ಎಚ್. ಎಸ್. ಅನುಪಮಾ*

**ಪುಟ : ೧೫೨** **ಬೆಲೆ : ರೂ. ೧೨೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಕತೆಗಾರ್ತಿ, ಕವಯಿತ್ರಿ, ಅಂಕಣಕಾರ್ತಿ ಮತ್ತು ವೈಚಾರಿಕ ಲೇಖಕಿ ಹಾಗೂ ಪ್ರಕಾಶಕಿ ಡಾ॥ ಎಚ್. ಎಸ್. ಅನುಪಮಾ ಅವರ ಹಲವಾರು ಅಭಿವ್ಯಕ್ತಿಗಳಲ್ಲಿ ಪ್ರವಾಸ ಸಾಹಿತ್ಯವೂ ಪ್ರಮುಖ ಸ್ಥಾನವನ್ನು ಪಡೆಯುತ್ತದೆ. 'ತಿಂಗಳು' ಮಾಸಪತ್ರಿಕೆಯಲ್ಲಿ ಕೆಲವು ಕಂತುಗಳಲ್ಲಿ ಪ್ರಕಟವಾದ ಅವರ "ನೈಲ್ ದಾರಿಗುಂಟ" ಈಜಿಪ್ಟ್ ಪ್ರವಾಸ ಕಥನದ ಎರಡನೆಯ ಮುದ್ರಣವಿದು. ಮೊದಲಿಗೆ, ಈಜಿಪ್ಟ್ ಪ್ರವಾಸದ ವರ್ಣನೆಗೆ ನೇರವಾಗಿ ಹೋಗದೆ, ಆರಂಭದಲ್ಲಿ ಪಾಸ್‌ಪೋರ್ಟ್ ಪುರಾಣ ಮತ್ತು ಏರ್‌ಪೋರ್ಟಿನ ಸ್ವಾರಸ್ಯಗಳ ಪರಿಚಯ ಮಾಡಿಸಿ, ನಂತರ ಓದುಗರಿಗೆ ಈಜಿಪ್ಟಿನ ದರ್ಶನ ಮಾಡಿಸುತ್ತಾರೆ. ಅತ್ಯಂತ ಪುರಾತನ ನಾಗರಿಕತೆಗಳಲ್ಲಿ ಒಂದಾದ ಈಜಿಪ್ಟಿನ ೫೦೦೦ ವರ್ಷಗಳ ರಾಜರ ಆಳ್ವಿಕೆ ಮತ್ತು ನಾಗರಿಕತೆಯ ಚರಿತ್ರೆಯನ್ನು ಪರಿಚಯ ಮಾಡಿಕೊಡುತ್ತಲೇ ಈಜಿಪ್ಟಿನ ಮುಖ್ಯ ನಗರಗಳಾದ ಕೈರೋ, ಅಲೆಕ್ಸಾಂಡ್ರಿಯಾ ಮತ್ತು ಲಕ್ಸರ್‌ಗಳಲ್ಲಿರುವ ಕಲಾ ವೈಭವವನ್ನು ಪರಿಚಯಿಸುತ್ತಾರೆ. ಈಜಿಪ್ಟ್ ಎಂದೊಡನೆ ಯಾರಿಗಾದರೂ ನೆನಪಾಗುವ ಪಿರಮಿಡ್ಡುಗಳು ಮತ್ತು ಮಮ್ಮಿಗಳ ಬಗ್ಗೆ ಸುದೀರ್ಘವಾಗಿ ಬರೆದಿದ್ದಾರೆ. ನೈಲ್ ನದಿಯ ಗುಂಟ ಕಂಡುಬರುವ ಈಜಿಪ್ಟಿನ ಬಹುಪಾಲು ಇತಿಹಾಸ ಪ್ರಸಿದ್ಧ ಸ್ಮಾರಕಗಳ ಚಿತ್ರಣ ಇಲ್ಲಿದೆ. ನೈಲ್ ನದಿಯ ಪೂರ್ವ ದಂಡೆಯಲ್ಲಿ ದೇವಾಲಯಗಳಿದ್ದರೆ ಪಶ್ಚಿಮ ದಂಡೆಯಲ್ಲಿ ಪಿರಮಿಡ್, ಗೋರಿಗಳಿವೆ. ನೈಲ್ ಕ್ರೂಸಿನಲ್ಲಿ ಕುಳಿತು ನದಿ ಮೇಲೆ ಹಗಲು ರಾತ್ರಿ ತೇಲುತ್ತಾ ಹೋಗುವ ಅಪರೂಪದ ಅನುಭವವನ್ನು ಸವಿಯುತ್ತಾ ಲೇಖಕಿ ಭಾರತದ ಅನುಭವವನ್ನು ನೆನೆದು ಹೋಲಿಕೆ ಮಾಡುತ್ತಾ ಹೋಗುತ್ತಾರೆ. ಪ್ರವಾಸಕ್ಕೆ ಮುಂಚೆ ಮತ್ತು ನಂತರ ಈಜಿಪ್ಟ್ ಕುರಿತು ಅಪಾರ ಮಾಹಿತಿ ಸಂಗ್ರಹಣ ಮತ್ತು ಅಧ್ಯಯನ ನಡೆಸಿರುವುದು ಈ ಕೃತಿಯಲ್ಲಿ ಕಂಡುಬರುತ್ತದೆ. ಆದ್ದರಿಂದಲೇ ಇದು ಪ್ರವಾಸ ಕಥನದ ಅನುಭವಕ್ಕಿಂತಲೂ ಹೆಚ್ಚಾಗಿ ಚರಿತ್ರೆಯ ಮಾಹಿತಿ ಒದಗಿಸುವ ಸಂಶೋಧನ ಕೃತಿಯಂತೆ ಭಾಸವಾಗುತ್ತದೆ.*

– **ಎನ್. ಆಶಾ,** ಗವಿಪುರಂ, ಬೆಂಗಳೂರು

# ಹಲಗಲಿಯ ಬೇಡರು

**ಪಲ್ಲಾ**

ಹೊತ್ತು ಬಂದಿತು ಮತ್ತ ನೋಡರಿ ಕತ್ತಿ ಹಿಡುವ ಜನಕ
ಶಿತ್ತಿನ ಮಂದಿ ಭಂಟರ ಹಲಗಲಿ ಮುಟ್ಟಲಿಲ್ಲ ದಡಕ

**೧ನೇ ನುಡಿ**

ವಿಲಾತಿಯಿಂದ ಹುಕುಮ ಕಳ್ಳವಿದರ ಕುಂಪಣಿಸರಕಾರಾ
ಎಲ್ಲ ಜನರನಾ ತರಿಸಿ ಜೋರಿ ಮಾಡಿ ತರಬೇಕ ಹತಾರಾ

ಕತ್ತಿ ಕಟಾರಿ ಕೈ–ಚೂರಿ ಬಾಕು ಗುರ್ದಿ ಸುರಾಯಿ ಚಕ್ರಾ
ಬಾಲಿಯ ಬರ್ಚಿ ಬಿಚ್ಚುಗತ್ತಿ ನೋಡಿ ಬಾಣಬಿಲ್ಲಿನವರಾ

ಪಟಾತ ಪಿಸ್ತುಲ ಕರುಲಿ ತೇಗಾ ಚಾಪಗೊಡ್ಲಿಶಸ್ತ್ರಾ
ತೋಪು ತಂಬಾಕಿ ಹೊಡವು ಮದ್ದ ಗುಂಡ ಬಿಡಬ್ಯಾಡರಿ ಚೂರಾ

ಮುಚ್ಚಿ ಇಟ್ಟವರಿಗೆ ಮೂರು ವರ್ಷದ ಬೇಡಿ ಹಾಕರಿ ಪೂರಾ
ಕೊಡದ ದಿಟಾಯಿ ಮಾಡಿದವರನಾ ಕಡದ ಹಾಕರಿ ತಾರಾ ॥ ಚ್ಯಾಲ॥

ಬೇಡಿದಾ ಕ್ಷಣಕ ತಾವು ತಂದು
ಕೊಡತಾರ ಹಿಡಿಹಿಡಿರ್ ಎಂದು

ವತ್ನ ಕೊಡತೇವ್ ಅನ್ನರಿ ವೊಂದ್ ಒಂದು
ತಂದು ಕೊಡತಾರ ತಮ್ಮ ಕುಸಿಲಿಂದು

ಬಂದಿತು ಹುಕುಮ ಹೀಂಗ್ ಎಂದು
ಡಣ್ಣರ ಸಾರಿದರ ಮುಂದು

ಶೂರ ಶಿಪಾಯಿಜನರ ತಾವು ತಿಳಿದು
ಅಳತಾರು ಕಣ್ಣಿಗೆ ನೀರ್ ತಂದು ॥ ಯೇರ ॥

ಬಹಳ ಚಿಂತಿಯ್ ಆಗಿ ದುಃಖದಿಂದ ಅವರು ಬಿದ್ದರ್–ಅಣ್ಣ ನೆಲಕ

**೨ನೇ ನುಡಿ**

ಕೇಳುತ ಹುಕುಮಾ ಕೆಳವರ ತಂದ ತಂದ ಕೊಟ್ಟಾರ ಆವಾಗ
ಬಹಳ ಬೆಲಿವು ಹೆಚ್ಚಿನ ಹತಾರಾ ಮುಚ್ಚಿ ಇಟ್ಟರ ವೊಳಗ

ಸಾಲಸಮದ ಮಾಡಿ ದನ–ಕರ ಮಾರಿ ತಂದಿನ್ನಿ ಹಬ್ಬದಾಗ
ನೋಡ ನೋಡ ಹ್ಯಾಂಗೆ ಕೊಡುನ್ ಅಂತ ಹಂಗಿದ್ ಇಟ್ಟರ ನೆಲದಾಗ

ಶೂರ ಚಟಗಾರು ಜಾಯಿತಸಾಹೇಬ ಬಂದಾರ ಆವಾಗ
ಸಂದಿಯಗೊಂದಿ ವೊಂದು ಉಳಿಯದ್‌ಅಂಗ ಹೊಕ್ಕ ಹುಡಿಕೆರೆ ಮನಿಯಾಗ

ತೆಪ್ಪಿತ್‌ಉಪಾಯಿ ಇನ್ನ ಮಾತರ ಮಾಡುನ್ ಅಂತರ ಹ್ಯಾಂಗ
ವೊಬ್ಬರಕ್‌ಒಬ್ಬರ ಜ್ಯಾಡಿ ಹೇಳತಾರ ವರ್ಮ ಸಾಧಿಸದ್‌ಹಾಂಗ್ ॥ಚ್ಯಾಲ॥

ಜ್ಯಾಡಸಿ ಹೋದವೊ ಯಲ್ಲಾ
ನಾಡ್‌ಒಳಗೆ ಯೇನು ಉಳಿಲಿಲ್ಲಾ

ಅಜ್ಜಮುತ್ತೈರ ಹಿಡುವ ಪಿಸ್ತುಲ
ಕಾಸದ್‌ಒದರ ಕತ್ತಿಯ ಡಾಲಾ

ಕವಚ ಬೆಳ್ಳಿಯ ಮಕವಾಲಾ
ರತ್ನದ ಹಿಡಿಕಿವ ಹೋದವು ಯೆಲ್ಲಾ ॥ಯೇರ॥

ಹೋದ ಹತಾರಕ ಹೊಟಿಬ್ಯಾನಿ ಹಚ್ಚಿಕೊಂಡ ನಿಂತಾರ ಸಾವುದಕ

**೩ನೇ ನುಡಿ**

ಹಲ್ಲ ಕಿತ್ತಿದಾ ಹಾಂವಿನ ಪರಿಯು ನಮಗ ಆದಿತ್‌ಅಲ್ಲಾ
ರಂಡಿ ಮುಸುಕ ಹಾಕಿ ತಿರಿಗಿದರೆ ನಮ ಮಾನ ಉಳಿಯುವುದಿಲ್ಲಾ

ಮಗ್ಗಲದಾಗಿನ ಹೇಣತಿ ಕೊಟ್‌ಅಮಗ ಅತಿ ಹೇಡಿ ಆದೇವ್‌ಅಲ್ಲಾ
ಸತ್ತ ಹೆಣಕ ಶೃಂಗಾರ ಮಾಡಿದ ಪರಿ ಆದಿತ್‌ಅಲ್ಲಾ

ಸಾವಕಾರು ನಮ್ಮ ಜೀವ ಹೋದಿತ್‌ಅಂತ ಚಿಂತಿ ಮಾಡೇರ್‌ಅಲ್ಲಾ
ಹಗಲಿ ಮನಿ ಹೊಕ್ಕ ಹಣಾ ವೊದರ ಕೇಳವರ್‌ಯಾರ್‌ಇಲ್ಲಾ

ಪುಂಡ ಪುಂಡ ಪಾಳೆಗಾರ ಪಚ್ಚ್ಯಾ ವಜೀರರು ಪಂತ ಹಿಡಿಯಲಿಲ್ಲಾ
ದಂಡನ್ ಆಳುವ ಧೊರಿ ದೌಲತರ್‌ಅಂಜಿ ಕುಳಿತರ್‌ಅಲ್ಲಾ ॥ಚ್ಯಾಲ॥

ದೇವರ ತಂದ ಪಡಿಪಾಟಾ
ಚಿಂತಿ ಹತ್ತಿ ಆದರೋ ನಷ್ಟಾ

ಅಧಿಕಾರ ಉಳಿಯಲಿಲ್ಲ ಯೆಳ್ಳಅಷ್ಟಾ
ಕೇಡಗಾಲ ಬಂದಿತು ಕನಿಕಷ್ಟಾ

ಹೆಂಗಸ್‌ಆಗಿ ಶೀರಿಯ ವುಟ್ಟಾ
ಸೋಂಡ್‌ಒಣಗಿ ಆದೀತೋ ಬೊಬ್ಬಾಟಾ
ಆದ್‌ಹಾಂಗ್‌ಅತಿ ಸ್ತ್ರೀಯರ ಕ್ರೀಡಾದ್ ಆಟಾ
ಭಂಟರಿಗೆ ಬಂದಿತೊ ಬಿಕ್ಕಷ್ಟಾ ॥ಯೇರಾ॥

ಪಕ್ಕಾ ಕಿತ್ತ ಪಕ್ಷಿ ಗತಿ ಆಗಿ ಚಿಂತಿ ಅದರ ಮನಕ

**೪ನೇ ನುಡಿ**

ಹಲಗಲಿ ಅಂಬುವ ಹಳ್ಳಿ ಮುಧೋಳರಾಜ್ಯದಾಗ ಇತ್ತು
ಪೂಜೆರಿ ಹಣಮಾ ಬಾಲ ಜಡಗ ರಾಮ ಮಾಡ್ಯಾರ ಮಸಲತ್ತು

ಕೈನ ಹತಾರ ಕೊಡಬಾರದೊ ನಾವು ನಾಲ್ಕು ಮಂದಿ ಜತ್ತು
ಹತಾರ ಹೋದ್ ಇಂದ ಬಾರದ ನಮ್ಮ ಜೀವ ಸತ್‌ಓಗುದು ಗೊತ್ತು

ವೊಳಗಿಂದ್‌ಒಳಗ ವಚನ ಕೊಟ್ಟರೊ ಬ್ಯಾಡರ್ ಎಲ್ಲ ಕಲಿತು
ಕಾರಕೂನನ ಕಪಾಳಕ ಬಡದರ ಶಿಪಾಯಿ ನೆಲಕ ಬಿತ್ತು ॥ಚ್ಯಾಲ॥

ದುಃಖದಿಂದ ಅವರು ಅಲ್ಲಿಗ್ ಹೋಗಿ
ಸಾಹೆಬಗ ಹೇಳಿದರ ಕೂಗಿ

ಕೇಳೀ ಸಾಹೇಬ ಯೆದ್ದ ಸಿಟ್ಟಿಗಿ
ತಿರಿಗಿ ಹೋದ ಆವಾಗ ಕಲಾದಗಿ

ಕರ್‍ಸಿ ಕೃಷ್ಣನಾಯಕಗೌಡ ಕುಂದರಗಿ
ಕರಶ್ಯಾನ ಸಂಧಾನಕ್ಕೆಆಗಿ ॥ಯೇರ॥

ಹಟಾ ಮಾಡಬಾರದು ನಿಮ್ಮ ಹತಾರ ಕೊಡಿರಿ ಸಾಹೇಬನ್ ಈಶಕ

**೫ನೇ ನುಡಿ**

ಹತಾರ ಕೊಡಲಿಕೆ ಹೆಂಗಸ್‌ಆಗಿ ಬಳಿಯ್ ಇಟ್ಟಿಲ ಕೈಯಾಗ
ಯಾವ ಬಂದಿರೀ ಜೀವಹೋದರೂ ಕೊಡುದಿಲ್ಲ ಸುಮ್ಮನ್ ಹೋಗರಿ ಈಗ

ಅಂಚ ಮಾತ ಯೆಲ್ಲ ಬಂದ ಹೇಳಿದಾಗ ಆವಾಗ ಸಾಹೆಬಗ
ಶಿಟ್ಟಲಿ ಮುಂಗೈ ಕಟ್ಟನೆ ಕಡಕೊಂಡ ಹುಕುಮ ಕೊಟ್ಟರ್ ಆಗ

ಕುದರಿಯಮಂದಿ ಕೂಡಿ ಮುಟ್ಟಿತೊ ಹಲಗಲಿಸ್ಥಳದ ಮೇಗ
ವೊಳಗಿನ ಮಂದಿ ವೊಟ್ಟರಲೆ ಹೊಡದರ ಮುಂಗಾರಿ ಮಳಿ ಸುರದ್‌ಅಂಗ

ಹೊರಗಿನ ಮಂದಿ ಗುಂಡ ಹತ್ತಿಕೆರೆ ತಿರಿಗೆರ ಆವಾಗ
ಕಾಗದ ಬರದ ಕಳವರೆ ಬೇಗನೆ ದಂಡ ಬರಲ್ ಎಂತ ಹೀಂಗ ॥ಚ್ಯಾಲ॥

ದಂಡ ಬಂತ ನೋಡ ತಯಾರ್‌ಆಗಿ
ಜಲದ ಮಾಡಿ ಬಂತ ಹಲಗಲಿಗಿ

ಆರ ತಾಸ ರಾತ್ರ್ಯಾಗ ಹೋಗಿ
ಊರಿಗಿ ಹಾಕಿದಾರ ಮುತ್ತಿಗಿ

ಗುಂಡ ಹೊಡದಾರ ವಿಪರೀತ ಸೂರಿಆಗಿ
ಅಂಜಿ ವೋಡಾಕ್‌ಹತ್ತಿತ ಮುಂದ್‌ಆಗಿ
ಬೆನ್ನ ಹತ್ತಿ ನೋಡಿದಾಗ ಇವರ್ ಆಗಿ
ಬಿದ್ದಾವ ಹೆಣಗೋಳು ಸೂರಿ ಆಗಿ ॥ಯೇರ॥

ಮುತ್ತಿಗೆ ಹಾಕಿ ಅವರು ಕತ್ತಿಲಿ ಕಡದರ ಅಂಜಲಿಲ್ಲ ಯಾತ್‌ಎತಕ

**೬ನೇ ನುಡಿ**

ಬೆನ್ನ ಹತ್ತಿ ತಿರಿತಿರಿವಿ ಕಡದರೊ ಯೇನು ಉಳಿಯದ್‌ಅಂಗ
ನಡವಿ ಹಾಕಿಕೊಂಡ ಹೊಡದರ ಗುಂಡ ದರಜ್ ಇಲ್ಲದ್‌ಹಾಂಗ

ಕವಾತ ಫೈರಾ ಸುತ್ತಗಟ್ಟಿ ತಂಬು ನುಡಿಶಾರ ಆವಾಗ
ತೋಪು ತುಂಬಾಕಿ ಕರುಲಿ ಪಿಸ್ತುಲ ಬಾಕ ನಡವಿನಾಗ

ಶಿಡಿಲಿನ ಹಂತ ಗುಂಡ ಹೊಡವುತ ಕತ್ತಿಲಿ ಕಡದರ ವೊಲ್ಸ್‌ಅಂಗ
ನಡುಗಿತು ಬಯಾಡಕಿ ಕೆನ್–ಧೂಲ ಹರಿದ್–ಅಂಗ ಕಡದಾಟವು ಹ್ಯಾಂಗ

ಕೇಡ–ಗಾಲ ಬಂದಿತ ನಡವಿ ಶಿಕ್ಕರೊ ಬಿಡಸವರ್–ಯಾರ್–ಈಗ
ಚಟಿಕಾರರು ಚಾಟಿ ಮಾಡುತ ನಡದರ ಗುಡದಾಗ ॥ಇಳವ॥

ಅಗಸಿಗೆ ಬಂದು ನಿಂತಿತು
ಹೆಬಲಕ್–ಸಾಹೇಬಂದು ತಾವು ನಿಂತು
ಹೇಳತಾರ ಬುದ್ಧಿಯ ಮಾತು
ಕೊಡತೇವ ಕವಲ ಈ ಹೊತ್ತು
ಹೋಗಬ್ಯಾಡರಿ ವೆರ್ತಾ ನೀವು ಸತ್ತು ॥ಯೇರ॥

ಯೆಂಬು ಮಾತಿಗೆ ನಂಬಿಗೆ ಸಾಲದ ಹಣಮ ಬಂದ ಮುದಕ

**೭ನೇ ನುಡಿ**

ಜಡಗ ಹೇಳತನಕ ಹೊಡಿ ಇವರನಾ ಈಗ ಘಾತಕರೊ ಯಿವರಾ
ಇಸವಸ–ಘಾತಾ ಮಾಡಿ ನೆಂಬಿಗಿಲೆ ಮಾಡತಾರ ಫಿತುರಾ

ಮೋಸ–ಮಾಡಿ ಬಲ–ದೇಶ ತಗೋತರ ಮುಂದ ನಮಗ ಗೋರಾ
ಅಂದ ಹೊಡದಾರೋ ವಒಂದು ಗುಂಡಿಗೆ ಆದ ಸಾಹೇಬ ಟಾರಾ

ಕಾರ್–ಸಾಹೇಬ ಬೆಂಕಿ–ಚೂರ ಆಗಿ ತಾನು ಲೂಟಿ ಮಾಡ್–ಅಂದ ವೊರ
ಹುರಪಿಲಿ ಹೊಡದರ ಮಳಿ ಆದ ಹಾಂಗ ಗುಂಡ ಸುರದವು ಬರಪುರಾ

ಹಣಮ ಹೇಳತನ ಗುಂಡ ಹೊಡದಕೆರ ಕಡವುನ್–ಅಷ್ಟು ಬಾರಾ
ಮುನ್–ನೂರ ಮಂದಿ ಯನ್ನ ಮೇಗೆ ಬಿಟ್ಟ ಆಗ ನೋಡರಿ ಜೋರಾ ॥ಚ್ಯಾಲ॥

ಭೀಮನು ಇದರಿಗೆ ನಿಂತಾ
ಐ–ನೂರ ಮಂದಿಗೆ ಮಲತಾ

ಬಾಲನು ಮಾಡಿದ ಕಸರತ್ತಾ
ಕುದರಿಯ ಕಡದನೋ ಹತ್ತಾ

ರಾಮನ ಕಡತ ವಿಪರೀತಾ
ಕಾವಲಿ ಹರಿತೋ ರಕ್ತಾ

ಸಾವಿರ ಆಳಿಗೆ ವೊಬ್ಬ ಮಲತಾ
ಕೂಗುತಾನೊ ಕಡಿ–ಕಡಿರ್–ಎಂತಾ ॥ಯೇರ॥

ನಾಲ್ಕು ಮಂದಿ ಹೀಂಗ ಕಡದ ಸತ್ತರೋ ಭಂಟರ್–ಆನಸೆರ ಜನಕ

**೮ನೇ ನುಡಿ**

ಯಾರು ಕೇಳಲಿಲ್ಲ ಆರು ಗುಂಡ ತಾಕಿ ಹಣಮ ಬಿದ್ದ ನೆಲಕ
ಚೀರಿ–ಆಡುತ ಜನ ಸುತ್ತಗಟ್ಟಿತೊ ಅಂಜಿ–ಕೊಂಡ ಜೀವಕ

ಶೂರವೊಬ್ಬ ಬಹಳ ಜೋರ ಮಾಡಿದನ ಹತಾರ ತಗೊಳುದಕ
ಯೇರಿ ಬರು ಕುದರಿ ಕಾಲ ಕಡದನೊ ಸ್ವಾರ ಬಿದ್ದ ನೆಲಕ

ರಾಮಿ ಗುಂಡಿಲಿ ಜೋರ ಮಾಡಿ ಹೊಡದಳೊ ಮೂರ ಮಂದಿ ಶರಿಕ
ಆರ ಕುದರಿಯ ಕಡದ ಸಿಡದಳೊ ಬಾಲನ ಸೂರಾಯಕ ॥ಚ್ಯಾಲ॥

ಯಾರ್–ಯಾರು ಇಲ್ಲದ್–ಆದೀತು
ಊರ್–ಎಲ್ಲಾ ಲೂಟಿ ಆಗಿ ಹೋತು

ಮಂದಿ ಮನಿ ಹೊಕ್ಕ ಹುಡಕಿತು
ದನ–ಕರಾ ಲಯಾ ಆದೀತು

ಸಣ್ಣ ಕೂಸಗಳು ಹೋದವು ಸತ್ತು
ಬೆಂಕಿ ಹಚ್ಚ್ಯಾರ ಊರ ಸುಟ್ಟಿತು

ನಷ್ಟ ಆತನೋಡರಿ ಈವತ್ತು
ನಾ ಹೇಳತೇನ ಈ ಮಾತು ॥ಯೇರ॥

ಇಷ್ಟ –ಎಲ್ಲ ಆಳವ್–ಆಗಿ ಹೋದಿತೋ ಮುಟ್ಟಲಿಲ್ಲ ಯಾತ್–ಎತಕ

**೯ನೇ ನುಡಿ**

ಕತ್ತಿ ಕುದರಿ ಮುತ್ತು ಮಾಣಿಕಾ ಯಾವದು ಬಿಡಲಿಲ್ಲಾ
ಬೆಳ್ಳಿ ಭಂಗಾರಾ ಹರಳಿನ್–ಉಂಗರಾ ಹೊನ್ನ್–ಉಂಗರ ಗೋಲಾ

ಸರಗಿ ಸರ್ದಳಿ ಬುಗುಡಿ ಬಾವಲಿ ಬಿಡಲಿಲ್ಲಾ
ಕಡಗ ಕಂಕಣಾ ನಡವಿನ–ಡಾಬಾ ನಡಕಟ್ಟು ರುಮಾಲಾ

ಕುಬಶಾ ಶೀರಿ ಹಪ್ಪಳ ಶಾಂಡಿಗಿ ಕುರ್ಚಿಗಿ ಕಂಡಗೋಲಾ
ಕೊಡಲಿ ಕೋಟಿ ಕುಡ–ಕಬ್ಬಿಣಾ ಮಸರು ಬೆಣ್ಣೆ ಹಾಲಾ

ಉಪ್ಪ ಯೆಣ್ಣೆ ಅರಿಶಿಣ ಜೀರಿಗಿ ಅಕ್ಕಿ ಸಕ್ಕರಿ ಬೆಲ್ಲಾ
ಗಂಗಳ ಚರಗಿ ಮಂಗಳ–ಸೂತ್ರಾ ತಕೊಂಡ ಹೋದರ ಬಿಸು–ಕಲ್ಲಾ ॥ಇಳವ॥

ಹಾಳ್–ಆಗಿ ಹೋದಿತೊ ಇಷ್ಟು
ವರ್ಣಿಸಿ ಹೇಳಲು ಎಷ್ಟು

ಯೆಲ್ಲ ತಗೊಂಡರೋ ಶಿಕ್ಕ್–ಅಷ್ಟು
ಸರ್ಧ ನಿಂತರೊ ವೊರಿಗೆ ಕೊಳ್ಳಿ ಕೊಟ್ಟು

ಬೂದಿ ಮಾಡೆರ ಹಲಗಲಿ ಸುಟ್ಟು
ಹಲಗಲಿ ಗುರ್ತ ಎಳ್ಳಷ್ಟು

ಕಾಣಸ್ತ ಹೋದಿತೊ ಕೆಟ್ಟು
ವರ್ಣಿಸಿ ಹೇಳಿದೆನು ಇಷ್ಟು ॥ಯೇರ॥

ಕುರತಕೋಟಿ–ಕಲ್ಮೇಶನ ದಯದಿಂದ ಹೇಳುದ–ಕೇಳುದಕ

*ಕೃತಿ :– ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಸಂಪಾದನೆ, ಕ್ಯಾತನಹಳ್ಳಿ ರಾಮಣ್ಣ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು*

## ಮರೆಯಲಾಗದ ಹಲಗಲಿ ಬೇಡರು

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ೧೮೫೭ರ ಬಂಡಾಯ ಮಹತ್ವದ್ದು. ಅದೇ ಸಂದರ್ಭದಲ್ಲಿ ಅಂದಿನ ಮುಂಬೈ ಪ್ರಾಂತ್ಯದ ವಿಜಯಪುರ ಜಿಲ್ಲೆಯ ಬೀಳಗಿ ತಾಲೂಕಿನ ಹಲಗಲಿ ಎಂಬ ಪುಟ್ಟ ಹಳ್ಳಿಯಲ್ಲಿ ಬ್ರಿಟಿಷ್ ಸೇನೆ ನಡುಗಿಹೋದ ಘಟನೆ ನಡೆಯಿತು. ಸುಮಾರು ೫೦೦ ಜನಸಂಖ್ಯೆಯ ಈ ಪುಟ್ಟ ಹಳ್ಳಿಯ ಜನ ಬೇಡ ಸಮುದಾಯದವರು. ಬೇಟೆ ಆಡಿ ತಮ್ಮ ಆಹಾರ ಸಂಗ್ರಹಿಸುತ್ತಿದ್ದರು. ಬ್ರಿಟಿಷರ ವಿರುದ್ಧ ಉತ್ತರ ಭಾರತದಲ್ಲಿ ತೀವ್ರವಾಗಿ ನಡೆದ ೧೮೫೭ರ ಬಂಡಾಯದಲ್ಲಿ ಸೈನಿಕರು ಮಾತ್ರವಲ್ಲ ಜನಸಾಮಾನ್ಯ ರೈತರು, ಗ್ರಾಮೀಣ ಜನ ತಮ್ಮಲ್ಲಿರುವ ದಿನ ನಿತ್ಯ ಬಳಕೆಯ ಕೊಡಲಿ, ಕುಡುಗೋಲು ಹತಿಯಾರ ಮುಂತಾದ ಆಯುಧಗಳನ್ನು ಕೈಗೆತ್ತಿಕೊಂಡು ಬ್ರಿಟಿಷ್ ಸೇನೆಯ ವಿರುದ್ಧ ಹೋರಾಡಿದರು. ಅವರ ಕೆಚ್ಚನ್ನು ಕಂಡ ಕಂಪನಿ ಸರಕಾರ ಶಸ್ತ್ರಾಸ್ತ್ರ ನಿಯಂತ್ರಣದ ಹೆಸರಿನಲ್ಲಿ ಕಾನೂನು ಮಾಡಿ ಜನರ ಹತ್ತಿರವಿರುವ ಆಯುಧಗಳನ್ನು ಒಪ್ಪಿಸಲು ಹೇಳಿದರು. ಮುಧೋಳ ಸಂಸ್ಥಾನಿಕರೇ ಬ್ರಿಟಿಷರ ಹುಕುಂಗೆ ತಲೆಬಾಗಿದ್ದಾಗ, ಈ ಕಾನೂನನ್ನು ಧಿಕ್ಕರಿಸಿದ ಹಲಗಲಿ ಬೇಡರು ಪ್ರತಿಭಟನೆಗಿಳಿದರು. ಬ್ರಿಟಿಷ್ ಸೈನ್ಯವನ್ನೂ ಎದುರಿಸಿದರು. ೧೮೫೭ ನವೆಂಬರ್ ತಿಂಗಳಲ್ಲಿ ನಡೆದ ಈ ಸಂಘರ್ಷದಲ್ಲಿ ಬ್ರಿಟಿಷ್ ಅಧಿಕಾರಿ ಹ್ಯಾವ್‌ಲಾಕ್ ಸಾವನ್ನಪ್ಪುತ್ತಾನೆ. ಹಲಗಲಿ ಬೇಡರ ಕೆಚ್ಚಿಗೆ ಹೆದರಿದ ಅಲೆಕ್ಸಾಂಡರ್ ಎಂಬ ಅಧಿಕಾರಿ ಮತ್ತಷ್ಟು ಸೈನ್ಯವನ್ನು ತರಿಸಿ ರಾತ್ರಿ ಹಲಗಲಿ ಊರಿನ ಮೇಲೆ ದಾಳಿ ಮಾಡಿ ಇಡಿ ಊರಿಗೆ ಬೆಂಕಿ ಹಚ್ಚುತ್ತಾನೆ. ಬಂಡಾಯದ ನಾಯಕರಾದ ಹನುಮ, ಜಡಗ, ಬಾಲ, ರಾಮ ಅವರನ್ನೊಳಗೊಂಡು ಹದಿಮೂರು ಜನರನ್ನು ದಿ: ೧೧–೧೨–೧೮೫೭ರಂದು ಮುಧೋಳದ ಸಂತೆಯಲ್ಲಿ ನೇಣಿಗೇರಿಸುತ್ತಾರೆ. ಆ ಭಾಗದಲ್ಲಿ ಹಲಗಲಿ ಬೇಡರ ಧೈರ್ಯ, ಕೆಚ್ಚು, ಹೋರಾಟದ ಬಗೆಗೆ ಹಲವಾರು ಲಾವಣಿ, ಹಾಡುಗಳು ಜನಪದರಿಂದ ರೂಪಗೊಂಡಿವೆ. ಅಂಥ ಹಾಡುಗಳನ್ನು ಜೆ. ಎಸ್. ಫ್ಲೀಟ್ ಅವರು ತಾವು ಕೇಳಿಸಿಕೊಂಡಂತೆ ಸಂಗ್ರಹಿಸಿದ್ದಾರೆ. ಕ್ಯಾತನಹಳ್ಳಿ ರಾಮಣ್ಣನವರ ಸಂಪಾದನೆಯ ಈ ಹಲಗಲಿ ಬೇಡರ ಲಾವಣಿಯನ್ನು ಎಂ. ಬಿ. ಶ್ವೇತಾ 'ಹೊಸತು'ಗೆ ಕಳಿಸಿದ್ದಾರೆ. ಸ್ವಾತಂತ್ರ್ಯದ ೭೦ನೇ ವರ್ಷದ ಸ್ಮರಣೆಯಲ್ಲಿ ಧೀಮಂತ ಹೋರಾಟಗಾರರಾದ ಹಲಗಲಿ ಬೇಡರು ನಮ್ಮ ಸ್ಮರಣೆಯ ಭಾಗವಾಗಲಿ.

– ಸಂ.



# ಅಲಿಪ್ತತೆಯಿಂದ ಸಾಮ್ರಾಜ್ಯಶಾಹಿ ತೆಕ್ಕೆಗೆ

**ಸ್ವಾ**ತಂತ್ರ್ಯಾನಂತರದ ಎಪ್ಪತ್ತು ವರ್ಷಗಳಲ್ಲಿ ಭಾರತದ ವಿದೇಶೀ ನೀತಿಯ ತಿರುವುಗಳಿಗೆ ಯೋಗ್ಯವಾದ ಉದಾಹರಣೆ ಇತ್ತೀಚೆಗೆ ಪ್ರಧಾನಿ ನರೇಂದ್ರ ಮೋದಿ ಇಸ್ರೇಲಿಗೆ ಭೇಟಿ ನೀಡಿ ಬೆಸೆದಿರುವ ಮೈತ್ರಿ. ಭಾರತದ ಪ್ರಧಾನಿಯೊಬ್ಬರು ಆ ದೇಶಕ್ಕೆ ನೀಡುತ್ತಿದ್ದ ಮೊದಲ ಭೇಟಿ ಕೂಡ ಹೌದು. ಭಯೋತ್ಪಾದನೆಯ ವಿರುದ್ಧವಾಗಿ ಸೆಣೆಸಲು ಆ ದೇಶದ ಜೊತೆ ಕೈಜೋಡಿಸಿರುವುದರ ಪರಿಣಾಮ ಏನು ಎಂಬುದನ್ನು ಮುಂದಿನ ದಿನಗಳಲ್ಲಿ ನಿರೀಕ್ಷಿಸಬೇಕಾದ ಸಂಗತಿ. ತೈಲಭರಿತ ಪಶ್ಚಿಮ ಏಷಿಯಾದ ಅರಬ್ ರಾಷ್ಟ್ರಗಳ ಜೊತೆ ಒಳ್ಳೆಯ ಬಾಂಧವ್ಯ ಇರಿಸಿಕೊಂಡಿದ್ದ ಭಾರತ, ಆ ಭಾಗದಲ್ಲಿ ಪ್ಯಾಲೆಸ್ತೈನ್ ಜನರ ಸ್ವತಂತ್ರ ರಾಷ್ಟ್ರ ನಿರ್ಮಾಣದ ಹೋರಾಟಕ್ಕೆ ದೃಢವಾದ ಬೆಂಬಲಿಗವಾಗಿತ್ತು. ಅಲಿಪ್ತರಾಷ್ಟ್ರಗಳ ಕೂಟದಲ್ಲಿ ಪ್ಯಾಲೆಸ್ತೈನಿಗೆ ಪ್ರಾತಿನಿಧ್ಯ ನೀಡುವುದರಲ್ಲಿ ಭಾರತದ ಪಾತ್ರ ಹಿರಿದಾಗಿತ್ತು. ಈಗ ಅಲಿಪ್ತರಾಷ್ಟ್ರಗಳ ಕೂಟವೂ ಇಲ್ಲ, ಪ್ಯಾಲೆಸ್ತೈನಿನ ಸೊಲ್ಲೂ ಇಲ್ಲ. ಇಸ್ರೇಲಿಗೆ ಭೇಟಿ ನೀಡುವುದಕ್ಕೆ ಮುನ್ನ ಪ್ರಧಾನಿ ಮೋದಿ ಅಮೆರಿಕಕ್ಕೆ ಭೇಟಿ ನೀಡಿ ನೂತನ ಅಧ್ಯಕ್ಷ ಟ್ರಂಪ್ ಕೈಕುಲುಕಿದ್ದರು. ಇದು ಅಧಿಕಾರ ವಹಿಸಿಕೊಂಡ ಮೇಲೆ ಆ ದೇಶಕ್ಕೆ ಅವರು ನೀಡಿದ ಐದನೆಯ ಭೇಟಿ.

ಹೀಗೆಂದರೆ, ಹಿಂದೆ ಇದ್ದ ಸರಕಾರಗಳು ಅಮೆರಿಕದೊಂದಿಗೆ ಸಖ್ಯಕ್ಕೆ ಹಾತೊರೆಯುತ್ತಿರಲಿಲ್ಲ ಎಂದೇನಿಲ್ಲ. ಏಳು ದಶಕಗಳ ಹಿಂದೆ ಸ್ವತಂತ್ರ ಭಾರತ ರೂಪಿಸಿಕೊಂಡ ವಿದೇಶೀ ನೀತಿ ಅದರ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದ ಪರಂಪರೆಗೆ ಅನುಗುಣವಾಗಿಯೇ ಇದ್ದಿತು. ಬ್ರಿಟಿಷ್ ಸಾಮ್ರಾಜ್ಯ ನಿರ್ಮಿಸಿದ್ದ ಕಾಮನ್‌ವೆಲ್ತ್ ಕೂಟದ ಸದಸ್ಯ ಆಗಿದ್ದರೂ ಭಾರತ ತನ್ನ ಸ್ವಾತಂತ್ರ್ಯ, ಸಾರ್ವಭೌಮತ್ವ ಹಾಗೂ ಸಮಗ್ರತೆಯನ್ನು ಎತ್ತಿಹಿಡಿಯುವ ವಿದೇಶೀ ನೀತಿಯನ್ನು ಅನುಸರಿಸಿತು. ವಸಾಹತುಶಾಹಿ ದಬ್ಬಾಳಿಕೆಯನ್ನು ಇನ್ನೂರು ವರ್ಷ ಅನುಭವಿಸಿದ್ದ ಭಾರತ ಸಹಜವಾಗಿಯೇ ಏಷಿಯ, ಆಫ್ರಿಕ ಹಾಗೂ ಪ್ರಪಂಚದ ಇತರ ಕಡೆಗಳಲ್ಲಿ ಜರುಗುತ್ತಿದ್ದ ವಿಮೋಚನಾ ಚಳವಳಿಗಳಿಗೆ ಬೆಂಬಲ ನೀಡಿತ್ತು. ಎರಡನೇ ಜಾಗತಿಕ ಸಮರದ ತರುವಾಯ ಅಂತರರಾಷ್ಟ್ರೀಯ ರಂಗದಲ್ಲಿ ಪರಸ್ಪರ ವಿರುದ್ಧವಾಗಿ ರೂಪುಗೊಂಡಿದ್ದ ಎರಡು ಶಕ್ತಿಕೇಂದ್ರಗಳ ಪೈಕಿ ಯಾವೊಂದರ ಕಡೆಗೂ ವಾಲದೆ, ನಿಷ್ಪಕ್ಷಪಾತವಾದ ಸ್ವತಂತ್ರ ನಿಲುವು ತಳೆದಿತ್ತು ಭಾರತ. ಈ ನೀತಿಗೆ ಸರ್ವಪಕ್ಷಗಳ, ಜನರ ಬೆಂಬಲವೂ ಇತ್ತು. ಸಾಮ್ರಾಜ್ಯಶಾಹಿಗಳು ಆ ದಿನಗಳಲ್ಲಿ ಹೊಸೆದ ಮಿಲಿಟರಿಕೂಟಗಳಿಂದ ದೂರ ಉಳಿದು ಅಲಿಪ್ತ ನೀತಿಯನ್ನು ಅನುಸರಿಸಿತು. ಭಾರತ ಅನುಸರಿಸಿದ ಈ ನೀತಿ ಹೊಸದಾಗಿ ಸ್ವಾತಂತ್ರ್ಯ ಪಡೆದುಕೊಂಡಿದ್ದ ಏಷಿಯ, ಆಫ್ರಿಕ ಹಾಗೂ ಲ್ಯಾಟಿನ್ ಅಮೆರಿಕದ ದೇಶಗಳನ್ನು ಆಕರ್ಷಿಸಿತು. ಮುಂದೆ ಇದು ಅಲಿಪ್ತ ಚಳವಳಿಯಾಗಿ ರೂಪುಗೊಂಡು ಜಾಗತಿಕ ವ್ಯವಹಾರಗಳಲ್ಲಿ ಬಹುಮುಖ್ಯವಾದ ಪಾತ್ರ ವಹಿಸಿತು. ಒಂದು ಕಾಲಘಟ್ಟದಲ್ಲಿ ಈ ಚಳವಳಿ ೧೨೭ ರಾಷ್ಟ್ರಗಳ ಸದಸ್ಯತ್ವವನ್ನು ಹೊಂದಿತ್ತು. ಮೂಲತಃ ಸಾಮ್ರಾಜ್ಯಶಾಹಿ ವಿರುದ್ಧವಾಗಿದ್ದ ಅಲಿಪ್ತ ಚಳವಳಿ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಮೂರನೇ ಪ್ರಭಾವಶಾಲಿ ಶಕ್ತಿಯಾಗಿ ರೂಪುಗೊಂಡಿತು. ಅಲಿಪ್ತರಾಷ್ಟ್ರಗಳನ್ನು ಕಡೆಗಣಿಸಿ ಅಂತರರಾಷ್ಟ್ರೀಯ ವೇದಿಕೆಯಲ್ಲಿ ಯಾವುದೇ ತೀರ್ಮಾನವನ್ನು ಮಾಡುವಂತಿರಲಿಲ್ಲ. ಅಂದಿನ ಕಾಲದಲ್ಲಿ ಪ್ರಮುಖ ಪ್ರಶ್ನೆಗಳಾಗಿದ್ದ ನಿರಾಯುಧೀಕರಣ, ಶಸ್ತ್ರಾಸ್ತ್ರಗಳ ನಿಯಂತ್ರಣ, ಪರಮಾಣು ಪ್ರಯೋಗಗಳ ನಿಷೇಧ, ವರ್ಣಭೇದದ ಅಂತ್ಯ, ನಿರ್ವಸಾಹತೀಕರಣ ಮುಂತಾದ ಅನೇಕ ಪ್ರಶ್ನೆಗಳನ್ನು ಕುರಿತು ಈ ಚಳವಳಿ ಪರಿಣಾಮಕಾರಿಯಾಗಿ ಕಾಣಿಕೆ ಸಲ್ಲಿಸಿತು. ಮುವ್ವತ್ತಕ್ಕೂ ಹೆಚ್ಚು ವರ್ಷಗಳ ಕಾಲ ಈ ಚಳವಳಿಯ ಮುಂದಳದಲ್ಲಿದ್ದ ಭಾರತ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಹೆಸರುವಾಸಿಯಾಗಿತ್ತು. ಸೋವಿಯತ್ ಒಕ್ಕೂಟದ ವಿಭಜನೆಯ ನಂತರ ಕಳೆದ ಶತಮಾನದ ಅಂತ್ಯದಲ್ಲಿ ಅಲಿಪ್ತ ಚಳವಳಿ ಕ್ಷೀಣಗೊಂಡು ಇಪ್ಪತ್ತೊಂದನೇ ಶತಮಾನದಲ್ಲಿ ಹೇಳ ಹೆಸರಿಲ್ಲದಂತಾಗಿದೆ. ಅಮೆರಿಕ ನೇತೃತ್ವದ ಏಕಶಕ್ತಿಕೇಂದ್ರದ ಉದಯದೊಂದಿಗೆ ಜಾಗತೀಕರಣ, ಉದಾರೀಕರಣ ಮುಂತಾದ ನೀತಿಗಳು ಹೊಮ್ಮಿದುವು.

ಅಲಿಪ್ತ ನೀತಿ ಕೈಬಿಟ್ಟ ಭಾರತ ಹೆಚ್ಚು ಹೆಚ್ಚಾಗಿ ಅಮೆರಿಕದತ್ತ ಸರಿಯಿತು. ಸ್ವತಂತ್ರ ವಿದೇಶೀ ನೀತಿ ಅದೃಶ್ಯವಾಗಿ ಪ್ರಬಲ ಶಕ್ತಿಯಾಗಿರುವ ಅಮೆರಿಕದೊಂದಿಗೆ ಹೊಂದಾಣಿಕೆಗೆ ಪ್ರಾರಂಭವಾಯಿತು. ಈ ಬದಲಾವಣೆ ಈಗ ಎಲ್ಲದರಲ್ಲೂ ಸಹಭಾಗಿತ್ವದ ರೂಪ ತಳೆದು ಅವಲಂಬನೆ ಅಧಿಕವಾಗುತ್ತಿದೆ. ವಿದೇಶೀ ನೀತಿಯಲ್ಲಿನ ಈ ಬದಲಾವಣೆಯು ದೇಶೀ ನೀತಿಯ ಮೇಲೂ ಪರಿಣಾಮ ಬೀರಿದೆ. ಸ್ವಾವಲಂಬನೆ ಹೋಗಿ ಪರಾವಲಂಬನೆ ಯುಗ ಪ್ರಾರಂಭವಾಗಿದೆ ಭಾರತದಲ್ಲಿ. ವಿದೇಶೀ ಬಂಡವಾಳ ಆಕರ್ಷಿಸಲು ಸರಕಾರ ಕೈಗೊಂಡಿರುವ ಕ್ರಮಗಳು ವಿಪರೀತದ ಮಟ್ಟಕ್ಕೆ ಹೋಗಿದ್ದು, ಈಗ ಭಾಜಪ ನೇತೃತ್ವದಲ್ಲಿ ಅದು ರಕ್ಷಣಾ ಕ್ಷೇತ್ರಕ್ಕೂ ಪಸರಿಸಿದೆ. ಅಮೆರಿಕಕ್ಕೆ ಇತ್ತೀಚೆಗೆ ಭೇಟಿ ನೀಡಿದ್ದ ಪ್ರಧಾನಿ ಮೋದಿ ಅಮೆರಿಕದ ಅಧ್ಯಕ್ಷ ಟ್ರಂಪ್‌ರೊಂದಿಗೆ ಮಾತುಕತೆ ನಡೆಸಿ ಮಾಡಿಕೊಂಡಿರುವ ಒಪ್ಪಂದಗಳೂ ಅದಕ್ಕೆ ಸಾಕ್ಷಿಯಾಗಿವೆ. ಭಾರತಕ್ಕೆ ಅಮೆರಿಕ ಶಸ್ತ್ರಾಸ್ತ್ರಗಳ ಸರಬರಾಜಿನಲ್ಲಿ ಈಗ ಮೇಲುಗೈ ಪಡೆದಿದೆ. ಅಮೆರಿಕದ ಜೊತೆ ಸಖ್ಯ ಬಲವಾಗುತ್ತಿದ್ದ ಹಾಗೆ ನೆರೆರಾಷ್ಟ್ರಗಳ ಜೊತೆ ಸಂಬಂಧಗಳು ಬಿಗಡಾಯಿಸುತ್ತಿವೆ. ಅಲಿಪ್ತ ಚಳವಳಿ ಹೇಳ ಹೆಸರಿಲ್ಲದಂತೆ ಮಾಯವಾಗಿರುವ ಹಿನ್ನೆಲೆಯಲ್ಲೇ ಪ್ರಾದೇಶಿಕ ಸಹಕಾರಕ್ಕೆ ರೂಪುಗೊಂಡ ದಕ್ಷಿಣ ಏಷಿಯಾದ ರಾಷ್ಟ್ರಗಳ ಸಂಘಟನೆ 'ಸಾರ್ಕ್' ಅವಸಾನದ ಸ್ಥಿತಿ ತಲುಪಿದೆ.

ಯಾವುದೇ ವಿದೇಶಾಂಗ ನೀತಿಯ ಮೊದಲ ಆದ್ಯತೆ ದೇಶದ ಭದ್ರತೆಗೆ ಮೀಸಲಾಗಿರಬೇಕು. ಭಾರತವೂ ಇದಕ್ಕೆ ಹೊರತಲ್ಲ. ನೆರೆರಾಷ್ಟ್ರಗಳೊಂದಿಗೆ ಸೌಹಾರ್ದಯುತ ಮೈತ್ರಿ ಸಂಬಂಧಗಳು ಭದ್ರತೆಗೆ ಅತ್ಯಗತ್ಯ. ಭಾಜಪ ನೇತೃತ್ವದ ಮೋದಿ ಸರಕಾರ ಅಸ್ತಿತ್ವಕ್ಕೆ ಬಂದಾಗ ನೆರೆರಾಷ್ಟ್ರಗಳ ಜೊತೆ ಸಂಬಂಧಗಳಿಗೆ ಹೆಚ್ಚು ಒತ್ತು ನೀಡುತ್ತದೆ ಎಂಬ ಸೂಚನೆಯಿತ್ತು. ಆದರೆ ಮೂರು ವರ್ಷಗಳಾದ ಮೇಲೆ ಇಂದು ಯುದ್ಧೋನ್ಮಾದವೇ ಪ್ರಾಮುಖ್ಯತೆ ಪಡೆದಂತಿದೆ. ಪಾಕಿಸ್ತಾನ ಮತ್ತು ಚೀಣಗಳೊಂದಿಗೆ ಸಂಬಂಧಗಳನ್ನು ಗಮನಿಸಿದರೆ, ಪಾಕಿಸ್ತಾನದ ವಿಚಾರದಲ್ಲಿ ಭಯೋತ್ಪಾದನೆ, ಗಡಿಯಲ್ಲಿ ಘರ್ಷಣೆ, ಕಾಶ್ಮೀರದ ವಿಷಯ ಪರಿಸ್ಥಿತಿಗೆ ಕಾರಣವಾದರೆ, ಚೀಣದೊಂದಿಗೆ ಗಡಿ ವಿವಾದ ಚುರುಕುಗೊಂಡಿದೆ. ಉಳಿದ ದೇಶಗಳೊಂದಿಗೆ ಸಂಬಂಧಗಳಲ್ಲಿ ಸಣ್ಣಪುಟ್ಟ ತಕರಾರುಗಳು ಹಾಗೆಯೇ ಮುಂದುವರಿದಿವೆ. ಹಿಂದೆಲ್ಲ ಪಾರ್ಲಿಮೆಂಟಿನಲ್ಲಿ ಅಧಿವೇಶನದ ಅಂತ್ಯದಲ್ಲಿ ಒಂದೆರಡು ದಿನ ವಿದೇಶೀ ನೀತಿ ಕುರಿತು ಚರ್ಚೆ ನಡೆಯುತ್ತಿತ್ತು. ಈಗ ಅಧಿವೇಶನದ ಅವಧಿಯಲ್ಲಿ ಗೊಂದಲವೇ ಅಧಿಕವಾಗಿದೆ, ಕಲಾಪಗಳು ಅಡಚಣೆ ಇಲ್ಲದೆ ನಡೆಯುವುದೇ ಅಪರೂಪವಾಗುತ್ತಿದೆ. ಹಾಗಿರುವಾಗ ಈಚಿನ ವರ್ಷಗಳಲ್ಲಿ ವಿದೇಶೀ ನೀತಿ ಕುರಿತು ಚರ್ಚೆಯೂ ಕೂಡ ಅಪರೂಪ. ಎಪ್ಪತ್ತು ವರ್ಷಗಳಲ್ಲಿ ಅಂತರರಾಷ್ಟ್ರೀಯ ರಂಗದಲ್ಲಿ ಏಕಕೇಂದ್ರೀಯ ವ್ಯವಸ್ಥೆ ನೆಲೆಯೂರುತ್ತಿರುವಂತೆಯೇ, ಎರಡನೇ ಮಹಾಯುದ್ಧದ ನಂತರ ಅಸ್ತಿತ್ವಕ್ಕೆ ಬಂದ ವಿಶ್ವಸಂಸ್ಥೆ ಸುಧಾರಣೆಯಿಲ್ಲದೆ ಸ್ಥಗಿತಗೊಂಡಿರುವಂತೆಯೇ ಭಾರತದ ವಿದೇಶೀ ನೀತಿ ಕೂಡ ಸಾಮ್ರಾಜ್ಯಶಾಹಿ ವಿರೋಧಿ ಅಲಿಪ್ತನೀತಿಯಿಂದ ಅಮೆರಿಕನ್ ಸಾಮ್ರಾಜ್ಯಶಾಹಿ ಅಪ್ಪುಗೆಯ ಕಡೆಗೆ ಸರಿಯುತ್ತಿರುವುದೇ ಬೆಳವಣಿಗೆಯ ಸಾರವಾಗಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಪ್ರಜಾಪ್ರಭುತ್ವ, ಚುನಾವಣೆಗಳು ಮತ್ತು ಬಹುಸಂಖ್ಯಾತವಾದ

ಪ್ರಜಾಪ್ರಭುತ್ವ ವ್ಯವಸ್ಥೆಯ ಬಗ್ಗೆ ವಿಚಾರಿಸಿದಾಗ ಸಾಮಾನ್ಯವಾಗಿ ನಮಗೆ ಮೊದಲು ಗಮನಕ್ಕೆ ಬರುವ ಚಿತ್ರವೆಂದರೆ ಅಲ್ಲಿ ನಡೆಯುವ ಚುನಾವಣೆಗಳು. ಒಂದು ತರಹದಲ್ಲಿ ಪ್ರಜಾಪ್ರಭುತ್ವವೆಂದರೆ ಚುನಾವಣೆ ಹಾಗೂ ಚುನಾವಣೆಯೆಂದರೆ ಪ್ರಜಾಪ್ರಭುತ್ವ ಎಂಬ ಕಲ್ಪನೆ ಬಹುತೇಕ ಜನರಲ್ಲಿ ಮೂಡಿದೆ. ಪ್ರಜೆಗಳು ಚುನಾವಣೆಯಲ್ಲಿ ಸ್ಪರ್ಧಿಸಿ ಪ್ರಜೆಗಳಿಂದ ಮತದಾನದ ಮೂಲಕ ಮನ್ನಣೆ ಪಡೆದು ಅವರ ಏಳ್ಗೆಗಾಗಿ ಕೆಲಸ ಮಾಡಲು ರಚನೆಯಾಗುವ ಸರ್ಕಾರದ ವ್ಯವಸ್ಥೆಯನ್ನು ಸೈದ್ಧಾಂತಿಕವಾಗಿ ಪ್ರಜಾಪ್ರಭುತ್ವವೆಂದು ಪರಿಗಣಿಸಲಾಗಿದೆ. ಈ ರೀತಿ ರಚನೆಯಾಗುವ ಸರ್ಕಾರಗಳು, ಜಗತ್ತಿನ ವಿವಿಧ ರಾಷ್ಟ್ರಗಳ ಇತಿಹಾಸ ಮತ್ತು ವಾಸ್ತವವನ್ನು ನೋಡಿದರೆ, ಎಷ್ಟರ ಮಟ್ಟಿಗೆ ಜನರ ಸಮಗ್ರ ಕಲ್ಯಾಣ ಮಾಡಿವೆ ಎಂಬ ಪ್ರಶ್ನೆ ಸಹಜವಾಗಿ ಉದ್ಭವವಾಗುತ್ತದೆ. ಇನ್ನೂ ಹೆಚ್ಚಿನದಾಗಿ, ಇಂತಹ ಪ್ರಶ್ನೆಗಳು ಬಡ ಮತ್ತು ಅಭಿವೃದ್ಧಿಹೊಂದುತ್ತಿರುವ ರಾಷ್ಟ್ರಗಳ ಇತಿಹಾಸ ಮತ್ತು ವಾಸ್ತವವನ್ನು ವಿಚಾರಿಸಿದಾಗ ನಮ್ಮಲ್ಲಿ ಮೂಡುತ್ತವೆ. ಕೇವಲ ಚುನಾವಣಾ ಇತಿಹಾಸ ಮತ್ತು ಅದರ ವಾಸ್ತವದ ಸಫಲತೆಯನ್ನು ಪರಿಗಣನೆಗೆ ತೆಗೆದುಕೊಂಡು ಯಾವುದೇ ಪ್ರಜಾಪ್ರಭುತ್ವಿಕ ರಾಷ್ಟ್ರವನ್ನು ಒಳ್ಳೆಯ ಪ್ರಜಾಪ್ರಭುತ್ವಿಕ ರಾಷ್ಟ್ರವೆಂದು ಕರೆದರೆ ಅಂತಹ ರಾಷ್ಟ್ರಗಳು ಎಂದಿಗೂ ಸಂಪೂರ್ಣವಾಗಿ ಪ್ರಜಾಪ್ರಭುತ್ವಿಕವಾಗುವ ಪ್ರಯತ್ನವನ್ನು ಮಾಡುವದಿಲ್ಲ. ತಮ್ಮ ವ್ಯವಸ್ಥೆಯ ಚುನಾವಣಾ ಸಫಲತೆಯ ಹೆಗ್ಗಳಿಕೆಯಿಂದ ಪ್ರಜಾಪ್ರಭುತ್ವದ ಉಳಿದ ಅಂಶಗಳಿಗೆ ಸಮಾನ ಪ್ರಾಮುಖ್ಯತೆ ಕೊಡುವ ಸಾಧ್ಯತೆ ಕಡಿಮೆ. ಜಾಗತಿಕ ಮಟ್ಟದಲ್ಲಿ ಈಗಾಗಲೆ ಇಂತಹ ಹಲವಾರು ಉದಾಹರಣೆಗಳನ್ನು ನೋಡಲಾಗಿದೆ. ಇಲ್ಲಿರುವ ಸ್ವಾಭಾವಿಕ ಅಪಾಯವೇನೆಂದರೆ, ಕೆಲವು ಬಾರಿ ಚುನಾವಣಾ ಪ್ರಜಾಪ್ರಭುತ್ವವು ಸರ್ವಾಧಿಕಾರಿ ಪ್ರವೃತ್ತಿಯನ್ನು ಹೊಂದಿರುವ ಧುರೀಣರನ್ನು ಕೂಡ ಆಯ್ಕೆ ಮಾಡಬಹುದು. ಇಂತಹ ಉದಾಹರಣೆಗಳನ್ನು ಪ್ರಜಾಪ್ರಭುತ್ವದ ದೇಶ ಮತ್ತು ಖಂಡಗಳೆಂದು ಹೆಗ್ಗಳಿಕೆಯಿಂದ ಕರೆದುಕೊಂಡಿರುವ ಅಮೇರಿಕಾ ಮತ್ತು ಯುರೋಪಿನಲ್ಲಿ ನೋಡಲಾಗಿದೆ. ಇವುಗಳಲ್ಲಿ ಹಲವಾರು ಧುರೀಣರು ಪ್ರಜಾಪ್ರಭುತ್ವವಿರದ ದೇಶಗಳು ಕೇವಲ ಚುನಾವಣೆಯೇ ಪ್ರಜಾಪ್ರಭುತ್ವದ ಮುಖ್ಯ ಅಳತೆಗೋಲು ಎಂದು ತಿಳಿದು ಚುನಾವಣಾ ಪ್ರಜಾಪ್ರಭುತ್ವಕ್ಕೆ ಮುಂದಾದರೆ ಬಹಳಷ್ಟು ಅನಾಹುತಗಳನ್ನು ಎದುರಿಸಬೇಕಾಗುತ್ತದೆ. ಪಶ್ಚಿಮ ಏಷಿಯಾದ ಕೆಲವು ರಾಷ್ಟ್ರಗಳಲ್ಲಿ ಇತ್ತೀಚೆಗೆ ಜನರು ತಮ್ಮ ರಾಜಕೀಯ ವ್ಯವಸ್ಥೆಯಲ್ಲಿರುವ ದಬ್ಬಾಳಿಕೆಯನ್ನು ಪ್ರತಿಭಟಿಸಿ ಪ್ರಜಾಪ್ರಭುತ್ವದ ಆಶಯವನ್ನು ಹೊತ್ತುಕೊಂಡು ಚಳುವಳಿ ಮಾಡಿದರು. ಈ ಚಳುವಳಿಯ ನಂತರ ಕೆಲವೊಂದು ಬದಲಾವಣೆಗಳನ್ನು ಕಂಡರೂ ನೈಜ ಪ್ರಜಾಪ್ರಭುತ್ವದ ಆಶಯಗಳು ಎಷ್ಟರ ಮಟ್ಟಿಗೆ ಸಾಕಾರಗೊಳ್ಳುತ್ತವೆ ಎಂಬುದರ ಬಗ್ಗೆ ಯಾವುದೇ ಖಾತ್ರಿ ಇಲ್ಲ. ಈ ಭಾಗದ ಅನೇಕ ದೇಶಗಳಲ್ಲಿ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರಿದ್ದಾರೆ, ಇವುಗಳಲ್ಲಿಯೂ ಬಹಳಷ್ಟು ಆರ್ಥಿಕ ಅಸಮಾನತೆ ಇದೆ. ಇವುಗಳನ್ನೆಲ್ಲಾ ಪರಿಗಣನೆಗೆ ತೆಗೆದುಕೊಂಡು ಪ್ರಜಾಪ್ರಭುತ್ವದ ಪ್ರಯೋಗ ಮಾಡಿದರೆ ಅಲ್ಪಸಂಖ್ಯಾತರಿಗೆ, ಆರ್ಥಿಕ ಹಿಂದುಳಿದವರಿಗೆ ಮತ್ತು ಎಲ್ಲರಿಗೂ ಒಳಿತಾಗುವ ಪ್ರಜಾಪ್ರಭುತ್ವ ಅಲ್ಲಿ ಬರಬಹುದು. ಕೇವಲ ಚುನಾವಣೆಗಳನ್ನಷ್ಟೆ ಪ್ರಾಮುಖ್ಯ ಮಾಡಿಕೊಂಡು ಮುಂದುವರಿದರೆ ಅಪಾಯಗಳಿವೆ. ಈಗಾಗಲೆ ಈ ದೇಶಗಳಲ್ಲಿ ಮೂಲಭೂತವಾದಿಗಳು ತಮ್ಮ ರಾಜಕೀಯ ಅಡಿಪಾಯವನ್ನು ಭದ್ರವಾಗಿ ಹಾಕಿದ್ದಾರೆ. ಚುನಾವಣೆಗಳಲ್ಲಿ ಭಾಗವಹಿಸಿ ಇಂತಹ ಶಕ್ತಿಗಳು ಸಫಲವಾದರೆ ಮಹಿಳೆಯರಿಗೆ ಮತ್ತು ಅಲ್ಪಸಂಖ್ಯಾತರಿಗೆ ದೊರಕುವ ಸ್ವಾತಂತ್ರ್ಯ ಮತ್ತು ಹಕ್ಕುಗಳು ಇಲ್ಲದಂತಾಗಿ ಬಹುಸಂಖ್ಯಾತವಾದದ ರೂಪದಲ್ಲಿ ಪ್ರಜಾಪ್ರಭುತ್ವವು ಪರಿವರ್ತನೆಯಾಗಬಹುದು.



**ಡಾ॥ ಪ್ರಕಾಶ ದೇಸಾಯಿ**

ಚುನಾವಣೆಗಳ ಮುಖಾಂತರ ಆಯ್ಕೆಗೊಂಡವರಾಗಿದ್ದರೂ ಅಧಿಕಾರದಲ್ಲಿದ್ದಾಗ ಸರ್ವಾಧಿಕಾರಿ ಪ್ರವೃತ್ತಿಯನ್ನು ತೋರಿದ್ದಾರೆ. ಇತ್ತೀಚೆಗೆ, ಇಡೀ ಜಗತ್ತಿಗೆ ಪ್ರಜಾಪ್ರಭುತ್ವದ ಬಗ್ಗೆ ಪ್ರವಚನ ಮಾಡುವ ಅಮೇರಿಕಾದ ಚುನಾವಣಾ ಪ್ರಜಾಪ್ರಭುತ್ವವು ಮತ್ತೊಮ್ಮೆ ಈ ಪ್ರಯೋಗವನ್ನು ತೋರಿಸಿದೆ. ಡೊನಾಲ್ಡ್ ಟ್ರಂಪ್‌ನಂತಹ ಒಬ್ಬ ಉದ್ಯಮಿ ತನ್ನ ಸಂಪತ್ತಿನ ಬಲದಿಂದ ಮತ್ತು ಅಮೇರಿಕದ ಜನತೆಯ ಸಾಮಾಜಿಕ ಮತ್ತು ಆರ್ಥಿಕ ಅಭದ್ರತೆಗಳ ಸಹಾಯದಿಂದ ಚುನಾವಣೆಯಲ್ಲಿ ಗೆಲುವು ಸಾಧಿಸಿ ಅಧಿಕಾರಕ್ಕೆ ಬರುವದಾದರೆ ಚುನಾವಣೆಗಳ ಬಗ್ಗೆ ನಮಗೆ ಸಂದೇಹ ಮೂಡಲು ಪ್ರಾರಂಭವಾಗುತ್ತದೆ. ಪ್ರಜಾಪ್ರಭುತ್ವವೆಂದರೆ ಕೇವಲ ಚುನಾವಣೆಗಳಲ್ಲದೆ, ತಾತ್ವಿಕವಾಗಿ ಅದಕ್ಕೆ ಇನ್ನೂ ಹೆಚ್ಚಿನ ಅರ್ಥವಿದೆಯೆಂದು ತಿಳಿದುಕೊಳ್ಳುವ ಪ್ರಯತ್ನ ಮಾಡುವದು ಬಹಳ ಕಡಿಮೆ.

ಪ್ರಜಾಪ್ರಭುತ್ವವಿರದ ದೇಶಗಳು ಕೇವಲ ಚುನಾವಣೆಯೇ ಪ್ರಜಾಪ್ರಭುತ್ವದ ಮುಖ್ಯ ಅಳತೆಗೋಲು ಎಂದು ತಿಳಿದು ಚುನಾವಣಾ ಪ್ರಜಾಪ್ರಭುತ್ವಕ್ಕೆ ಮುಂದಾದರೆ ಬಹಳಷ್ಟು ಅನಾಹುತಗಳನ್ನು ಎದುರಿಸಬೇಕಾಗುತ್ತದೆ. ಪಶ್ಚಿಮ ಏಷಿಯಾದ ಕೆಲವು ರಾಷ್ಟ್ರಗಳಲ್ಲಿ ಇತ್ತೀಚೆಗೆ ಜನರು ತಮ್ಮ ರಾಜಕೀಯ ವ್ಯವಸ್ಥೆಯಲ್ಲಿರುವ ದಬ್ಬಾಳಿಕೆಯನ್ನು ಪ್ರತಿಭಟಿಸಿ ಪ್ರಜಾಪ್ರಭುತ್ವದ ಆಶಯವನ್ನು ಹೊತ್ತುಕೊಂಡು ಚಳುವಳಿ ಮಾಡಿದರು. ಈ ಚಳುವಳಿಯ ನಂತರ ಕೆಲವೊಂದು ಬದಲಾವಣೆಗಳನ್ನು ಕಂಡರೂ ನೈಜ ಪ್ರಜಾಪ್ರಭುತ್ವದ ಆಶಯಗಳು ಎಷ್ಟರ ಮಟ್ಟಿಗೆ ಸಾಕಾರಗೊಳ್ಳುತ್ತವೆ ಎಂಬುದರ ಬಗ್ಗೆ ಯಾವುದೇ ಖಾತ್ರಿ ಇಲ್ಲ. ಈ ಭಾಗದ ಅನೇಕ ದೇಶಗಳಲ್ಲಿ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರಿದ್ದಾರೆ, ಇವುಗಳಲ್ಲಿಯೂ ಬಹಳಷ್ಟು ಆರ್ಥಿಕ ಅಸಮಾನತೆ ಇದೆ. ಇವುಗಳನ್ನೆಲ್ಲಾ ಪರಿಗಣನೆಗೆ ತೆಗೆದುಕೊಂಡು ಪ್ರಜಾಪ್ರಭುತ್ವದ ಪ್ರಯೋಗ ಮಾಡಿದರೆ ಅಲ್ಪಸಂಖ್ಯಾತರಿಗೆ, ಆರ್ಥಿಕ ಹಿಂದುಳಿದವರಿಗೆ ಮತ್ತು ಎಲ್ಲರಿಗೂ ಒಳಿತಾಗುವ ಪ್ರಜಾಪ್ರಭುತ್ವ ಅಲ್ಲಿ ಬರಬಹುದು. ಕೇವಲ ಚುನಾವಣೆಗಳನ್ನಷ್ಟೆ ಪ್ರಾಮುಖ್ಯ ಮಾಡಿಕೊಂಡು ಮುಂದುವರಿದರೆ ಅಪಾಯಗಳಿವೆ. ಈಗಾಗಲೆ ಈ ದೇಶಗಳಲ್ಲಿ ಮೂಲಭೂತವಾದಿಗಳು ತಮ್ಮ ರಾಜಕೀಯ ಅಡಿಪಾಯವನ್ನು ಭದ್ರವಾಗಿ ಹಾಕಿದ್ದಾರೆ. ಚುನಾವಣೆಗಳಲ್ಲಿ ಭಾಗವಹಿಸಿ ಇಂತಹ ಶಕ್ತಿಗಳು ಸಫಲವಾದರೆ ಮಹಿಳೆಯರಿಗೆ ಮತ್ತು ಅಲ್ಪಸಂಖ್ಯಾತರಿಗೆ ದೊರಕುವ ಸ್ವಾತಂತ್ರ್ಯ ಮತ್ತು ಹಕ್ಕುಗಳು ಇಲ್ಲದಂತಾಗಿ ಬಹುಸಂಖ್ಯಾತವಾದದ ರೂಪದಲ್ಲಿ ಪ್ರಜಾಪ್ರಭುತ್ವವು ಪರಿವರ್ತನೆಯಾಗಬಹುದು. ಹೊಸ ಉದಾರವಾದವನ್ನು ಪ್ರಚಾರಿಸುತ್ತಿರುವ ಮತ್ತು ಆಚರಿಸುತ್ತಿರುವ ಪಾಶ್ಚಾತ್ಯ ರಾಷ್ಟ್ರಗಳು ತಮ್ಮ ಕಲ್ಪನೆಯಲ್ಲಿರುವ ಪ್ರಜಾಪ್ರಭುತ್ವವನ್ನು ವಿವಿಧ ರಾಷ್ಟ್ರಗಳ ಮೇಲೆ ಹೇರುತ್ತಿವೆ. ಈ ಪ್ರಕ್ರಿಯೆಯ ಮುಂದಾಳತ್ವವನ್ನು ಅಮೇರಿಕಾ ವಹಿಸಿಕೊಂಡು ತನಗೆ ತಿಳಿದ ಹಾಗೆ ತನ್ನ ಪ್ರಭುತ್ವದ ಕಲ್ಪನೆಯನ್ನು ಏಷಿಯಾ ಹಾಗೂ ಆಫ್ರಿಕಾ ಖಂಡದ ದೇಶಗಳ ಮೇಲೆ ಹೇರುತ್ತಿರುವದನ್ನು ಈಗಾಗಲೆ ನೋಡುತ್ತಿದ್ದೇವೆ. ಈ ಪ್ರಜಾಪ್ರಭುತ್ವದ ಕಲ್ಪನೆಯಲ್ಲಿ ಚುನಾವಣಾ ಅಂಶವೆ ಪ್ರಾಮುಖ್ಯವಾಗಿದೆ ಹೊರತು ಬೇರೆ ಯಾವುದೇ ಸಮಗ್ರ ಅಂಶಗಳಿಲ್ಲ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಆ ದೇಶಗಳ ಆಂತರಿಕ ವಿಷಯದಲ್ಲಿ ಕೈಹಾಕಿ ಅವುಗಳಲ್ಲಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಹತೋಟಿಗೆ ತೆಗೆದುಕೊಂಡು ಲಾಭ ಪಡೆಯುವುದೇ ಪಾಶ್ಚಾತ್ಯ ರಾಷ್ಟ್ರಗಳ ಮುಖ್ಯ ಉದ್ದೇಶವಾಗಿದೆ. ಅವುಗಳಿಗೆ ಬೇಕಾದದ್ದು ಸಮಗ್ರ ಪ್ರಜಾಪ್ರಭುತ್ವವಲ್ಲ. ಪಾಶ್ಚಾತ್ಯ ರಾಷ್ಟ್ರಗಳ ಇಂತಹ ಒಂದು ಕಾರ್ಯಕ್ರಮವನ್ನು ಪಶ್ಚಿಮ ಏಷಿಯಾದ ಜನರು ವಿರೋಧಿಸುವುದಲ್ಲದೆ ತಮ್ಮ ದೇಶದಲ್ಲಿರುವ ಮೂಲಭೂತವಾದವನ್ನು ತಡೆದರೆ ನೈಜ ಪ್ರಜಾಪ್ರಭುತ್ವದ ಆಶಯಗಳು ಈಡೇರಬಹುದು.

ಪ್ರಜಾಪ್ರಭುತ್ವದ ಆದರ್ಶಕ್ಕಾಗಿ ಪ್ರಜಾಪ್ರಭುತ್ವವಿರದ ಸಮಾಜ ಮತ್ತು ದೇಶಗಳ ಜನರು ಒಂದು ರೀತಿಯ ಸಮಸ್ಯೆಯಲ್ಲಿದ್ದರೆ, ಈಗಾಗಲೆ ಪ್ರಜಾಪ್ರಭುತ್ವವೆಂದು ಗುರುತಿಸಿರುವ ಏಷಿಯಾ ದೇಶಗಳ ಜನರು ಮತ್ತೊಂದು ತರಹದ ಸಮಸ್ಯೆಯಲ್ಲಿದ್ದಾರೆ. ಇಂಥವುಗಳಲ್ಲಿ ರಾಜಕೀಯ ಅಥವಾ ಚುನಾವಣಾ ಪ್ರಜಾಪ್ರಭುತ್ವವಿದ್ದರೂ ಇಲ್ಲಿನ ಬಹಳಷ್ಟು ಜನರು ಪ್ರಜಾಪ್ರಭುತ್ವದ ಸಮಗ್ರ ಪರಿಕಲ್ಪನೆಯ ಅನುಭವದಿಂದ ದೂರವಾಗಿದ್ದಾರೆ. ಭಾರತದಲ್ಲಿರುವ ಪ್ರಜಾಪ್ರಭುತ್ವದ ಬಗ್ಗೆ ಗಂಭೀರವಾಗಿ ಪರಿಗಣಿಸಿದಾಗ, ಇಲ್ಲಿ ಪ್ರಜಾಪ್ರಭುತ್ವಕ್ಕಾಗಿ ಚುನಾವಣೆಗಳಿವೆಯೋ ಅಥವಾ ಚುನಾವಣೆಗಳಿಗಾಗಿ ಪ್ರಜಾಪ್ರಭುತ್ವವಿದೆಯೋ ಎಂಬ ಸಂದೇಹ ನಮ್ಮಲ್ಲಿ ಮೂಡುತ್ತದೆ. ದೇಶ ಸ್ವತಂತ್ರಗೊಂಡನಂತರ ಇಲ್ಲಿಯವರೆಗೆ ನಡೆದ ಚುನಾವಣೆಗಳ ಬಗ್ಗೆ ಅವಲೋಕಿಸಿದಾಗ ನಮ್ಮ ಚುನಾವಣಾ ಪ್ರಜಾಪ್ರಭುತ್ವದ ಬಗ್ಗೆ ಅನೇಕ ವಿಷಯಗಳು ಗೊತ್ತಾಗುತ್ತವೆ. ದೇಶ ಸ್ವತಂತ್ರಗೊಂಡನಂತರದ ಮೊದಲಿನ ಎರಡು ದಶಕಗಳ ಸುಮಾರು ಚುನಾವಣೆಗಳ ಮತ್ತು ಅವುಗಳ ಆಧಾರದ ಮೇಲೆ ರಚಿತವಾದ ಸರ್ಕಾರಗಳ ಬಗ್ಗೆ ಅಷ್ಟೊಂದು ನ್ಯೂನತೆಗಳು ಕಂಡುಬರುವುದಿಲ್ಲ. ಇಂದಿರಾ ಗಾಂಧಿಯವರು ಸರ್ಕಾರದ ನೇತೃತ್ವ ವಹಿಸಿಕೊಂಡ ಸಮಯದ ಮೊದಲ ಭಾಗದಲ್ಲಿ ನಾವು ನಮ್ಮ ಪ್ರಜಾಪ್ರಭುತ್ವದಲ್ಲಿ ಅನೇಕ ಗೊಂದಲಗಳನ್ನು ಕಂಡೆವು. ಇಂದಿರಾ ಗಾಂಧಿಯವರು ತಮ್ಮ ಸರ್ವಾಧಿಕಾರದ ಪ್ರವೃತ್ತಿಯನ್ನು ತೋರಿಸಿದರು. ಇದರಿಂದಾಗಿ ದೇಶದಲ್ಲಿ ತುರ್ತು ಪರಿಸ್ಥಿತಿ ಜಾರಿಗೆ ಬಂದಿತು. ಈ ಸಮಯದಲ್ಲಿ ಅನೇಕ ರಾಜಕೀಯ ಶಕ್ತಿಗಳು ಮತ್ತು ಧುರೀಣರನ್ನು ಸದೆಬಡೆಯಲಾಯಿತು. ತುರ್ತು ಪರಿಸ್ಥಿತಿಯ ನಂತರ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ಸೇತರ ಪಕ್ಷಗಳು ವಿಜಯ ಸಾಧಿಸಿದಾಗ ನಮ್ಮಲ್ಲಿರುವ ಅನೇಕ ರಾಜಕೀಯ ತಜ್ಞರು ಈ ವಿಜಯವನ್ನು ಪ್ರಜಾಪ್ರಭುತ್ವದ ವಿಜಯವೆಂದು ಗುಣಗಾನ ಮಾಡಿದರು. ಆ ಸಮಯದಿಂದ ಇಲ್ಲಿಯವರೆಗೆ ನಡೆದ ಚುನಾವಣಾ ಪ್ರಕ್ರಿಯೆಯ ಸಫಲತೆಯನ್ನು ಪ್ರಜಾಪ್ರಭುತ್ವದ ಸಫಲತೆಯೆಂದು ವಿಶ್ಲೇಷಿಸುತ್ತಾ ಬಂದಿದ್ದೇವೆ. ನಾವು ನಮ್ಮ ಚುನಾವಣಾ ಪ್ರಜಾಪ್ರಭುತ್ವ ಅಥವಾ ರಾಜಕೀಯ ಪ್ರಜಾಪ್ರಭುತ್ವದ ಸಫಲತೆಯನ್ನು ಅತಿದೊಡ್ಡ ಸಫಲತೆಯೆಂದು ತಿಳಿದುಕೊಂಡು ತೃಪ್ತರಾಗಿದ್ದೇವೆ. ಈ ತೃಪ್ತಿಯ ಬಗ್ಗೆ ನಮ್ಮನ್ನು ನಾವೇ ಕೇಳಲೇಬೇಕಾದ ಪ್ರಶ್ನೆಗಳು ಏನೆಂದರೆ : ೧) ಈ ರಾಜಕೀಯ ಅಥವಾ ಚುನಾವಣಾ ಪ್ರಜಾಪ್ರಭುತ್ವದ ವ್ಯವಸ್ಥೆಯು ನಮ್ಮಲ್ಲಿ ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವವನ್ನು ತಂದಿದೆಯಾ ? ೨) ರಾಜಕೀಯ ಪಕ್ಷಗಳು ಈ ಚುನಾವಣಾ ಪ್ರಜಾಪ್ರಭುತ್ವವನ್ನು ಬಳಸಿಕೊಂಡು ಎಷ್ಟರ ಮಟ್ಟಿಗೆ ದೇಶದ ಬಹುಜನರ ಕಲ್ಯಾಣಕ್ಕೆ ಶ್ರಮಿಸಿವೆ ? ೩) ಈ ಚುನಾವಣಾ ಪ್ರಭುತ್ವವು ಎಷ್ಟರ ಮಟ್ಟಿಗೆ ಸಾಂವಿಧಾನಿಕವಾಗಿ ನಡೆದುಕೊಂಡು ಅಲ್ಪಸಂಖ್ಯಾತರ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ರಕ್ಷಿಸಿ ನೈಜ ಪ್ರಜಾಪ್ರಭುತ್ವದ ತಿರುಳಿನ ಸಂವಿಧಾನದ ತತ್ವಗಳಿಗೆ ಗೌರವ ಕೊಟ್ಟಿದೆ ?

ನಮ್ಮಲ್ಲಿರುವ ಹಲವು ರಾಜಕೀಯ ಪಕ್ಷಗಳು ಚುನಾವಣೆಗಳಿಂದ ನ್ಯಾಯತೆಯನ್ನು ಪಡೆದು ಸರ್ಕಾರಗಳನ್ನು ರಚಿಸಿ ನಮ್ಮೆಲ್ಲರ ಕಲ್ಯಾಣ ಮಾಡದೆ ನಮ್ಮಲ್ಲಿರುವ ಬಹಳಷ್ಟು ಜನರನ್ನು ಇನ್ನಷ್ಟು ಬಡವರನ್ನಾಗಿ, ನಿರ್ಗತಿಕರನ್ನಾಗಿ ಮಾಡಿವೆ. ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವಕ್ಕೆ ಪ್ರಾಮುಖ್ಯತೆ ಕೊಡದೆ ರಾಜಕೀಯ ಪ್ರಜಾಪ್ರಭುತ್ವದ ಹೆಸರಿನಲ್ಲಿ ಚುನಾವಣೆಗಳನ್ನು ಮಾಧ್ಯಮ ಮಾಡಿಕೊಂಡು ಪ್ರಜಾಪ್ರಭುತ್ವವನ್ನು ಬಹುಸಂಖ್ಯಾತವಾದದ ಕಡೆ ಎಳೆದುಕೊಂಡು ಹೊರಟಿವೆ. ಬಹುಸಂಖ್ಯಾತವಾದ ಆಧಾರದಿಂದ ದೇಶದಲ್ಲಿ ನಡೆದ ಹಲವಾರು ದಂಗೆಗಳು ಮತ್ತು ಅವುಗಳಿಗೆ ಸಂಬಂಧಿಸಿದ ಹಿಂಸೆಯನ್ನು ಪರೀಕ್ಷಿಸಿದಾಗ ಅಲ್ಪಸಂಖ್ಯಾತರ ಮೇಲೆ ನಡೆಯುವ ಹಿಂಸೆಗೆ ಕೇವಲ ಬಹಿರಂಗವಾಗಿ ಬಹುಸಂಖ್ಯಾತವಾದವನ್ನು ಪ್ರಚಾರ ಮಾಡುವ ರಾಜಕೀಯ ಶಕ್ತಿಗಳನ್ನಷ್ಟೆ ಆರೋಪ ಮಾಡಲಿಕ್ಕಾಗುವದಿಲ್ಲ. ಅಲ್ಪಸಂಖ್ಯಾತರ ಮೇಲೆ ನಡೆಯುವ ಹಿಂಸಾತ್ಮಕ ಘಟನೆಗಳು ಹಲವು ಬಾರಿ ಉದಾರವಾದಿ ಮತ್ತು ಧರ್ಮನಿರಪೇಕ್ಷವಾದಿ ಎಂದು ಕರೆದುಕೊಂಡಿರುವ ರಾಜಕೀಯ ಶಕ್ತಿಗಳಿಂದ ಕೂಡ ನಡೆದಿವೆ. ಇದಕ್ಕೆ ಉದಾಹರಣೆಯಾಗಿ ೧೯೮೪ರಲ್ಲಿ ಸಿಖ್ ಸಮುದಾಯದ ಮೇಲೆ ನಡೆದ ದಾಳಿ ಮತ್ತು ಸುಮಾರು ಸಮಯದಿಂದ ಮಹಾರಾಷ್ಟ್ರದಲ್ಲಿ ಭಾಷಾ ಅಲ್ಪಸಂಖ್ಯಾತರ ಮೇಲೆ ನಡೆಯುತ್ತಿರುವ ದಂಗೆಗಳನ್ನು ಕೊಡಬಹುದು. ಮಹಾರಾಷ್ಟ್ರದಲ್ಲಿ ಭಾಷಾ



ಅಲ್ಪಸಂಖ್ಯಾತರ ಮೇಲೆ ನಡೆದ ಹಿಂಸೆಗಳು ಶಿವಸೇನಾ ಪಕ್ಷವು ಅಧಿಕಾರದಲ್ಲಿದ್ದಾಗಷ್ಟೆ ಆಗಿಲ್ಲ. ಕಾಂಗ್ರೆಸ್ ಪಕ್ಷವು ಅಧಿಕಾರದಲ್ಲಿದ್ದಾಗ ಕೂಡ ಇಂತಹ ಹಿಂಸೆಗಳು ನಡೆದಿವೆ. ಶಿವಸೇನಾ ಪಕ್ಷವು ಬಹುಸಂಖ್ಯಾತರನ್ನು ಆಕರ್ಷಿಸಲು ಬಹಿರಂಗವಾಗಿ ಅಲ್ಪಸಂಖ್ಯಾತರನ್ನು ವಿರೋಧಿಸಿ ಅವರ ಮೇಲೆ ಆಕ್ರಮಣ ಮಾಡಿದರೆ, ಕಾಂಗ್ರೆಸ್ ಪಕ್ಷವು ಅಧಿಕಾರದಲ್ಲಿದ್ದಾಗ ಬಹುಸಂಖ್ಯಾತರಿಂದ ಯಾವುದೇ ತರಹದ ಕೆಟ್ಟ ಹೆಸರಿಗೆ ಒಳಗಾಗದಂತೆ ನೋಡಿಕೊಳ್ಳಲು ಅಲ್ಪಸಂಖ್ಯಾತರ ಮೇಲೆ ಆಗುವ ದಬ್ಬಾಳಿಕೆ ಮತ್ತು ಹಿಂಸೆಯನ್ನು ತಡೆಯಲು ಮಾಡಬೇಕಾದ ಪ್ರಯತ್ನ ಮಾಡಲಿಲ್ಲ. ಇಲ್ಲಿ ಎರಡೂ ಪಕ್ಷಗಳಿಗೆ ಬೇಕಾಗಿರುವದು ರಾಜಕೀಯ ಅಧಿಕಾರ. ಈ ಅಧಿಕಾರಕ್ಕಾಗಿ ಚುನಾವಣೆಯಲ್ಲಿ ಆರಿಸಿಬರಲು ಬೇಕಾಗಿರುವದು ಬಹುಸಂಖ್ಯಾತರ ಬೆಂಬಲ. ಹೀಗೆ ಬಹುಸಂಖ್ಯಾತವಾದವು ಚುನಾವಣಾ ಪ್ರಜಾಪ್ರಭುತ್ವದಲ್ಲಿ ತನ್ನ ನಕಾರಾತ್ಮಕ ಪಾತ್ರವನ್ನು ವಹಿಸಿ ಅಲ್ಪಸಂಖ್ಯಾತರ ಮೇಲೆ ದಬ್ಬಾಳಿಕೆ ಮತ್ತು ಹಿಂಸೆಯನ್ನು ಆಗಾಗ್ಗೆ ಪ್ರದರ್ಶನ ಮಾಡುತ್ತದೆ.

ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಭಾರತೀಯ ಜನತಾ ಪಕ್ಷವು ೯೦ರ ದಶಕದ ಪ್ರಾರಂಭದಿಂದ ಭಾವನಾತ್ಮಕ ಮತ್ತು ಸೂಕ್ಷ್ಮ ವಿಷಯಗಳನ್ನು ಬಿತ್ತರಿಸಿ ಜನಸಾಮಾನ್ಯರನ್ನು ತನ್ನಕಡೆ ಆಕರ್ಷಿಸಿ ದೇಶದಲ್ಲಿ ಬಹುಸಂಖ್ಯಾತವಾದ ಇನ್ನೂ ಹೆಚ್ಚಾಗಿ ಬಲಶಾಲಿಯಾಗಲು ಕಾರಣವಾಯಿತು. ೧೯೯೦ರಿಂದ ದೇಶದಲ್ಲಿ ಹೊಸ ಆರ್ಥಿಕ ನೀತಿ ಜಾರಿಗೆ ಬಂದಿದ್ದರ ಫಲವಾಗಿ ದೇಶದ ಆರ್ಥಿಕ ಕಾರ್ಯಕ್ರಮಗಳು ಅಪರೋಕ್ಷವಾಗಿ ಮಾರುಕಟ್ಟೆಯ ಹತೋಟಿಯಲ್ಲಿ ಸಿಕ್ಕಿಕೊಂಡವು. ಮಾರುಕಟ್ಟೆಯ ಹತೋಟಿಯು ಬಲಶಾಲಿಯಾಗುತ್ತಾ ಹೋದಂತೆ ಉದ್ಯಮಿಗಳು, ರಾಜಕೀಯ ವ್ಯಕ್ತಿಗಳು ಮತ್ತು ಅಧಿಕಾರಿ ವರ್ಗದ ಮಧ್ಯೆ ಸ್ವಾರ್ಥ ಅನ್ಯೋನ್ಯತೆಯ ಫಲವಾಗಿ ದೇಶದಲ್ಲಿ ಇವರ ಒಳಿತಿಗಾಗಿ ಅನುಕೂಲವಾಗುವ ಹೊಸ ಬಂಡವಾಳಶಾಹಿ ಉದ್ಭವವಾಯಿತು. ೯೦ರ ದಶಕದ ಪ್ರಾರಂಭದಿಂದ, ಒಂದು ಕಡೆಯಿಂದ ಕೋಮುವಾದದ ಬಹುಸಂಖ್ಯಾತವಾದ ಶಕ್ತಿಶಾಲಿಯಾಗುತ್ತಾ ಹೋದರೆ, ಇನ್ನೊಂದು ಕಡೆಯಿಂದ ಬಂಡವಾಳಶಾಹಿಯು ಬಲಿಷ್ಠವಾಗುತ್ತಾ ಹೋಗಿರುವ ಇತಿಹಾಸ ಮತ್ತು ವಾಸ್ತವವನ್ನು ದೇಶದಲ್ಲಿ ನೋಡಿದ್ದೇವೆ ಹಾಗೂ ನೋಡುತ್ತಿದ್ದೇವೆ. ಮೊದಲು, ೧೯೯೮ರಿಂದ ೨೦೦೪ರ ಅವಧಿಯಲ್ಲಿರುವ ಭಾರತೀಯ ಜನತಾ ಪಕ್ಷ ನೇತೃತ್ವದ ಕೇಂದ್ರ ಸರ್ಕಾರ ಸಾಂಸ್ಕೃತಿಕ ಬಹುಸಂಖ್ಯಾತವಾದ ಮತ್ತು ಬಂಡವಾಳಶಾಹಿಗೆ ಅನುಕೂಲವಾಗುವ ನೀತಿಗಳಿಗೆ ಸಮನಾಗಿ ಪ್ರಾಮುಖ್ಯತೆ ಕೊಟ್ಟಿತು. ಭಾರತೀಯ ಜನತಾಪಕ್ಷವು ೨೦೦೪ರ ಲೋಕಸಭಾ ಚುನಾವಣೆಯಲ್ಲಿ ಸಾಂಸ್ಕೃತಿಕ ರಾಷ್ಟ್ರೀಯವಾದ ಮತ್ತು ಮಾರುಕಟ್ಟೆ ಅರ್ಥದ ಆಧಾರಿತ ಅಭಿವೃದ್ಧಿಗೆ ಒಲವು ತೋರಿಸಿತ್ತು. ನಂತರ, ೨೦೧೪ರ ಚುನಾವಣೆಯಲ್ಲಿ ಇದೇ ಭಾಷೆಯನ್ನು ಬಳಸಿಕೊಂಡಿತು. ಆದರೆ ಈ ಚುನಾವಣೆಯಲ್ಲಿ ಇದರ ರಭಸ ಇನ್ನೂ ಹೆಚ್ಚಾಗಿತ್ತು. ಈ ಭಾಷೆಗೆ ಮತದಾರರು ಮರುಳಾಗಿಯೋ ಅಥವಾ ಮೋಸಹೋಗಿಯೋ ಈ ಪಕ್ಷವನ್ನು ಅಧಿಕಾರಕ್ಕೆ ತಂದರು. ಭಾರತೀಯ ಜನತಾಪಕ್ಷವು ಚುನಾವಣೆಯಲ್ಲಿ ಸಾಧಿಸಿರುವ ಸಫಲತೆಯನ್ನು ಚುನಾವಣೆ ಮತ್ತು ಪ್ರಜಾಪ್ರಭುತ್ವದ ಅಡಿಯಲ್ಲಿ ವಿಶ್ಲೇಷಿಸಿದಾಗ ಕಂಡುಬರುವದೇನೆಂದರೆ ಭಾರತದಲ್ಲಿ ಸದ್ಯದಲ್ಲಿ ಬಳಕೆ ಇರುವ ಚುನಾವಣಾ ಪದ್ಧತಿಯಿಂದ ರಾಜಕೀಯ ಪಕ್ಷಗಳು ಚುನಾವಣಾ ಸಮಯದಲ್ಲಿ ಧರ್ಮ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಭಾವನಾತ್ಮಕ ಭಾಷೆಯನ್ನು ಉಪಯೋಗಿಸಿ ಸರ್ಕಾರ ರಚಿಸಿದ ನಂತರ ದೇಶದ ಪ್ರತಿಯೊಬ್ಬರ ಮೇಲೆ ತಮ್ಮ ಬಹುಸಂಖ್ಯಾತವಾದವನ್ನು ಬಹಳ ಸರಳವಾಗಿ ಹೇರಬಹುದು ಎಂದು. ಈ ಬಹುಸಂಖ್ಯಾತವಾದದ ಪ್ರಕ್ರಿಯೆಯು ಸಂವಿಧಾನಾತ್ಮಕವಲ್ಲದಿದ್ದರೂ ಅದನ್ನು ವಿರೋಧಿಸುವ ಮತ್ತು ಅದರ ತಂತ್ರಗಳನ್ನು ಬಯಲಿಗೆಳೆಯುವ ಪ್ರಯತ್ನಕ್ಕೆ ಸಫಲತೆ ಸಿಗುತ್ತಿಲ್ಲ.

ಭಾರತವು ಅನೇಕತ್ವ ಅಥವಾ ಬಹುತ್ವ ಸಮಾಜ. ವಿವಿಧ ಧರ್ಮ, ಭಾಷೆ, ಜನಾಂಗ, ಉಡುಗೆ-ತೊಡುಗೆಗಳನ್ನು ಹೊಂದಿರುವದರಿಂದ ಭಾರತವು ಬಹುತ್ವ ಸಮಾಜಗಳಲ್ಲಿಯೇ ಒಂದು ವಿಶೇಷ ಬಹುತ್ವ ಸಮಾಜ ಹೊಂದಿರುವ ರಾಷ್ಟ್ರವಾಗಿದೆ. ಇಲ್ಲಿ ಹಿಂದುಗಳು ಬಹುಸಂಖ್ಯಾತರಾದರೆ, ಮುಸ್ಲಿಮರು, ಸಿಖ್ಖರು, ಕ್ರಿಶ್ಚಿಯನ್ನರು, ಬೌದ್ಧರು, ಜೈನರು, ಪಾರಸಿಗಳು ಅಲ್ಪಸಂಖ್ಯಾತರು. ಕೋಮುವಾದಿ ಶಕ್ತಿಗಳು ದೇಶದಲ್ಲಿ ಸದೃಢವಾದರೆ ಸಂಸ್ಕೃತಿ ಮತ್ತು ಧರ್ಮಗಳಿಗೆ ಸಂಬಂಧಿಸಿದ ತಮ್ಮ ಬಹುಸಂಖ್ಯಾತವಾದವನ್ನು ಕೇವಲ ಅಲ್ಪಸಂಖ್ಯಾತರ ಮೇಲೆ ಹೇರುವದಲ್ಲದೆ



ಹಿಂದು ಸಮಾಜದಲ್ಲಿರುವ ಅನೇಕ ವಿಭಿನ್ನ ಸಾಂಸ್ಕೃತಿಕ ಸಮುದಾಯಗಳ ಮೇಲೂ ಕೂಡ ಹೇರುತ್ತದೆ. ಹಿಂದೂ ಸಮಾಜದ ಆಂತರಿಕ ವಿಭಿನ್ನತೆಗಳನ್ನು ನೋಡಿದಾಗ ಇಲ್ಲಿ ನಮಗೆ ಅನೇಕ ತರಹದ ತತ್ವ, ಭಾಷೆ, ನಂಬುಗೆ, ಆಚರಣೆಗಳನ್ನು ಹೊಂದಿರುವ ವಿವಿಧ ಸಮುದಾಯಗಳು ಕಂಡುಬರುತ್ತವೆ. ಈ ವಿಭಿನ್ನತೆಯ ವಿಶೇಷತೆಗಳ ಬಗ್ಗೆ ಗಮನಿಸಿದಾಗ ಇವುಗಳೆಲ್ಲವು ಒಂದಲ್ಲಾ ಒಂದು ತರಹದಲ್ಲಿ ಹಿಂದು ಧರ್ಮದ ಜೊತೆ ಅಂಟಿಕೊಂಡಿರುವ ನಕಾರಾತ್ಮಕ ನಂಬುಗೆ ಮತ್ತು ಆಚರಣೆಗಳನ್ನು ವಿರೋಧಿಸಿ ಸಮಾನತೆ ದಾರಿಯನ್ನು ತೋರಿಸಿವೆ. ಇಂತಹ ಸಮತಾ ಸಂಸ್ಕೃತಿ ಸಮಾಜಗಳ ಮೇಲೆ ಕೋಮುವಾದಿ ಶಕ್ತಿಗಳು ತಮಗೆ ಅನುಕೂಲವಾಗುವ ಧರ್ಮದ ನಂಬುಗೆ ಮತ್ತು ಆಚರಣೆಗಳನ್ನು ಹೇರಿದರೆ ಇದೊಂದು ಪ್ರಜಾಪ್ರಭುತ್ವದ ಮೌಲ್ಯಗಳ ಆಧಾರದ ಮೇಲೆ ಬಂದಿರುವ ಸಾಂಸ್ಕೃತಿಕ ಪ್ರಯೋಗಗಳ ಕೊಲೆ ಮಾಡಿದ ಹಾಗೆ ಆಗುತ್ತದೆ. ೨೦೧೪ರ ಚುನಾವಣೆಯಲ್ಲಿ ದೊರಕಿದ ಸಫಲತೆಯು ಭಾರತೀಯ ಜನತಾ ಪಕ್ಷಕ್ಕೆ ಅದರ ಆದರ್ಶ ಮತ್ತು ನಂಬುಗೆಗಳನ್ನು ದೇಶದ ಎಲ್ಲ ನಾಗರಿಕರ ಮೇಲೆ ಹೇರಲು ಅನುಕೂಲವಾಗಿದೆ. ಈ ಪಕ್ಷವು ತನ್ನ ಬಹುಸಂಖ್ಯಾತವಾದದ ರೂಪಗಳನ್ನು ಅನೇಕ ಪ್ರಯೋಗಗಳ ಮುಖಾಂತರ ಕಳೆದ ಮೂರು ವರ್ಷಗಳಿಂದ ತೋರಿಸುತ್ತಾ ಬಂದಿದೆ. ಈ ಪ್ರಯೋಗಗಳಿಂದ ಸುಮಾರು ಅಲ್ಪಸಂಖ್ಯಾತರು, ಆದಿವಾಸಿಗಳು, ದಲಿತರು ತಮ್ಮ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದಾರೆ. ಉದಾಹರಣೆಗಾಗಿ ಕೆಲವು ಪ್ರಯೋಗಗಳನ್ನು ಹೇಳುವದಾದರೆ, ಅಲ್ಪಸಂಖ್ಯಾತರು ತಮ್ಮ ಆಹಾರದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿದ್ದಾರೆ, ಆದಿವಾಸಿಗಳ ಜೀವನದ ಪ್ರತಿಯೊಂದು ವಲಯದ ಮೇಲೂ ಬಹುಸಂಖ್ಯಾತವಾದದ ದೃಷ್ಟಿಕೋನ ಹೇರಿಕೆಯಾಗುತ್ತಿದೆ, ದಲಿತರು ತಮ್ಮ ಮೇಲೆ ಮೇಲ್ಜಾತಿ-ಮೇಲ್ವರ್ಗದವರಿಂದ ಆಗುತ್ತಿರುವ ಅನ್ಯಾಯವನ್ನು ಪ್ರತಿಭಟನೆ ಮಾಡದಂತಾಗಿದೆ.

ಸೀಮಿತ ಜನರ ಅನುಕೂಲಕ್ಕೆ ಬರುವ ಅಭಿವೃದ್ಧಿಯನ್ನು ಆರ್ಥಿಕ ಪ್ರಜಾಪ್ರಭುತ್ವವೆಂದು ಚಿತ್ರಿಸುವ ಕೆಲಸ ಉದಾರವಾದಿ ರಾಜಕೀಯ ಶಕ್ತಿಗಳು ಮತ್ತು ಧುರೀಣರು ಮಾಡುವ ಪ್ರಯತ್ನವನ್ನು ಅನೇಕ ದೇಶಗಳು ನೋಡಿದ್ದಾಗಿದೆ. ತಮ್ಮ ಮತೀಯ ಸಾಂಸ್ಕೃತಿಕ ರಾಷ್ಟ್ರೀಯವಾದದ ರಾಜಕೀಯ ಆದರ್ಶ ಮತ್ತು ಕಾರ್ಯಸೂಚಿಯನ್ನು ನೈಜ ರಾಷ್ಟ್ರೀಯವಾದವೆಂದು ಪ್ರಚಾರಿಸುವ ಶಕ್ತಿಗಳನ್ನು ಕೂಡ ನೋಡಲಾಗಿದೆ. ಆರ್ಥಿಕ ಉದಾರವಾದ ಮತ್ತು ಮತೀಯ ರಾಷ್ಟ್ರೀಯವಾದ ಯಾವುದೇ ಒಂದು ರಾಜಕೀಯ ಪಕ್ಷದ ಆದರ್ಶವಾಗಿ ರಾಜಕೀಯ ಚಟುವಟಿಕೆ ನಡೆದರೆ ಪ್ರಜಾಪ್ರಭುತ್ವದ ಕತೆಯೇ ಮುಗಿದು ಹೋಗುತ್ತದೆ. ಮತೀಯ ರಾಷ್ಟ್ರೀಯವಾದ ಮತ್ತು ಆರ್ಥಿಕ ಉದಾರವಾದದ ರಾಜಕೀಯದಲ್ಲಿ ನೈಜ ಪ್ರಜಾಪ್ರಭುತ್ವಕ್ಕೆ ಮಾನ್ಯತೆ ಸಿಗುವುದು ವಿರಳ. ಭಾರತದಲ್ಲಿ ಪ್ರಸ್ತುತ ನಡೆಯುತ್ತಿರುವದು ಇದೇ ಬಗೆಯ ರಾಜಕೀಯ ಚಟುವಟಿಕೆ. ದೇಶದಲ್ಲಿ ಉದಾರವಾದ ಮತ್ತು ಕೋಮುವಾದಿ ಶಕ್ತಿಗಳ ಚಟುವಟಿಕೆಯನ್ನು ಎಡಪಂಥೀಯ ಪಕ್ಷಗಳು ಮತ್ತು ನಾಗರಿಕ ಸಮಾಜದ ಪ್ರಗತಿಪರ ಸಂಘ-ಸಂಸ್ಥೆಗಳು ಸತತವಾಗಿ ವಿರೋಧಿಸಿದರೂ ಅವುಗಳಿಗೆ ತಕ್ಕ ಬೆಂಬಲ ಸಿಗುತ್ತಿಲ್ಲ. ತಕ್ಕಮಟ್ಟಿನ ಸಾಂಸ್ಥಿಕ ಕೊರತೆ, ಧುರೀಣತ್ವ ಇದಕ್ಕೆ ಒಂದು

ಕಾರಣವಿರಬಹುದು. ಹೇಗಿದ್ದರೂ ದೇಶದ ಇಂತಹ ಪರಿಸ್ಥಿತಿಯಲ್ಲಿ ಈ ಶಕ್ತಿಗಳು ತಮ್ಮ ಪ್ರಯತ್ನ ಮಾಡುತ್ತಿವೆ ಎಂಬುದನ್ನು ಸ್ಫೂರ್ತಿಯಾಗಿಟ್ಟುಕೊಂಡು ನಾವು ದೇಶದ ಪ್ರಜ್ಞಾವಂತರೆಲ್ಲಾ ಇವುಗಳ ಹೋರಾಟವನ್ನು ಬಲಪಡಿಸಬೇಕು.

ಬಹುಸಂಖ್ಯಾತ ಪ್ರಜಾಪ್ರಭುತ್ವದ ರಾಜಕೀಯ ವ್ಯವಸ್ಥೆಯನ್ನು ಸಮಗ್ರ ಪ್ರಜಾಪ್ರಭುತ್ವವನ್ನಾಗಿ ಮಾರ್ಪಾಡು ಮಾಡಬೇಕಾದರೆ ಸಮಯೋಚಿತವಾಗಿ ಅನೇಕ ಬದಲಾವಣೆಗಳನ್ನು ತರಬೇಕಾಗುತ್ತದೆ. ಈ ಬದಲಾವಣೆಗಳಲ್ಲಿ ವ್ಯವಸ್ಥೆಯಲ್ಲಿರುವ ಅಲ್ಪಸಂಖ್ಯಾತರಿಗೆ ಬಹುಮುಖ್ಯ ಪಾತ್ರವನ್ನು ಕೊಡಬೇಕಾಗುತ್ತದೆ. ಅವರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಜೀವನದಲ್ಲಿ ಸಲ್ಲದ ಯಾವುದೇ ಹೊಸ ವಿಚಾರ, ಜೀವನ ಶೈಲಿ, ಕಾನೂನುಗಳನ್ನು ಅವರ ಮೇಲೆ ಹೇರದ ಹಾಗೆ ನೋಡಿಕೊಳ್ಳುವಂತಹ ಸಾಂವಿಧಾನಾತ್ಮಕ ಅವಕಾಶ ಇಂದಿನ ಜಾಗತಿಕ ಸನ್ನಿವೇಶದಲ್ಲಿ ಅವಶ್ಯವಿರುವ ಬದಲಾವಣೆಯಾಗಿದೆ. ಇಂತಹ ಸಾಂವಿಧಾನಾತ್ಮಕ ಅವಕಾಶದ ರಚನೆ ಮತ್ತು ನಿರೂಪಣೆಯಲ್ಲಿ ಅಲ್ಪಸಂಖ್ಯಾತರು ಮಹತ್ತರ ಅಧಿಕಾರವನ್ನು ಹೊಂದಿರಬೇಕು. ಇಲ್ಲವಾದಲ್ಲಿ ಪ್ರಜಾಪ್ರಭುತ್ವವು ಸಮಗ್ರ ಪ್ರಜಾಪ್ರಭುತ್ವವಾಗದೆ ಬಹುಸಂಖ್ಯಾತರ ಪ್ರಜಾಪ್ರಭುತ್ವವೆಂದೆನಿಸಿಕೊಳ್ಳುತ್ತದೆ. ಜಾಗತಿಕ ಮಟ್ಟದಲ್ಲಿ ಧರ್ಮ, ಸಂಸ್ಕೃತಿ ಮತ್ತು ಅವುಗಳಿಗೆ ಸಂಬಂಧಿಸಿದ ಕಲಹಗಳ ಕುರಿತು ರಾಜಕೀಯ ಸೈದ್ಧಾಂತಿಕರು ನಾನಾ ತರಹದ ವಿಚಾರಗಳನ್ನು ಚರ್ಚಿಸಿ ಇವುಗಳಿಗೆ ಪರಿಹಾರವಾಗಿ ಬಹುವಿಧ ಸಾಂಸ್ಕೃತಿಕವಾದವೆಂಬ ಸಿದ್ಧಾಂತವನ್ನು ಪರಿಚಯಿಸಿದ್ದಾರೆ. ಈ ಸಿದ್ಧಾಂತದ ಮುಖ್ಯ ತಿರುಳೆಂದರೆ ಧಾರ್ಮಿಕ, ಭಾಷಿಕ ಮತ್ತು ಇನ್ನಿತರ ಯಾವುದೇ ಸಾಮಾಜಿಕ ಗುರುತುಗಳಿಗೆ ಗುರುತಿಸಿಕೊಂಡು ಬದುಕುವ ಅಲ್ಪಸಂಖ್ಯಾತರಿರುವ ರಾಷ್ಟ್ರಗಳು ತಮ್ಮ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಜೀವನವು ಸುವ್ಯವಸ್ಥಿತವಾಗಿ ನಡೆಯಬೇಕಾದರೆ, ಅವುಗಳಲ್ಲಿ ಬಹುಸಂಖ್ಯಾತ ಜನರ ಮತ್ತು ಅಲ್ಪಸಂಖ್ಯಾತರ ನಡುವೆ ಸಾಮರಸ್ಯ ಜೀವನವಿರಬೇಕೆಂಬುವದು. ಈ ಸಾಮರಸ್ಯತೆಗೆ ಕಾರಣವಾಗುವ ಎಲ್ಲ ಪರಿಸ್ಥಿತಿಗಳನ್ನು, ಇಂತಹ ರಾಷ್ಟ್ರಗಳು ತಮ್ಮ ಸಂವಿಧಾನ ಇಲ್ಲವೆ ಯಾವುದೇ ಕಾನೂನುಗಳ ತಳಹದಿಯ ಮೇಲೆ ಅಲ್ಪಸಂಖ್ಯಾತರಿಗೆ ಒದಗಿಸಬೇಕು ಎಂದು ಈ ಹೊಸ ಸಿದ್ಧಾಂತವನ್ನು ರೂಪಿಸಿರುವ ಸಿದ್ಧಾಂತಿಗಳು ಪ್ರತಿಪಾದಿಸುತ್ತಾರೆ.

ಚುನಾವಣೆಗಳು ಜನರ ಸಾಮಾಜಿಕ ಜೀವನದಲ್ಲಿ ಪ್ರಗತಿ ತರುವ ಮಾಧ್ಯಮಗಳಾಗ ಬೇಕು. ಯಾವ ರೀತಿ ಚುನಾವಣೆಗಳನ್ನು ಬಹುಮಟ್ಟಿಗೆ ಕಾನೂನಿನ ಅಡಿಯಲ್ಲಿ ಸಫಲವಾಗಿ ನಡೆಸಿಕೊಂಡು ಬಂದು ರಾಜಕೀಯ ಪ್ರಜಾಪ್ರಭುತ್ವಕ್ಕೆ ನಮ್ಮ ಸಾಂವಿಧಾನಿಕ ಸಂಸ್ಥೆಯಾದ ಚುನಾವಣಾ ಆಯೋಗವು ಪ್ರಯತ್ನ ಮಾಡುತ್ತದೆಯೋ ಅದೇ ರೀತಿ ಸಾಂವಿಧಾನಿಕವಾಗಿ ಇರುವ ಇತರ ಸಂಸ್ಥೆಗಳಾದ ನ್ಯಾಯಾಂಗ, ಸಂಸತ್ತು ಇತ್ಯಾದಿಗಳು ದೇಶದ ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವವನ್ನು ಗಟ್ಟಿಗೊಳ್ಳುವಂತೆ ಪ್ರಯತ್ನ ಮಾಡಬೇಕು. ಆದರೆ ಬಹಳಷ್ಟು ಪ್ರಜಾಪ್ರಭುತ್ವವಿರುವ ವ್ಯವಸ್ಥೆಯಲ್ಲಿ ಚುನಾವಣೆಗಳು ನಿಗದಿತ ಅವಧಿಗೆ ಅಧಿಕಾರಕ್ಕಾಗಿ ಸಮಾಜದ ಶ್ರೇಷ್ಠರು ಅಥವಾ ಗಣ್ಯರನ್ನು ಪ್ರಸರಣ ಮಾಡುವ ಮಾಧ್ಯಮಗಳಾಗಿವೆ. ಒಂದು ಬಾರಿ ಒಂದು ಪಕ್ಷದ ಗಣ್ಯರಾದರೆ, ಇನ್ನೊಂದು ಬಾರಿ ಇನ್ನೊಂದು ಪಕ್ಷದ ಗಣ್ಯರು. ಚುನಾವಣೆಯ ನಡುವಿನ ಅವಧಿಯಲ್ಲಿ ಪ್ರಜಾಪ್ರಭುತ್ವಕ್ಕೆ ಒಂದು ದೊಡ್ಡ ರಜೆ ಸಿಕ್ಕಂತಾಗುತ್ತದೆ. ಏಕೆಂದರೆ, ಅಧಿಕಾರದಲ್ಲಿರುವವರು ತಮ್ಮ ಹಿತಾಸಕ್ತಿ ಮತ್ತು ಕಾರ್ಯಸೂಚಿಯನ್ನು ಕಾಪಾಡಲು ಮತ್ತು ಜಾರಿಗೆ ತರಲು ಕಾರ್ಯನಿರತರಾದರೆ, ಪ್ರತಿಪಕ್ಷದವರು ಕೆಲವೊಮ್ಮೆ ವಿರೋಧಿಸುವುದಕ್ಕಾಗಿಯೇ ಸರ್ಕಾರವನ್ನು ವಿರೋಧಿಸುತ್ತಾರೆ. ಕೆಲವೊಂದು ಪಕ್ಷ ಮತ್ತು ಧುರೀಣರನ್ನು ಹೊರತುಪಡಿಸಿ ಪ್ರಜಾಪ್ರಭುತ್ವದ ಸಮಗ್ರ ಅರ್ಥದ ಉತ್ಕೃಷ್ಟತೆಯನ್ನು ಹೆಚ್ಚು ಮಾಡುವ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವವರು ಬಹಳ ಕಡಿಮೆ. ಇಲ್ಲಿ ಬರುವ ಮುಖ್ಯ ಸವಾಲೆಂದರೆ, ಪ್ರಜಾಪ್ರಭುತ್ವದ ಮೂಲ ತಿರುಳಿಗೆ ಯಾವುದೇ ಗೌರವ ಕೊಡದ ಧುರೀಣರು ಜನರನ್ನು ನಂಬಿಸಿ ಮತ್ತು ಮೋಸಗೊಳಿಸಿ ಚುನಾವಣೆಗಳೆಂಬ ಮಾರ್ಗಗಳಿಂದ ಅಧಿಕಾರಕ್ಕೆ ಬರಲು ಸಾಧ್ಯವಾದರೆ, ಪ್ರಜಾಪ್ರಭುತ್ವವೆ ಮೂಲ ಮಂತ್ರವೆಂದು ತಿಳಿದಿರುವ ಪ್ರಗತಿಪರ ಶಕ್ತಿಗಳು ಮತ್ತು ಅವುಗಳ ನಾಯಕರುಗಳಿಗೆ ಜನರಲ್ಲಿ ಪ್ರಜ್ಞಾ ಭಾವನೆಯನ್ನು ಮೂಡಿಸಿ ಚುನಾವಣೆಗಳ ಮುಖಾಂತರ ಅಧಿಕಾರಕ್ಕೆ ಏಕೆ ಬರಲಿಕ್ಕಾಗುತ್ತಿಲ್ಲ ಎಂಬುದು ಇತ್ತೀಚೆಗೆ ನಡೆದ ಮಣಿಪುರ ವಿಧಾನ ಸಭೆ ಚುನಾವಣೆಯಲ್ಲಿ ಸಾಮಾಜಿಕ ಕಳಕಳಿ ಹೊಂದಿರುವ ಹೋರಾಟಗಾರ್ತಿಯಾದ ಇರೋಮ್ ಶರ್ಮಿಳಾರವರು ಸ್ಪರ್ಧೆಯಲ್ಲಿ ಪರಾಭವಗೊಂಡರು. ಪ್ರಜಾಪ್ರಭುತ್ವ ಮತ್ತು ನಾಗರಿಕ ಪ್ರಜ್ಞೆಯಿರುವ ಎಲ್ಲರಿಗೂ ಕಾಡುವಂತಹ ಘಟನೆಯಿದು. ಇಂತಹ ಘಟನೆಗಳು ಮೊದಲೂ ಕೂಡ ನಡೆದಿವೆ ಮತ್ತು ಮುಂದೆಯೂ ಕೂಡ ನಡೆಯಬಹುದು. ಯಾವುದೇ ಸಮಾಜದಲ್ಲಿ ಪ್ರಜಾಪ್ರಭುತ್ವದ ಪ್ರಜ್ಞೆ ಇರದಿದ್ದರೆ ಇಂತಹ ಘಟನೆಗಳು ನಡೆಯುತ್ತವೆ.

ನಮ್ಮ ಸಮಾಜದಲ್ಲಿರುವ ಸಾಮಾಜಿಕ, ಆರ್ಥಿಕ ಗುಲಾಮಗಿರಿಯ ಪ್ರವೃತ್ತಿಯನ್ನು ಹೋಗಲಾಡಿಸಬೇಕಾದರೆ ನಮಗೆ ಮುಖ್ಯವಾಗಿ ಬೇಕಾಗಿರುವದು ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವ. ಪ್ರಜಾಪ್ರಭುತ್ವ ಪ್ರತಿಯೊಬ್ಬ ನಾಗರಿಕನಲ್ಲಿ ನಿರಂತರವಾಗಿ ಆತನಿಗೆ ತನ್ನ, ತನ್ನ ಸಮಾಜದ, ತನ್ನ ದೇಶದ ಮತ್ತು ಇಡೀ ಮನುಕುಲದ ಅಭ್ಯುದಯದ ಬಗ್ಗೆ ವಿವೇಕ ತರುವ ಪ್ರಜ್ಞೆಯಾಗಿರಬೇಕು. ನಮ್ಮ ಸಮಾಜದಲ್ಲಿ ಇತ್ತೀಚೆಗೆ ಕಂಡುಬರುತ್ತಿರುವ ಲಕ್ಷಣವೇನೆಂದರೆ, ಕೆಲವು ರಾಜಕೀಯ ಶಕ್ತಿಗಳಿಂದ ನಮಗೆ ನೈಜ ಸ್ವಗೌರವ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ರಂಗಗಳಲ್ಲಿ ಸಮಾನ ಸ್ಥಾನಮಾನ ಸಿಗುವದಿಲ್ಲವೆಂದು ಗೊತ್ತಿದ್ದರೂ ಅಂತಹ ಶಕ್ತಿಗಳ ಮಾಂತ್ರಿಕ ಭರವಸೆಗಳಿಗೆ ಕಿವಿಕೊಟ್ಟು ಅವರ ರಾಜಕೀಯ ಪ್ರಯೋಗಕ್ಕೆ ಬಲಿಯಾಗುವದು. ದೇಶದ ಬಹುಜನರನ್ನು ಹಿಂದುತ್ವವಾದಿಗಳು ಅವರಲ್ಲಿ ಧರ್ಮದ ಅಭಿಮಾನವನ್ನು ತುಂಬಿ ವೈಯಕ್ತಿಕ ಆದರ್ಶವಾದದ ಲಾಭಕ್ಕೆ ಅವರನ್ನು ರಾಜಕೀಯವಾಗಿ ಬಳಸಿಕೊಂಡು ತಮ್ಮದೇ ಆದ ದೃಷ್ಟಿಕೋನವನ್ನು ದೇಶದ ಎಲ್ಲರ ಮೇಲೆ ಹೇರುತ್ತಿದ್ದಾರೆ. ಈ ಹೇರಿಕೆಯಿಂದ ಮೇಲ್ಜಾತಿಯೇತರರು ಬಲಿಯಾಗುತ್ತಿದ್ದರೂ ಅವರಲ್ಲಿ ಬಹುಸಂಖ್ಯಾತವಾದದ ಹೆಸರಿನಲ್ಲಿ ನಡೆಯುತ್ತಿರುವ ರಾಜಕೀಯದಲ್ಲಿ ಸ್ವಾರ್ಥ ಹಿತಾಸಕ್ತಿ ಹೊಂದಿರುವ ಮೇಲ್ಜಾತಿಯ ಮತ್ತು ಮೇಲ್ವರ್ಗದ ಅಲ್ಪಸಂಖ್ಯಾತರಿದ್ದಾರೆ ಎಂದು ಗುರುತಿಸುವ ಮತ್ತು ಅದನ್ನು ವಿರೋಧಿಸುವ ಪ್ರಯತ್ನ ನಡೆಯುತ್ತಿಲ್ಲ. ಹಿಂದು ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಈ ಸಮಾಜದಲ್ಲಿರುವ ಮೇಲ್ಜಾತಿ ಪಟ್ಟಭದ್ರ ಅಲ್ಪಸಂಖ್ಯಾತ ಶಕ್ತಿಗಳು ಸಮಾಜದಲ್ಲಿರುವ ವಿವಿಧ ಸಮುದಾಯಗಳನ್ನು ಒಗ್ಗೂಡಿಸಿ ರಾಜಕೀಯವಾಗಿ ಲಾಭ ಪಡೆದು ಬಹುಸಂಖ್ಯಾತರ ಹೆಸರಿನಲ್ಲಿ ಧಾರ್ಮಿಕ ಅಲ್ಪಸಂಖ್ಯಾತರ ವಿರುದ್ಧ ವಿವಿಧ ರೀತಿಯ ಚಟುವಟಿಕೆಗಳನ್ನು ನಡೆಸಿ ಒಂದೇ ತಂತ್ರದಿಂದ ಧಾರ್ಮಿಕ ಅಲ್ಪಸಂಖ್ಯಾತರನ್ನು ಮತ್ತು ಹಿಂದೂ ಸಮಾಜದ ವಿವಿಧ ಮೇಲ್ಜಾತಿಯೇತರ ಸಮುದಾಯಗಳನ್ನು ತಮ್ಮ ಹತೋಟಿಯಲ್ಲಿಡುವ ಪ್ರಯತ್ನ ಮಾಡುತ್ತಿವೆ. ಇಂದು ಅಸಮಾನತೆ, ಶೋಷಣೆ, ಹಿಂಸೆ, ಪಕ್ಷಪಾತಗಳಿಗೆ ಸಂಬಂಧಿಸಿದ ನೈಜ ಘಟನೆಗಳನ್ನು ಮುಚ್ಚಿಟ್ಟು, ತಿರುಚಿ ಪೊಳ್ಳು ಅಭಿಮಾನ, ಸಂಸ್ಕೃತಿ, ಭಾವನಾತ್ಮಕ ವಿಷಯಗಳ ಸಹಾಯದಿಂದ ಜನರನ್ನು ಚುನಾವಣೆಗಳಲ್ಲಿ ಮತ್ತು ಚುನಾವಣೆಯ ನಂತರ ಭ್ರಮೆಯಲ್ಲಿಟ್ಟು ಜಗತ್ತಿನಾದ್ಯಂತ ಬಲಪಂಥೀಯ ರಾಜಕೀಯ ಶಕ್ತಿಗಳು ಸಮಾಜದ ಶಾಂತತೆ, ಸ್ಥಿರತೆ ಮತ್ತು ಪ್ರಗತಿಯ ವಾತಾವರಣವನ್ನು ಕೆಡಿಸುತ್ತಿವೆ. ಕೊನೆಯದಾಗಿ ಹೇಳುವುದೇನೆಂದರೆ, ಮೊದಲು ನಮ್ಮಲ್ಲಿ ನಮಗೆ ಗೊತ್ತಿರುವ ಮತ್ತು ಗೊತ್ತಿರದೆ ಹಾಗೆ ಇರುವ ಜಾತಿ ಪ್ರಜ್ಞೆ, ಧರ್ಮದ ನಕಾರಾತ್ಮಕ ಪ್ರಜ್ಞೆ, ಬೇರೆಯವರ ಬಗೆಗೆ ಇರುವ ಅಸಹನೆ, ದುರಾಗ್ರಹ ಮತ್ತು ಇನ್ನಿತರ ಮನುಕುಲ ವಿರೋಧಿ ನಂಬುಗೆ ಮತ್ತು ಆಚರಣೆಗಳಿಂದ ಸ್ವತಂತ್ರವಾಗಿ ನಿರಂತರ ಪ್ರಯತ್ನಿಸಿದರೆ ನಮ್ಮಲ್ಲಿ ಮತ್ತು ಬೇರೆಯವರಲ್ಲಿ ಪ್ರಜಾಪ್ರಭುತ್ವದ ಪ್ರಜ್ಞೆ ತರುವಲ್ಲಿ ವಿವಿಧ ಪ್ರಗತಿಪರ ಶಕ್ತಿಗಳು ಸಫಲವಾಗಬಹುದು. ಸ್ವಾತಂತ್ರ್ಯ ಪಡೆದ ೭೦ ವರ್ಷದ ಸಂದರ್ಭದಲ್ಲಿ ಇದು ಸಂಭವನೀಯವಾಗದೆ ಖಚಿತವಾಗಬೇಕು ಎಂದು ನಿರೀಕ್ಷೆ ಮಾಡುವದು ತಪ್ಪೇ ?

**ಡಾ॥ ಪ್ರಕಾಶ ದೇಸಾಯಿ**
ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಗೋವಾ ವಿಶ್ವವಿದ್ಯಾಲಯ, ಗೋವಾ

## ಮೌನ

ಬುದ್ಧಿವಂತರು ನಾವು
ಬೇಕಿದ್ದರೆ ನೋಡಿ
ಅಂಕಿ ಅಂಶಗಳ
ಶೇಕಡಾವಾರು
ಎನ್ನುವ ನಾವು
ತುಟಿಪಿಟಕ್ಕೆನ್ನುವುದಿಲ್ಲ
ಬೀಸುವಾಗ ಇಲ್ಲಿ
ಕತ್ತಿ ತಲವಾರು !

**ಕಾಸರಗೋಡು ಅಶೋಕ್ ಕುಮಾರ್**
ಮಂಗಳೂರು – ೫೭೫ ೦೦೮











# ಬಹುಮುಖ ಪ್ರತಿಭೆ



ಗಳತಗಾದ ಕಲಾಶಿಕ್ಷಕ ಶ್ರೀ ರಮೇಶ್ ತಾಸಿಲ್ದಾರ್ ಬಹುಮುಖ ಪ್ರತಿಭೆಯುಳ್ಳ ಚಿತ್ರಕಲಾವಿದ. ರಾಜ್ಯಾದ್ಯಂತ ಹಲವಾರು ಯಶಸ್ವಿ ಏಕವ್ಯಕ್ತಿ ಹಾಗೂ ಸಂಯೋಜಿತ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಮೂರು ಬಾರಿ ರಾಜ್ಯಮಟ್ಟದಲ್ಲಿ ರಂಗೋಲಿ ಕಲೆಯಲ್ಲಿ ಪ್ರಥಮ ಸ್ಥಾನ, ಚಿತ್ರಕಲೆಗಾಗಿ ಹಲವಾರು ಸಂಘಸಂಸ್ಥೆಗಳಿಂದ ಪ್ರಶಸ್ತಿ, ಗೌರವ ಪಡೆದಿದ್ದಾರೆ. ಕರ್ನಾಟಕ ಚಿತ್ರಕಲಾ ಪರಿಷತ್ತು, ಲಲಿತಕಲಾ ಅಕಾಡೆಮಿಯಲ್ಲಿ ತಮ್ಮ ವರ್ಣಚಿತ್ರಗಳ ಪ್ರದರ್ಶನ ಏರ್ಪಡಿಸಿದ್ದಾರೆ. ಇವರ ಕುರಿತಾದ "ಚಿತ್ರ ಕಲಾವಿದ ಶ್ರೀ ರಮೇಶ್ ತಾಸಿಲ್ದಾರ್ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಲಾಗಿದೆ. ಥರ್ಮೋಕೋಲ್, ಕಾರ್ಡ್‌ಶೀಟ್ ಕಲಾಕೃತಿಗಳಲ್ಲೂ ರಮೇಶ್ ತಮ್ಮ ಪ್ರತಿಭೆ ತೋರಿಸಿದ್ದಾರೆ. ಇವೆಲ್ಲದರ ಜೊತೆಗೆ ಒಳ್ಳೆಯ ಛಾಯಾಚಿತ್ರಕಾರರೆಂದೂ ಗುರುತಿಸಿಕೊಂಡಿದ್ದಾರೆ. ಚಿತ್ರಕಲೆಯಲ್ಲಿ ಎ.ಎಂ.ಜಿ.ಡಿ. ಪದವಿ ಪಡೆದಿರುವ ರಮೇಶ್ ಈಗ ಬಾಗಲಕೋಟ ಜಿಲ್ಲೆಯ ಶ್ರೀ ಎಂ.ಪಿ. ಬಿಳ್ಳೂರ ಸರ್ಕಾರಿ ಪ್ರೌಢಶಾಲೆ, ರಾಮಪೂರದಲ್ಲಿ ಕಲಾಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

– ಆರ್. ಎಸ್ . ಸಂಕಪಾಳ
ತಾ : ಚಿಕ್ಕೋಡಿ : ಜಿ: ಬೆಳಗಾವಿ–591226



# ವಿದುರಾಶ್ವತ್ಥ

## ಕರ್ನಾಟಕದ ಜಲಿಯನ್‌ವಾಲಾಬಾಗ್




"ಮೇಲುಗಡೆ ಉರಿಯುತ್ತಿರುವ ಬಿಸಿಲು, ಕೆಳಗಡೆ ಕಾದ ಮರಳು, ಒಂದು ಕಡೆ ಲಾಠಿ ಪ್ರಹಾರ ! ಮತ್ತೊಂದು ಕಡೆ ಪಟಾಕಿಗಳಂತೆ ಛಳಗೆ ಛಳಗೆಗೂ ಸಿಡಿಯುವ ಗುಂಡುಗಳು ! ಜನರ ಹಾಹಾಕಾರ ! ಹೆಂಗಸರು, ಮಕ್ಕಳ ಆರ್ತನಾದ ! ಹಕ್ಕಿಪಕ್ಷಿಗಳು ಗುಂಡೇಟಿನಿಂದ ಗರಗರನೆ ತಿರುಗಿ ಕೆಳಗೆ ಬೀಳುತ್ತಿದ್ದವು. ಆನೆಗಳು ಗುಂಡಿನೇಟು ಬಿದ್ದು ಅಯ್ಯೋ ಎಂದು ಒರಲುತ್ತಿದ್ದವು. ಎಲ್ಲೆಲ್ಲಿ ನೋಡಿದರೂ ರಕ್ತದ ಹನಿಗಳು ಬಿದ್ದಿದ್ದವು. ಆ ದಿನ ವಿದುರಾಶ್ವತ್ಥ ಭಯಂಕರವಾದ ಸ್ಮಶಾನವಾಯಿತು. ನಿರಪರಾಧಿಗಳನ್ನು, ನಿಶ್ಶಸ್ತ್ರರನ್ನು ಮಾರಣಹೋಮ ಮಾಡಿದ ಬೇರೊಂದು ಜಲಿಯನ್‌ವಾಲಾಬಾಗ್‌ನಂತಿತ್ತು."

ಇಲ್ಲಿ ನೀಡಲಾಗಿರುವ ಹೇಳಿಕೆಯು ವೀರಕೇಸರಿ ಸೀತಾರಾಮಶಾಸ್ತ್ರಿಯವರ ಮಗ ಶ್ರೀ ಎಂ. ರಾಮಮೂರ್ತಿಯವರು ರಚಿಸಿರುವ 'ವಿದುರಾಶ್ವತ್ಥದ ದುರಂತ ಪ್ರಕರಣ' ಪುಸ್ತಕದಲ್ಲಿ ವರ್ಣಿತವಾಗಿರುವ ಘಟನೆ; ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಒಂದು ಚಿತ್ರವನ್ನು ಅದು ನಮ್ಮ ಕಣ್ಣ ಮುಂದಿಡುತ್ತದೆ. ವಿದುರಾಶ್ವತ್ಥದಲ್ಲಿ ನಡೆದ ಈ ಧ್ವಜಸತ್ಯಾಗ್ರಹವು ಇತಿಹಾಸದ ಪುಟಗಳಲ್ಲಿ ಅವಿಸ್ಮರಣೀಯವಾಗಿದೆ. ೧೯೧೯ರ ಏಪ್ರಿಲ್ ತಿಂಗಳ ೧೩ರಂದು ಸಿಖ್ಖರ ಪ್ರಮುಖ ಹಬ್ಬ ವೈಶಾಖಿಯ ಸಂಭ್ರಮಾಚರಣೆಗೆಂದು ಅಮೃತಸರದ ಜಲಿಯನ್‌ವಾಲಾ ಬಾಗ್‌ನಲ್ಲಿ ನೆರೆದಿದ್ದ ಭಕ್ತಾದಿಗಳು ಮತ್ತು ಅಹಿಂಸಾತ್ಮಕ ಪ್ರತಿಭಟನೆಯಲ್ಲಿ ತೊಡಗಿದ್ದ ಜನರ ಮೇಲೆ ಬ್ರಿಟಿಷ್ ಅಧಿಕಾರಿ ಡಯರ್‌ನ ಆದೇಶದಂತೆ ಗುಂಡಿನ ಮಳೆಗರೆದು ಸುಮಾರು ೧೦೦೦ ಮಂದಿಯನ್ನು ಕೊಲ್ಲಲಾಯಿತು. ಈ ಐತಿಹಾಸಿಕ ಘಟನೆಯನ್ನು ನೆನಪಿಸುತ್ತದೆ, ಮೇಲೆ ಪ್ರಸ್ತಾಪಿಸಿರುವ ಘಟನೆ.

ಅವಿಭಜಿತ ಕೋಲಾರ ಜಿಲ್ಲೆಯ (ಈಗ ಚಿಕ್ಕಬಳ್ಳಾಪುರ ಜಿಲ್ಲೆಯ) ಗೌರಿಬಿದನೂರು ತಾಲ್ಲೂಕಿನ ವಿದುರಾಶ್ವತ್ಥವನ್ನು ಆಸ್ತಿಕರು ಪವಿತ್ರ ಕ್ಷೇತ್ರವೆಂದು ಪರಿಗಣಿಸುತ್ತಾರೆ. ವಿದುರನು ನೀರೆರೆದು ಬೆಳೆಸಿದನೆಂದು ಹೇಳಲಾಗುವ ಅಶ್ವತ್ಥ ವೃಕ್ಷದ ಜೊತೆಗೆ ಅಶ್ವತ್ಥನಾರಾಯಣ ಸ್ವಾಮಿಯ ದೇವಸ್ಥಾನವೂ ಇಲ್ಲಿದೆ. ವರ್ಷಪೂರ್ತಿ ಇಲ್ಲಿಗೆ ಆಸ್ತಿಕರು ಬಹು ಸಂಖ್ಯೆಯಲ್ಲಿ ಬಂದು ಹೋಗುತ್ತಾರೆ. ಹಾಗಾಗಿ ಇದು ಪುಣ್ಯಕ್ಷೇತ್ರವೆಂದು ಪ್ರತೀತಿ. ಏಪ್ರಿಲ್ ತಿಂಗಳಿನಲ್ಲಿ ಇಲ್ಲಿ ಒಂದು ಹದಿನೈದು ದಿನಗಳ ದೊಡ್ಡ ಜಾತ್ರೆ ನಡೆಯುತ್ತದೆ.

೧೯೩೮ರ ಏಪ್ರಿಲ್ ೧೪ರಿಂದ ೨೮ರವರೆಗೆ ಹದಿನೈದು ದಿನಗಳ ಕಾಲ ರಥೋತ್ಸವ ಹಾಗೂ ದನಗಳ ಜಾತ್ರೆ ನಡೆಯುತ್ತಿದ್ದ ಸಂದರ್ಭ. ಈ ಜಾತ್ರೆಗೆ ಅಪಾರ ಜನಸಮೂಹ ಹರಿದು ಬಂದಿತ್ತು. ಅಂಥ ಸಂದರ್ಭದಲ್ಲಿ ಧ್ವಜಸತ್ಯಾಗ್ರಹ  ಕಾರ್ಯಕ್ರಮ ನಡೆಸಿದರೆ ಕಾಂಗ್ರೆಸ್‌ನ ಧ್ಯೇಯೋದ್ದೇಶಗಳನ್ನು ಮತ್ತು ಸಂದೇಶಗಳನ್ನು ಜನರಿಗೆ ತಿಳಿಸಿ ಸ್ವಾತಂತ್ರ್ಯ ಚಳುವಳಿಗೆ ಮತ್ತಷ್ಟು ವ್ಯಾಪಕ ಬೆಂಬಲ ದೊರಕಿಸಿಕೊಳ್ಳುವುದು ಸಾಧ್ಯವಾಗುತ್ತದೆ ಎಂದು ಸ್ಥಳೀಯ ಕಾಂಗ್ರೆಸ್ ಅಭಿಪ್ರಾಯಪಟ್ಟಿತು. ಅಲ್ಲದೆ,

**ಡಾ॥ ಎನ್. ಗಾಯತ್ರಿ**





ಪಿನಾಕಿನಿ ನದಿದಡದ ಮೇಲಿರುವ ವಿದುರಾಶ್ವತ್ಥ ಗ್ರಾಮವು ಮೈಸೂರು ಸಂಸ್ಥಾನದ ಗಡಿಪ್ರದೇಶವಾಗಿದ್ದು ಬ್ರಿಟಿಷ್–ಭಾರತ ಪ್ರದೇಶವಾದ ಚೌಳೂರು ಮುಂತಾದ ಗ್ರಾಮಗಳು (ಈಗ ಆಂಧ್ರಪ್ರದೇಶದ ಹಿಂದೂಪುರ ತಾಲ್ಲೂಕು ಅನಂತಪುರ ಜಿಲ್ಲೆಗೆ ಸೇರಿದೆ) ಗ್ರಾಮದಿಂದ ಕೆಲವೇ ಕಿ.ಮೀ. ಅಂತರದಲ್ಲಿದೆ. ಇಲ್ಲಿ ನಡೆಯುವ ಧ್ವಜಸತ್ಯಾಗ್ರಹ ಸಂದೇಶವನ್ನು ಗಡಿಭಾಗದಲ್ಲಿರುವ ಎಲ್ಲ ಗ್ರಾಮಗಳಿಗೂ ತಲುಪಿಸಿ ಆ ಭಾಗದ ಜನತೆಯನ್ನೂ ಪ್ರಭಾವಿತಗೊಳಿಸಿ ಚಳುವಳಿಯನ್ನು ಮತ್ತಷ್ಟು ಗಟ್ಟಿಗೊಳಿಸಬಹುದೆಂದು ಕಾಂಗ್ರೆಸ್ ನಾಯಕರು ಭಾವಿಸಿದರು.

೧೯೩೮ರ ಏಪ್ರಿಲ್ ೧೮ರಂದು 'ದೇಶಭಕ್ತರ ದಿನಾಚರಣೆ'ಯನ್ನು ಆಚರಿಸಲು ತೀರ್ಮಾನಿಸಲಾಯಿತು. ಕಾಂಗ್ರೆಸ್ ಮುಖಂಡರೆಲ್ಲಾ ಕಾರ್ಯಕ್ರಮವನ್ನು ಆರಂಭಿಸುವುದರೊಳಗೆ ಗೌರಿಬಿದನೂರಿನ ಅಮಲ್ದಾರ್ ಮ್ಯಾಜಿಸ್ಟ್ರೇಟರು ೧೪೪ ಸೆಕ್ಷನ್ ಜಾರಿ ಮಾಡಿ ವಿದುರಾಶ್ವತ್ಥ ಗ್ರಾಮದ ಎರಡು ಮೈಲುಗಳ ಸುತ್ತಮುತ್ತ ಹದಿನೈದು ದಿನಗಳ ಕಾಲ ಸಭೆಗಳನ್ನು ನಡೆಸುವುದನ್ನು, ಭಾಷಣ ಮಾಡುವುದನ್ನು ಹಾಗೂ ಧ್ವಜಾರೋಹಣ ಮಾಡುವುದನ್ನು ನಿಷೇಧಿಸಿ ಆಜ್ಞೆ ಹೊರಡಿಸಿದರು. ಆ ದಿನ ಯಾರೂ ನಿಷೇಧಾಜ್ಞೆಯನ್ನು ಉಲ್ಲಂಘಿಸಲಿಲ್ಲ. ಆದರೂ ಧ್ವಜಸತ್ಯಾಗ್ರಹಕ್ಕೆ ಉತ್ಸುಕರಾಗಿ ಬಂದಿದ್ದ ಸ್ವಯಂಸೇವಕರು ಶಾಂತರಾಗಿ ನಡೆದುಕೊಳ್ಳುವಂತೆ ಮುಖಂಡರು ಅವರಿಂದ ಪ್ರತಿಜ್ಞೆ ಮಾಡಿಸಿದರು. ದಿನಾಂಕ ೧೮ರಿಂದ ೨೧ರವರೆಗೆ ವಾತಾವರಣವು ಶಾಂತವಾಗಿಯೇ ಇತ್ತು.

ದಿನಾಂಕ ೨೨ರಂದು ಎನ್. ಸಿ. ನಾಗಯ್ಯ ರೆಡ್ಡಿಯವರ ಮುಂದಾಳತ್ವದಲ್ಲಿ ಸತ್ಯಾಗ್ರಹಿಗಳು ಗೌರಿಬಿದನೂರಿನಿಂದ ವಿದುರಾಶ್ವತ್ಥಕ್ಕೆ ಆಗಮಿಸಿ ದೇವಾಲಯದ ಹಿಂದಿರುವ ತೋಪಿಗೆ ಹೋದರು. ಅಲ್ಲಿ ಸಿ.ಆರ್.ಪಿ.ಸಿ. ೧೪೪ನೇ ಪ್ರಕರಣವನ್ನು ಉಲ್ಲಂಘಿಸುವಂತೆ ಕರಪತ್ರಗಳನ್ನು ಹಂಚಿ ಧ್ವಜ ಹಿಡಿದು ಮೆರವಣಿಗೆ ಬಂದರು. ಅವರ ವಿರುದ್ಧ ಐ.ಪಿ.ಸಿ. ೧೮೮ನೇ ಪ್ರಕರಣದಡಿ ಆರೋಪ ಪಟ್ಟಿ ಸಲ್ಲಿಸಿ ದಸ್ತಗಿರಿ ಮಾಡಲಾಯಿತು. ಅವರೊಂದಿಗೆ ಹಲವಾರು ಕಾಂಗ್ರೆಸ್ ಮುಖಂಡರನ್ನು ಬಂಧಿಸಲಾಯಿತು.

೨೩ನೇ ದಿನಾಂಕದಂದು ಗೌರಿಬಿದನೂರಿನ ರಾಮಯ್ಯಶೆಟ್ಟಿಯವರ ನೇತೃತ್ವದಲ್ಲಿ ಒಂದು ಗುಂಪು ಹಾಗೂ ರಮಾಪುರದಿಂದ ಜ್ವಾಲನಯ್ಯನವರ ನಾಯಕತ್ವದಲ್ಲಿ ಒಂದು ಗುಂಪು – ಸಾವಿರಾರು ಜನರಿದ್ದ ಈ ಎರಡೂ ಗುಂಪುಗಳು ವಿದುರಾಶ್ವತ್ಥಕ್ಕೆ ಬಂದು ವೇದಿಕೆ ಪ್ರವೇಶಿಸಿ ಭಾಷಣ ಮಾಡಲು ಪ್ರಾರಂಭಿಸಿದರು. ಆಗ ಮ್ಯಾಜಿಸ್ಟ್ರೇಟ್‌ರವರು ಸಭೆ ಸೇರದಂತೆ ಆಜ್ಞಾಪಿಸಿದರು. ಸುಮಾರು ೩೦೦ ಜನರು ಆಜ್ಞೋಲ್ಲಂಘನೆಗೆ ಸಿದ್ಧರಾಗಿಯೇ ಬಂದಿದ್ದರು. ಜ್ವಾಲನಯ್ಯನವರು ಭಾಷಣ ಮಾಡಲು ಮುಂದಾದಾಗ ಅವರನ್ನು ಬಂಧಿಸಲಾಯಿತು. ನಂತರ ರಾಮಯ್ಯಶೆಟ್ಟಿಯವರು ಭಾಷಣ ಮಾಡಿದರು. ಅವರನ್ನೂ ದಸ್ತಗಿರಿ ಮಾಡಲಾಯಿತು. ಆದರೆ ಜನ ಚದುರದೆ ಅವರನ್ನು ಕೂರಿಸಿದ್ದ ವಾಹನದ ಮೇಲೆ, ಬಾನೆಟ್‌ನ ಮೇಲೆ ಹತ್ತಿ ಕುಳಿತರು. ಚದುರದಿದ್ದರೆ ದಸ್ತಗಿರಿ ಮಾಡುವುದಾಗಿ ಹೇಳಿದಾಗ ಜನ 'ನಮ್ಮನ್ನು ದಸ್ತಗಿರಿ ಮಾಡಿ, ನಮ್ಮನ್ನು ದಸ್ತಗಿರಿ ಮಾಡಿ' ಎಂದು ಕೂಗತೊಡಗಿದರು. ಪೊಲೀಸರು ಅವರನ್ನು ನಿಭಾಯಿಸಿ ಗೌರಿಬಿದನೂರು ಮಾರ್ಗವಾಗಿ ಚಿಕ್ಕಬಳ್ಳಾಪುರಕ್ಕೆ ಕರೆತಂದರು. ಈ ವಾರ್ತೆ ತಿಳಿದ ಜನ ದಾರಿಯುದ್ದಕ್ಕೂ ಗುಂಪು ಗುಂಪಾಗಿ ಸೇರಿ ಸರ್ಕಾರದ ವಿರುದ್ಧ ಘೋಷಣೆ ಕೂಗಲಾರಂಭಿಸಿದರು.

ಈ ಸುದ್ದಿ ಹಬ್ಬುತ್ತಿದ್ದಂತೆಯೇ ಅಸಂಖ್ಯಾತ ಕಾಂಗ್ರೆಸ್ ಕಾರ್ಯಕರ್ತರು ವಿದುರಾಶ್ವತ್ಥದ ಕಡೆಗೆ ಬರಲಾರಂಭಿಸಿದರು. ಆಂಧ್ರಪ್ರಾಂತೀಯ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದ ಕಲ್ಲೂರು ಸುಬ್ಬರಾವ್ ಅವರ ನೇತೃತ್ವದಲ್ಲಿ ಹಿಂದೂಪುರದಿಂದ ಧ್ವಜಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲು ಸಾಧ್ಯವಾಗದಂತೆ ಪೊಲೀಸರು ಅವರನ್ನು ತಡೆದರು. ಗೌರಿಬಿದನೂರು ಪೊಲೀಸರು ಅದೇ ದಿನ ಕೋಲಾರ ಜಿಲ್ಲಾ ಪೊಲೀಸ್ ಅಧೀಕ್ಷಕರಿಗೆ ತಂತಿ ಕಳುಹಿಸಿ ಕಾಂಗ್ರೆಸ್ ನಾಯಕರನ್ನು ಬಂಧಿಸಿದ್ದರಿಂದ ಪರಿಸ್ಥಿತಿ ಉದ್ರಿಕ್ತವಾಗಿದ್ದು ರಿಸರ್ವ್ ಪೊಲೀಸ್ ತಂಡವನ್ನು ಕಳುಹಿಸುವಂತೆ ಕೋರಿದರು. ಏಪ್ರಿಲ್ ೨೩ರಂದು ಗೌರಿಬಿದನೂರಿಗೆ ಬಂದ ಡಿ.ಎಸ್.ಪಿ. ಇನ್ನೂ ಹೆಚ್ಚು ರಿಸರ್ವ್ ಪೊಲೀಸರನ್ನು ಕಳುಹಿಸುವಂತೆ ಜಿಲ್ಲಾಧಿಕಾರಿ ಮತ್ತು ಪದನಿಮಿತ್ತ ಪ್ರಥಮ ದರ್ಜೆ ದಂಡಾಧಿಕಾರಿಯಾದ ಅಪ್ಪಾಜಿ ಗೌಡರನ್ನು ವಿನಂತಿಸಿಕೊಂಡರು. ೨೪ನೇ ತಾರೀಖು ಗೌರಿಬಿದನೂರಿನಲ್ಲಿ ಸಂತೆ ಇದ್ದುದರಿಂದ ಆ ದಿನ ಧ್ವಜಸತ್ಯಾಗ್ರಹಕ್ಕಾಗಿ ವಿರಾಮ ಘೋಷಿಸಲಾಗಿತ್ತು.

ಏಪ್ರಿಲ್ ೨೫ರಂದು ಗೌರಿಬಿದನೂರಿನಿಂದ ಹಾಗೂ ಸುತ್ತಮುತ್ತಲ ಹಲವಾರು ಗ್ರಾಮಗಳಿಂದ ಮೆರವಣಿಗೆಗಳು ಹಲವು ಗುಂಪುಗಳಲ್ಲಿ ಹೊರಟು ವಿದುರಾಶ್ವತ್ಥ ತಲುಪಿದವು. ಬೆಂಗಳೂರಿನಿಂದ ಸುಮಾರು ಎಂಬತ್ತು ಮಂದಿ ರಿಸರ್ವ್ ಪೊಲೀಸರು ಸಹ ವಿದುರಾಶ್ವತ್ಥಕ್ಕೆ ಬಂದಿಳಿದರು. ಗೌರಿಬಿದನೂರಿನಿಂದ ಟಿ. ರಾಮಾಚಾರ್‌ರವರ ನಾಯಕತ್ವದಲ್ಲಿ ಹೊರಟ ಮೆರವಣಿಗೆ ಬೆಳಗ್ಗೆ ೧೦.೩೦ ಗಂಟೆಗೆ ವಿದುರಾಶ್ವತ್ಥಕ್ಕೆ ಬಂದು ತಲುಪಿತು. ಆ ವೇಳೆಗೆ ನಾನಾ ಕಡೆಯಿಂದ ಬಂದಿದ್ದ ಸುಮಾರು ಹತ್ತು ಸಾವಿರ ಜನರು ಮೆರವಣಿಗೆಯಲ್ಲಿ ಸೇರಿಕೊಂಡರು. ಮುಖಂಡರುಗಳು ಅಶ್ವತ್ಥ ವೃಕ್ಷಕ್ಕೆ ಪ್ರದಕ್ಷಿಣೆ ಹಾಕಿ ವೇದಿಕೆಯ ಕಡೆ ಹೋಗಿ ಒಬ್ಬೊಬ್ಬರಾಗಿ ಧ್ವಜ ಹಾರಿಸುತ್ತಿದ್ದಂತೆ ಬಂಧನಕ್ಕೊಳಗಾದರು. ಇದರಿಂದ ಗುಂಪು ಉದ್ರಿಕ್ತವಾಗಲಾರಂಭಿಸಿತು. ಇದರ ಸೂಚನೆಯನ್ನರಿತ ಮ್ಯಾಜಿಸ್ಟ್ರೇಟರು ಮುಖಂಡರನ್ನು ಭಾಷಣ ಮಾಡದೆ ಅಲ್ಲಿಂದ ಹೋಗುವಂತೆ ಆದೇಶಿಸಿದರು. ಏಪ್ರಿಲ್ ತಿಂಗಳ ಬಿಸಿಲಿನ ಜಳ ತೀಕ್ಷ್ಣವಾಗಿದ್ದರಿಂದ ಚಳುವಳಿಗಾರರು ಸ್ವಲ್ಪ ಸಮಯ ನೆರಳಿನಲ್ಲಿ ವಿಶ್ರಮಿಸಿಕೊಂಡು ನಂತರ ಹೋಗುವುದಾಗಿ ತಿಳಿಸಿದರು. ಇದಕ್ಕೆ ಅವಕಾಶ ನೀಡದ ಮ್ಯಾಜಿಸ್ಟ್ರೇಟರು ಅವರನ್ನು ಚದುರುವಂತೆ ಹೇಳಿ

ಲಾಠಿಚಾರ್ಜ್ ಮಾಡಿದಾಗ ಉದ್ರಿಕ್ತರಾದ ಜನ ಕೈಗೆ ಸಿಕ್ಕಿದ್ದನ್ನು ಪೊಲೀಸರತ್ತ ಎಸೆಯಲು ಆರಂಭಿಸಿದರು. ಜಿಲ್ಲಾ ಪೊಲೀಸ್ ಅಧೀಕ್ಷಕರಾದ ಎ. ಎಸ್. ಖಲೀಲ್ ತನ್ನ ರಿವಾಲ್ವರ್‌ನಿಂದಲೇ ನೇರವಾಗಿ ಗುಂಪಿನತ್ತ ಗುಂಡು ಹಾರಿಸಿದಾಗ ಒಬ್ಬ ವ್ಯಕ್ತಿ ನೆಲಕ್ಕುರುಳಿ ಬಿದ್ದ. ನಂತರ ರೈಫಲ್ ಪಡೆಗೆ ಗುಂಡು ಹಾರಿಸಲು ಆಜ್ಞೆ ಮಾಡಲಾಯಿತು. ಮಧ್ಯಾಹ್ನ ಒಂದು ಗಂಟೆಯಲ್ಲಿ ಎರಡು ಬಾರಿ, ಸಾಯಂಕಾಲ ೫.೪೦ರಲ್ಲಿ ಒಂದು ಸಾರಿ ಹೀಗೆ ಮೂರು ಸಾರಿ ಒಟ್ಟಾರೆ ೯೬ ಸುತ್ತು ಗುಂಡುಗಳನ್ನು ಹಾರಿಸಲಾಯಿತು.

ಧ್ವಜಸತ್ಯಾಗ್ರಹಕ್ಕೆಂದು ನೆರೆದಿದ್ದ ಜನರ ಮೇಲೆ ಪೊಲೀಸರು ಗುಂಡು ಹಾರಿಸಿ ಸುಮಾರು ೩೨ ಜನರ ದುರಂತ ಸಾವಿಗೆ ಕಾರಣರಾಗಿದ್ದರು. ಸರ್ಕಾರಿ ದಾಖಲೆಗಳ ಪ್ರಕಾರ ಮೃತರಾದ ವ್ಯಕ್ತಿಗಳ ಸಂಖ್ಯೆ ಹತ್ತು ಹಾಗೂ ಗಾಯಗೊಂಡವರ ಸಂಖ್ಯೆ ಹದಿನೈದು. ಪೊಲೀಸರೂ ಸೇರಿದಂತೆ ಗಾಯಗೊಂಡವರ ಸಂಖ್ಯೆ ಒಟ್ಟು ಇಪ್ಪತ್ತೊಂದು. 'ದ ಹಿಂದು' ಮತ್ತು ಹಿಂದೂಪುರದ 'ಕುಮದ್ವತಿ', 'ನವಜೀವನ' ಪತ್ರಿಕೆಗಳು ಹದಿನಾಲ್ಕರಿಂದ ಮೂವತ್ತೆರಡು ಜನ ಮೃತಪಟ್ಟಿರುವುದಾಗಿ ವರದಿ ಮಾಡಿದವು. ಈ ಸುದ್ದಿ ರೇಡಿಯೋ ಮೂಲಕ ರಾಷ್ಟ್ರಾದ್ಯಂತ ಹಬ್ಬಿತಲ್ಲದೆ ಕೂಡಲೇ ಲಂಡನ್ನಿನಿಂದ ಬಿಬಿಸಿಯಲ್ಲಿಯೂ ಪ್ರಸಾರವಾಯಿತು. ವಿದುರಾಶ್ವತ್ಥವು ಅಂತರರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆಯಿತು. ಮೈಸೂರು ಸರ್ಕಾರದ ಈ ಅಮಾನುಷ ದಮನಕಾರಿ ಕ್ರಮದಿಂದ ರಾಷ್ಟ್ರಮಟ್ಟದ ಎಲ್ಲಾ ಕಾಂಗ್ರೆಸ್ ನಾಯಕರೂ ದಿಗ್ಭ್ರಾಂತರಾದರು. ರಾಜ್ಯದ ಹಲವಾರು ನಾಯಕರು ವಿದುರಾಶ್ವತ್ಥಕ್ಕೆ ಭೇಟಿ ನೀಡಿದರು. ಈ ಘಟನೆಯ ನಂತರ 'ತಾಯಿನಾಡು', 'ನವಜೀವನ', 'ವಿಶ್ವಕರ್ನಾಟಕ' ಮತ್ತು 'ಗಾಂಧಿಪತ್ರಿಕೆ' ಮುಂತಾದವನ್ನು ಸರ್ಕಾರವು ಕಪ್ಪುಪಟ್ಟಿಗೆ ಸೇರಿಸಿ ನಿಷೇಧಿಸಿ ಏಪ್ರಿಲ್ ೨೯ರಂದು ಆಜ್ಞೆ ಹೊರಡಿಸಿತು. ಈ ಆಜ್ಞೆಯ ಪರಿಣಾಮಗಳನ್ನು ಬಹಳ ದಿನ ತಡೆದುಕೊಳ್ಳಲಾಗದೆ ಮೇ ೯ರಂದು ನಿರ್ಬಂಧವನ್ನು ರದ್ದುಪಡಿಸಲಾಯಿತು. ಗ್ರಾಮದ ಸುತ್ತ ಕರ್ಫ್ಯೂ ವಿಧಿಸಿ ಲ್ಯಾನ್ಸರ್ ಮತ್ತು ಮಿಲಿಟರಿಯನ್ನು ನಿಯೋಜಿಸಲಾಯಿತು. ಐ.ಜಿ.ಪಿ.ಯವರು ಹಳ್ಳಿಗಳ ಮೇಲೆ "ಪ್ಯುನಿಟಿವ್ ಟ್ಯಾಕ್ಸ್" ಎಂಬ ದಂಡದ – ತೆರಿಗೆ ವಿಧಿಸಿದರು. ಒಟ್ಟಿನಲ್ಲಿ ಏಪ್ರಿಲ್ ತಿಂಗಳ ಕೊನೆಯ ವಾರ ಮತ್ತು ಮೇ ತಿಂಗಳ ಮೊದಲ ವಾರದ ದಿನಗಳು ಸ್ಥಳೀಯ ಜನರ ಪಾಲಿಗೆ ನರಕಸದೃಶ ದಿನಗಳಾಗಿದ್ದವು. ಮೈಸೂರು ಸಂಸ್ಥಾನದಾದ್ಯಂತ ಈ ಘಟನೆಯ ಬಗ್ಗೆ ತೀವ್ರ ಪ್ರತಿಭಟನೆಗಳು, ಖಂಡನಾ ಸಭೆಗಳು ನಡೆದವು.

ಗಾಂಧೀಜಿಯವರು ಮೈಸೂರು ಅರಸರ ಬಗ್ಗೆ ಬಹಳ ಗೌರವವನ್ನಿಟ್ಟುಕೊಂಡಿದ್ದರು. ದಿವಾನರಾದ ಸರ್ ಮಿರ್ಜಾ ಅವರು ತಮ್ಮ ಸ್ನೇಹಿತರು ಎಂದು ಹೇಳಿಕೊಳ್ಳಲು ಹೆಮ್ಮೆಪಡುತ್ತಿದ್ದರು. ವಿದುರಾಶ್ವತ್ಥದ ಹತ್ಯಾಕಾಂಡದ ಘಟನೆಯ ನಂತರ ಗಾಂಧಿಯವರ ಅಭಿಪ್ರಾಯ ಬದಲಾಯಿತು. ಗಾಂಧೀಜಿಯವರು ಮೈಸೂರು ಸಂಸ್ಥಾನಗಳ ಬಗ್ಗೆ ಖುದ್ದಾಗಿ ತಿಳಿದುಕೊಳ್ಳಲು ಸರ್ದಾರ್ ವಲ್ಲಭಭಾಯಿ ಪಟೇಲ್ ಮತ್ತು ಆಚಾರ್ಯ ಕೃಪಲಾನಿಯವರನ್ನು ಬೆಂಗಳೂರಿಗೆ ಕಳುಹಿಸಿದರು. ಸರ್ದಾರ್ ವಲ್ಲಭಭಾಯಿ ಪಟೇಲರು ಮತ್ತು ಆಚಾರ್ಯ ಕೃಪಲಾನಿಯವರು ವಿದುರಾಶ್ವತ್ಥಕ್ಕೂ ಭೇಟಿ ನೀಡಿ ಸ್ಥಳೀಯ ನಾಯಕರೊಡನೆ ಘಟನೆಯ ಬಗ್ಗೆ ಚರ್ಚೆ ನಡೆಸಿದರು. ಮೇ ೧೭ರಂದು ಪಟೇಲ್–ಮಿರ್ಜಾ ಒಪ್ಪಂದವಾಯಿತು. ಒಪ್ಪಂದದ ಪ್ರಕಾರ ಮೈಸೂರು ಕಾಂಗ್ರೆಸ್ ಸಂಸ್ಥೆಯನ್ನು ಒಂದು ರಾಜಕೀಯ ಪಕ್ಷವೆಂಬುದಾಗಿ ಅಂಗೀಕರಿಸಲಾಯಿತು. ಕಾಂಗ್ರೆಸ್‌ನ ತ್ರಿವರ್ಣ ಧ್ವಜವನ್ನು ಮೈಸೂರು ಧ್ವಜದೊಡನೆ ಹಾರಿಸಲು ಮತ್ತು ಜಾರಿಯಲ್ಲಿರುವ ಎಲ್ಲಾ ನಿಷೇಧಾಜ್ಞೆಯನ್ನು ಹಿಂತೆಗೆದುಕೊಂಡು ರಾಜಕೀಯ ಬಂಧಿಗಳನ್ನು ಬಿಡುಗಡೆ ಮಾಡಲು ಹಾಗೂ ಸುಧಾರಣಾ ಸಮಿತಿಗೆ ಕಾಂಗ್ರೆಸ್ ಸದಸ್ಯರನ್ನು ನೇಮಿಸಲು ಸರ್ಕಾರವು ಅಂತಿಮವಾಗಿ ಒಪ್ಪಿಗೆ ನೀಡಿತು.

ಈ ಘಟನೆ ನಂತರ ಇಡೀ ಸಂಸ್ಥಾನದಲ್ಲಿ ಚಳುವಳಿಯ ದಿಕ್ಕನ್ನು ಬದಲಾಯಿಸಿತು. ೧೯೩೯ರಲ್ಲಿ ಮೈಸೂರು ಕಾಂಗ್ರೆಸ್‌ನ ಎರಡನೇ ಅಧಿವೇಶನ ವಿದುರಾಶ್ವತ್ಥದಲ್ಲಿಯೇ ನಡೆಯಿತು. ಇದು ಅಭೂತಪೂರ್ವ ಯಶಸ್ಸನ್ನೂ ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರು ಸಂಸ್ಥಾನಿಕ ಸರ್ಕಾರದ ಮೇಲೆ ಒತ್ತಡವನ್ನೂ ಹಾಕಿತು. ಅಲ್ಲಿಂದ ಮುಂದೆ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಹೋರಾಟಗಳು ತೀವ್ರಗೊಂಡವು. ಸಂಸ್ಥಾನದಲ್ಲಿ ಜಾಗೃತಿ ಹೆಚ್ಚಾಯಿತು. ಮುಂದಿನ ಎಲ್ಲಾ ಹೋರಾಟಗಳಿಗೆ ಸ್ಫೂರ್ತಿಯ ಸೆಲೆಯಾಯಿತು.




ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಆರ್ಥಿಕ ನೆರವಿನಿಂದ ಸುಮಾರು ೪ ಎಕರೆ ಪ್ರದೇಶದ ಹಸಿರು ಉದ್ಯಾನದಲ್ಲಿ ವಿದುರಾಶ್ವತ್ಥ ಸ್ವಾತಂತ್ರ್ಯಸ್ಮಾರಕ ಸಂಕೀರ್ಣವನ್ನು ನಿರ್ಮಿಸಲಾಗಿದೆ. ಉದ್ಯಾನದ ಒಂದು ಭಾಗದಲ್ಲಿ ೧೯೩೮ರ ಘಟನೆಯಲ್ಲಿ ಮಡಿದ ಹುತಾತ್ಮರ ನೆನಪಿನ ಸ್ಮಾರಕ ಸ್ತಂಭವನ್ನು ನಿರ್ಮಿಸಲಾಗಿದೆ. ಮತ್ತೊಂದು ಭಾಗದಲ್ಲಿ ವೀರಸೌಧವಿದ್ದು, ಅದರಲ್ಲಿ ಚಿತ್ರಪಟ ಗ್ಯಾಲರಿ ಮತ್ತು ಗ್ರಂಥಾಲಯವನ್ನು ಆಯೋಜಿಸಲಾಗಿದೆ. ವಿದುರಾಶ್ವತ್ಥ ಸ್ವಾತಂತ್ರ್ಯಸ್ಮಾರಕ ಸಂಕೀರ್ಣದ ಉಸ್ತುವಾರಿ ಮತ್ತು ಅಭಿವೃದ್ಧಿಯನ್ನು ಚಿಕ್ಕಬಳ್ಳಾಪುರ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ರಚಿಸಲಾಗಿರುವ ಸಮಿತಿಯು ನಿರ್ವಹಿಸುತ್ತದೆ. ಪೌರಾಣಿಕ ಮತ್ತು ಐತಿಹಾಸಿಕ ಪರಂಪರೆಗೆ ಸೇರಿರುವ ಈ ಸ್ಥಳವು ಕರ್ನಾಟಕದ ಪ್ರಮುಖ ಪ್ರವಾಸಿ ಕೇಂದ್ರಗಳಲ್ಲಿ ಒಂದಾಗಿದೆ.

*(ಮೈಸೂರಿನ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯವರು ಪ್ರಕಟಿಸಿರುವ ಪ್ರೊಫೆಸರ್ ಬಿ. ಗಂಗಾಧರಮೂರ್ತಿ ಮತ್ತು ಶ್ರೀಮತಿ ಡಿ. ಸ್ಮಿತಾರೆಡ್ಡಿಯವರು ರಚಿಸಿರುವ "ವಿದುರಾಶ್ವತ್ಥ – ಕರ್ನಾಟಕದ ಜಲಿಯನ್‌ವಾಲಾ ಬಾಗ್" ಪುಸ್ತಕವನ್ನು ಆಧರಿಸಿ ಬರೆದ ಲೇಖನವಿದು.)*

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

ಶಿವಪುರ ಮತ್ತು "ವಿದುರಾಶ್ವತ್ಥ ಹತ್ಯಾಕಾಂಡ"ವನ್ನು ಕುರಿತ ಈ ಲಾವಣಿಯನ್ನು ರಚಿಸಿ, ಹಾಡುತ್ತಿದ್ದ ಖ್ಯಾತ ಲಾವಣಿಗಾರ ಶ್ರೀ ಬಿ. ನೀಲಕಂಠಯ್ಯನವರು 'ಲಾವಣಿ ವಿದ್ವಾನ್' ಎಂದು ಹೆಸರಾದವರು. ಇವರು ಸಾಮಾಜಿಕ ವಸ್ತುವುಳ್ಳ ಹಲವಾರು ಲಾವಣಿಗಳನ್ನು ರಚಿಸಿ ಹಾಡಿರುವುದೇ ಅಲ್ಲದೆ, ಚಳುವಳಿಯ ಜೊತೆ ನಿಕಟ ಸಂಬಂಧ ಹೊಂದಿದ್ದು ಹಲವಾರು ಬಾರಿ ಜೈಲುವಾಸ ಅನುಭವಿಸಿದ್ದರು. ಲಾವಣಿ ಹಾಡುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿದ್ದರು.

# ಶಿವಪುರ ಮತ್ತು ವಿದುರಾಶ್ವತ್ಥದ ಲಾವಣಿ

(ಧಾಟಿ – ಖಡೀಜಾಲ್)

ಸತ್ಯ ಸಮರದಾ ಹತ್ಯವೇಳುವೆನು ಚಿತ್ತದಿಲಾಲಿಸಿರಿದುಸತ್ಯ ।
ಮರ್ತ್ಯದೊಳಾರ್ಯಾವರ್ತದ ವಿದುರಾಶ್ವತ್ಥ ವಿಚಿತ್ರದ ಘನಹತ್ಯ ॥ಪ॥
ವಿಶಾಲ ಮೈಸೂರ್ ಪ್ರಸಾರ ಕಾಂಗ್ರೆಸ್ ಪ್ರಸಂಗಲಾವಣಿ ಕವಿರಸ ।
ಪಾಷಾಣ
ಹೃದಯದ ದೇಶೀಯ ಜನರಿಗೆ ಲೇಸಾದರಿಲ್ಲವು ಕರುಣರಸ । ಆ
ಶಿವಪುರದೊಳು ।
ದೇಶೀಯ ಪ್ರಜೆಗಳು ಬೋಶಿಸ್ತು ತೋರಿದರೊಮ್ಮನಸ ।
ದೇಶೀಯ ಪ್ರಮುಖರು
ನಿಶಾನಿಯನೇರಿಸಿ ಬಾರ್ಸಿದರ್ಭೇರಿಯ ಜಯಘೋಷ ॥ ಕುಶಾಗ್ರನೀತಿಯ
ಮೈಸೂರ್ ಸರ್ಕಾರವು ಸೆಕ್ಷನ್ ಚಲಾಯ್ಸಲು ಬಲುಬಿರುಸ ।
ದೇಶೀ ಮುಖಂಡರು
ಸೆಕ್ಷನ್ ಉಲ್ಲಂಘಿಸಿ ಸೈಸೈ ಎಂದೆನಿಸಿದರಾದಿವಸ ॥

**ದೊಡ್ಡುಡನ್**

ಶಿವಪುರದೊಳು ನಮ್ ಸುವಿಮಲಚರಿತರು ತ್ರಿವರ್ಣರಾಟೆಯ ಧ್ವಜವೆತ್ತೆ ॥
ಭವಣಿಯಪಡುತಲಿ ಆವಿರಳಪೊಲೀಸ್ ಕೋವಿಲಾಠಿಗಳನಿಡಿಯುತ್ತೆ ।
ತವಕದಿ ಬಂದಿತು ಕವಿಯುತ ಕಾಂಗ್ರೆಸ್ ಸುವಿಮಲಚರಿತರ ಪಿಡಿಯುತ್ತೆ ।
ಶಿವಶಿವ ಈ ಪರಿ ಅವಿಚಾರದಿ ಉದ್ಭವಿಸಿತು ಕ್ರಾಂತಿಯು ಸುತ್ತಮುತ್ತ ॥

**ಶ್ಲೋಕ**

ಮುದದಿ ಕಾಂಗ್ರೆಸ್ ಧ್ವಜವನೆತ್ತಿದ ಮಹಿಮರಿಗೆ ಜೈಲಾಯಿತು ।
ಇದುವೆ ವಿದುರಾಶ್ವತ್ಥ ಗಲಭೆಗೆ ಮುಖ್ಯ ಕಾರಣವಾಯಿತು ॥

**ಚಾಲು**

ಸತ್ಯಮಹಾತ್ಮರ ಸತ್ವವನರಿಯದೆ ಹತ್ಯಗೈಯ್ಯುವದ್ಯಾವ್ ಕೃತ್ಯ ।
ಮರ್ತ್ಯದೊಳಾರ್ಯಾವರ್ತದ ವಿದುರಾಶ್ವತ್ಥ ವಿಚಿತ್ರದ ಘನಹತ್ಯ ॥೧॥

ಘನಸರ್ದಾರ ರಣದಬ್ಬಾಳಿಕೆ ದಿನಚರಿ ಅಬ್ಬರವೇರಿಹುದು ।
ಜನಗಣವೆಂಬುವ
ಗಣನೆಯೆ ಇಲ್ಲದೆ ಜನರನರ ಜರ್ಜರಗೊಳಿಸಿಹುದು ॥ ಜನರಿಂದಲ್ಲವೆ
ಘನಸರ್ಕಾರಕೆ ಧನಧಾನ್ಯಂಗಳು ಒದಗುವುವು ।
ಜನಗಳ ಕೊಂದರೆ ಘನರಾಜ್ಯಾಂಗದ
ಘನತೆಯು ಮತ್ತೆಲ್ಲುಳಿಯುವುದು ॥ ಜನತೆಯ ಕಾಡುವ ಘನತೆಯ
ರಾಜ್ಯಕೆ ಹೀನಭೂತವೊಂದಿಡಿದಿಹುದು ।
ಹೀನಭೂತಕಾ ದೇವನಹಳ್ಳಿಯ
ಜ್ಞಾನಪೂಜೆ ಬೇಕಿರಬಹುದು ॥

**ದೊಡ್ಡುಡನ್**

ಒಂಭೈನೂರುಮ್ವತ್ತೆಂಟನೆ ಏಪ್ರಿಲ್ ತಿಂಗಳ ಇಪ್ಪತ್ತೈದರೊಳು ।
ತುಂಬಿರೆ ಬಹುಪ್ರಜೆ ಸಂಭ್ರಮದಿಂದಲಿ ವಿದುರಾಶ್ವತ್ಥದ ಜಾತರೆಯೊಳು ।
ಸ್ತಂಭದಿ ಮೆರೆಯುವ ಧ್ವಜ ಸತ್ಯಾಗ್ರಹ ಕಾಂಗ್ರೆಸ್ಕೂಟದಿ ಕೂಡಿರಲು
ಠಂಬಕರಾ ಪ್ರಜಾದ್ರೋಹಿಗಳಲವರು ಢಂಢಂ ಹೊಡೆದರು ಗುಂಡುಗಳು

**ಶ್ಲೋಕ**

ಸುತ್ತಮತ್ತಲು ಲಾಠಿ ಹೊಡೆತಗಳ್ ಮತ್ತೆ ಗುಂಡಿನ ಏಟುಗಳ್ ।
ಸತ್ತ ಹೆಣಗಳ ಲೆಕ್ಕವಿಲ್ಲವು ಹೊತ್ತರೆಷ್ಟೋ ಗುಪ್ತದೊಳ ॥

**ಚಾಲು**

ಸತ್ಯವು ಕೇಳಿರಿ ಮಿಥ್ಯವಿದಲ್ಲವು ಹತ್ಯ ಹತ್ಯ ಸ್ತ್ರೀ ಶಿಶುಹತ್ಯ ।
ಮರ್ತ್ಯದೊಳಾರ್ಯಾವರ್ತದ ವಿದುರಾಶ್ವತ್ಥ ವಿಚಿತ್ರದ ಘನಹತ್ಯ ॥೨॥
ಗೌರಮ್ಮ ಎಂಬುವ ಗರ್ಭಿಣಿ ಹೆಣ್ಣಣು ಗರ್ವದಿಕೊಂದು ಕೈಯ್ಯಾರ ।
ಸಾರ್ವ
ಜನರಮೇಲ್ ಗುಂಡಿನ ಸುರಿಮಳೆ ಸುರಿಸಿದರ ಘೋರ ವೈಯ್ಯಾರ ॥
ವಿರಾಟ
ಪುತ್ರರ ಭರಾಟ ಭಾರತ ಕರಾಟಕಿಂತಲು ವಿಸ್ತಾರ । ನಿರಾಳಗೈದರು
ನಿರಾಯುಧಾ ಮೇಣ್
ನಿರಾಪರಾಧಿಗಳ್ ಸಂಹಾರ ॥ ಏರಿಸಿ ಗುಂಡನು ಹಾರಿದಾಕ್ಷಣ
ನೂರಾರು ಕಪಿಗಳು ಭಯಂಕರ । ಕಿರ್ರನೆ
ಕಿರುಚುತ ಕೊರ್ರೆಂದು ಕೊರಗುತ ಗಿರ್ರೆಂದು ಸತ್ತವು ತರಾತರ ॥

**ದೊಡ್ಡುಡನ್**

ಇಡೀ ಪ್ರಪಂಚವೆ ನಡುಗಿತು ಈ ಘನ ಗಡಿಬಿಡಿ ಕೇಳಿದ ಕ್ಷಣದೊಳಗೆ ।
ಗೌಡಖಿಲೀಲರು ಹೂಡಿದ ತಂತ್ರದಿ ಕೇಡಲೆ ಒದಗಿತು ಕಡೆಯೊಳಗೆ ।
ಬಡತನದೊಳಗೆಲೆ ಬೆಳೆದಾವೃಷಭನ ಬಡಾಯಿ ಬಹಳಾರಣದೊಳಗೆ ।
ಹಿಡಿದು ರಿವಾಲ್ವರ್ ಹೊಡೆದರು ಪ್ರಜೆಗಳ ವಡೇಚಕ್ಕಿಗಳ ಸವಿದಾ ಹಾಗೆ ॥

*('ಕಾಂಗ್ರೆಸ್ ಲಾವಣಿ')*

**ಬಿ. ನೀಲಕಂಠಯ್ಯ**

ಚಿತ್ರಲೇಖನ : **ಪರಂಜ್ಯೋತಿ**

# ದಣಿವರಿಯದ ಹೋರಾಟಗಾರ ಎಚ್. ಎಸ್. ದೊರೆಸ್ವಾಮಿ

೧೯೯೧ರಲ್ಲಿ ಮತ್ತೆ ಬೆಂಗಳೂರಿಗೆ ಬಂದ ನಂತರ, ಮುಂದೆ ೨೦೧೧ರವರೆಗೆ ನನ್ನ ಹುದ್ದೆಯ ಜೊತೆಗೆ, ಫೋಟೋಗ್ರಫಿಯ ಹವ್ಯಾಸದಲ್ಲೂ ಸಕ್ರಿಯವಾಗಿ ತೊಡಗಿಕೊಳ್ಳುವ ಅವಕಾಶ ದೊರಕಿತ್ತು.

ತಿಂಗಳಲ್ಲಿ ಒಂದೆರಡು ಬಾರಿ ಪುಸ್ತಕ ಲೋಕಾರ್ಪಣೆ ಸಮಾರಂಭಗಳು, ಆಗಾಗ ನಡೆಯುತ್ತಿದ್ದ ವಿಚಾರ ಸಂಕಿರಣಗಳು, ಜೊತೆಗೇ ಖ್ಯಾತ ಲೇಖಕರ, ಕವಿಗಳ, ವಿಜ್ಞಾನಿಗಳ, ಸಿನಿಮಾ ನಿರ್ದೇಶಕರ, ಪ್ರೊಫೆಸರ್‌ಗಳ, ಕಲೆಗಾರರ ಮತ್ತು ಹಿರಿಯ ವ್ಯಕ್ತಿಗಳ ಸಂದರ್ಶನಗಳು, ಅಲ್ಲದೆ 'ಜ್ಞಾನ-ವಿಜ್ಞಾನ-ಕೋಶ' ಗ್ರಂಥಕ್ಕಾಗಿ ತುಂಬೆ ಹೂವು, ಜೆರಾಕ್ಸ್ ಮಷೀನಿನಿಂದ ಹಿಡಿದು ತುಕ್ಕು ಹಿಡಿದ ಕಬ್ಬಿಣದವರೆಗೆ ಅಗತ್ಯವಾದ ಚಿತ್ರಗಳನ್ನು ಕ್ಲಿಕ್ಕಿಸುವುದು – ಹೀಗೆ. ಆಗ ನನ್ನನ್ನು ನಾನೇ 'ಆಸ್ಥಾನ ಫೋಟೋಗ್ರಾಫರ್' ಎಂದು ತಮಾಷೆ ಮಾಡಿಕೊಳ್ಳುವುದಿತ್ತು!

ಬೇರೆ ಬೇರೆ ಕ್ಷೇತ್ರಗಳಲ್ಲಿ ತೊಡಗಿಕೊಂಡಿದ್ದ ವ್ಯಕ್ತಿಗಳು ಸಭೆ ಸಮಾರಂಭಗಳಲ್ಲಿ ಕಾಣಸಿಗುತ್ತಿದ್ದರು. ಲೇಖಕರ, ಕವಿಗಳ ಪರಿಚಯವಾಗುತ್ತಿತ್ತು. ಹೊರ ಊರುಗಳಿಂದ ಬರುತ್ತಿದ್ದ ಲೇಖಕರ ಸ್ನೇಹ ಲಭಿಸುತ್ತಿತ್ತು. ಕೆಲವರು ಆಗಾಗ, ಹೆಚ್ಚು ಸಲ ಕಾಣಸಿಗುತ್ತಿದ್ದರು. ಅಂಥವರ ಪೈಕಿ ಹಿರಿಯರಾದ ಎಚ್. ಎಸ್. ದೊರೆಸ್ವಾಮಿಯವರು ಸೇರುತ್ತಾರೆ.

'ಹೊಸತು' ಪತ್ರಿಕೆ ಪ್ರಾರಂಭವಾದಾಗ, ಸಮಾರಂಭದಲ್ಲಿ ಭಾಗವಹಿಸಿದ, ಪತ್ರಿಕೆಯ ಮೊದಲ ಪ್ರತಿಯನ್ನು ಲೋಕಾರ್ಪಣೆ ಮಾಡಿದವರು ಅವರೇ. ಅವರದೊಂದು ಸಂದರ್ಶನವನ್ನು ಪತ್ರಿಕೆಯಲ್ಲಿ ಪ್ರಕಟಿಸಿದ್ದೆವು. ಅದಕ್ಕಾಗಿ ಬೇರೆ ಬೇರೆ ಕೋನಗಳಿಂದ ಅವರ ಫೋಟೊ ತೆಗೆದಿದ್ದೆ, 'ಇನ್ನೊಂದು ಸರ್!, ಇನ್ನೊಂದೇ ಒಂದು ಸರ್?' – ಎಂದು ಅವರಿಗೆ ಸಾಕಷ್ಟು ಕಿರಿಕಿರಿ ಉಂಟುಮಾಡಿದ್ದೆ ಎನ್ನಬಹುದು. ಪ್ರಿಂಟಾಗಿ ಬಂದ ಅವರ ಫೋಟೋ ನೋಡಿದಾಗ 'ನಾನಿರೋದೇ ಹೀಗೆ?' ಎನ್ನುವಂತಿರುತ್ತಿದ್ದವು ಅವು!

ಪತ್ರಿಕೆಗೆ ಲೇಖನ ತಲುಪಿಸಲು ಖುದ್ದಾಗಿ ಆಫೀಸಿಗೆ ಬರುತ್ತಿದ್ದರು. ಅಂಗೈ ಅಗಲದಷ್ಟು ಸಣ್ಣ ಹಾಳೆಗಳಲ್ಲಿ ಬರೆದಿರುತ್ತಿದ್ದರು. ಅವು ಕೆಲವೊಮ್ಮೆ ನಮ್ಮ ಅಭಿಪ್ರಾಯಗಳನ್ನು ವಿರೋಧಿಸಿಯೂ ಇರುತ್ತಿದ್ದವು. ಅವರ ಲೇಖನಕ್ಕೆ ಕತ್ತರಿ ಹಾಕುತ್ತಿರಲಿಲ್ಲ. ಓದುಗರ ಪತ್ರಗಳನ್ನು ಪೋಸ್ಟ್‌ಕಾರ್ಡುಗಳಲ್ಲಿ ಬರೆದು ಕಳಿಸುತ್ತಿದ್ದರು.

ಹಿರಿಯನೆಂದು ಗತ್ತು ತೋರಿಸದೆ ಎಲ್ಲರನ್ನೂ, ಬಹುವಚನದಲ್ಲಿ ಮಾತಾಡಿಸುತ್ತಿದ್ದ ಅವರ ನಡವಳಿಕೆ, ಅವರ ಮೇಲಿನ ನಮ್ಮ ಗೌರವ ಮತ್ತಷ್ಟು ಹೆಚ್ಚುವಂತೆ ಮಾಡುತ್ತಿತ್ತು. ಅದು ಅವರ ಹಿರಿತನ! ಅವರ ಉಡುಪೂ ಅಷ್ಟೇ ಸರಳ. ಮಾಸಲು ಬಣ್ಣದ ಜುಬ್ಬಾ, ಪಂಚೆ, ಹೆಗಲ ಮೇಲೊಂದು ಟವೆಲ್, ಕಾಲಿಗೆ ಚಪ್ಪಲಿ, ಆಗ ಅವರ ಪ್ರಾಯ ೮೦. ಮನೆಯಿಂದ ಬಸ್ಸಿನಲ್ಲಿ ಬಂದಿಳಿದು, ನಡೆದೇ ನಮ್ಮಲ್ಲಿಗೆ ಬಂದು ಹೋಗುತ್ತಿದ್ದರು.

ಕನಕಪುರ ಸಮೀಪದ ಹಾರೋಹಳ್ಳಿಯ ಮೂಲದವರು, ಮಾಧ್ಯಮಿಕ ಶಾಲೆಗೆ ಸೇರಲು ಬೆಂಗಳೂರಿಗೆ ಬಂದಾಗಲೇ ಗಾಂಧಿಯವರ ವಿಚಾರಗಳು ಅವರ ಕಿವಿಗೆ ಬೀಳತೊಡಗಿದ್ದವು. ದಿನಕಳೆದಂತೆ ಆ ವಿಚಾರಗಳು ಮತ್ತಷ್ಟು ದಟ್ಟವಾಗಿ, ಗಾಂಧಿ ತತ್ವಗಳಲ್ಲಿ ನಂಬಿಕೆ ಅಚಲವಾಯಿತು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಂಪೂರ್ಣ ತೊಡಗಿಕೊಂಡರು. ಚಳುವಳಿಗಳಲ್ಲಿ ಮಿಂದು ಬೆಳೆದರು ಎನ್ನಬಹುದು.

ಶಿಕ್ಷಕನಾಗಬೇಕೆಂಬುದು ಅವರ ಆಶಯ. ಸೆಂಟ್ರಲ್ ಕಾಲೇಜಿನಿಂದ ಬಿ.ಎಸ್‌ಸಿ, ಪದವಿ ಗಳಿಸಿದ ನಂತರ ಶಿಕ್ಷಕ ಹುದ್ದೆಯೂ ಲಭಿಸಿತು. ಮೇಷ್ಟರಾಗಿ ಒಂದೆರಡು ತಿಂಗಳು ಪಾಠ ಹೇಳಿದರು. ಸ್ವಾತಂತ್ರ್ಯ ಚಳುವಳಿಯ ಆಕರ್ಷಣೆ ಅವರನ್ನು ಸೆಳೆಯತೊಡಗಿತು. ಮೇಷ್ಟರಗಿರಿ ಅಲ್ಲಿಗೆ ಕೊನೆಯಾಯಿತು!

ಇಪ್ಪತ್ತರ ಪ್ರಾಯಕ್ಕೆ ಮುಂಚೆಯೇ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದ ನೂರು ದಾಟಿರುವ ಅವರು, ಈಗಲೂ ಯಾವುದಾದರೊಂದು ಜನಪರ ಹೋರಾಟದ ಮುಂಚೂಣಿಯಲ್ಲಿ ಕಾಣಸಿಗುತ್ತಾರೆ. ಜನಸಾಮಾನ್ಯರ ನ್ಯಾಯವಾದ ಹಕ್ಕುಗಳಿಗಾಗಿ, ಅನ್ಯಾಯದ ವಿರುದ್ಧ ಅವರದು ದಣಿವರಿಯದ ಹೋರಾಟ. ಅವರ ಸಲಹೆ ಮತ್ತು

ಇಪ್ಪತ್ತರ ಪ್ರಾಯಕ್ಕೆ ಮುಂಚೆಯೇ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದ ನೂರು ದಾಟಿರುವ ಎಚ್. ಎಸ್. ದೊರೆಸ್ವಾಮಿಯವರು, ಈಗಲೂ ಯಾವುದಾದರೊಂದು ಜನಪರ ಹೋರಾಟದ ಮುಂಚೂಣಿಯಲ್ಲಿ ಕಾಣಸಿಗುತ್ತಾರೆ. ಜನಸಾಮಾನ್ಯರ ನ್ಯಾಯವಾದ ಹಕ್ಕುಗಳಿಗಾಗಿ, ಅನ್ಯಾಯದ ವಿರುದ್ಧ ಅವರದು ದಣಿವರಿಯದ ಹೋರಾಟ. ಅವರ ಸಲಹೆ ಮತ್ತು ಮಾರ್ಗದರ್ಶನಕ್ಕಾಗಿ ಅವರನ್ನು ಅರಸಿ ಬರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಬ್ರಿಟಿಷ್ ಆಡಳಿತದ ವಿರುದ್ಧ ಪ್ರಾರಂಭವಾದ ಚಳುವಳಿಗಳು ಸ್ವತಂತ್ರ ಭಾರತದಲ್ಲಿಯೂ ಬೇರಬೇರೆ ರೂಪದಲ್ಲಿ ಮುಂದುವರಿಯುತ್ತಿರುವುದಕ್ಕೆ ಸಾಕ್ಷಿಯಾದವರು ಅವರು.

ಮಾರ್ಗದರ್ಶನಕ್ಕಾಗಿ ಅವರನ್ನು ಅರಸಿ ಬರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಬ್ರಿಟಿಷ್ ಆಡಳಿತದ ವಿರುದ್ಧ ಪ್ರಾರಂಭವಾದ ಚಳುವಳಿಗಳು ಸ್ವತಂತ್ರ ಭಾರತದಲ್ಲಿಯೂ ಬೇರ ಬೇರೆ ರೂಪದಲ್ಲಿ ಮುಂದುವರಿಯುತ್ತಿರುವುದಕ್ಕೆ ಸಾಕ್ಷಿಯಾದವರು ಅವರು.

ಜನಸೇವೆಯಲ್ಲಿ ತೊಡಗಿಕೊಳ್ಳಬಯಸುವವರು ಸ್ವಯಂ ಪ್ರೇರಣೆಯಿಂದ ಬಡತನದ ಅನುಭವ ಪಡೆಯಬೇಕು ಎಂಬ ಗಾಂಧಿಯವರ ವಿಚಾರವನ್ನು ಗಂಭೀರವಾಗಿ ಪರಿಗಣಿಸಿ, ಅದನ್ನು ಸ್ವೀಕರಿಸಿದವರು !

ಜೀವನದ ಹಲವು ಕ್ಷೇತ್ರಗಳ ಅನುಭವ ಅವರಿಗಿದೆ. ಶಿಕ್ಷಕ ಹುದ್ದೆಗೆ ಸೇರುವ ಮುಂಚೆ ಕೆಲವು ಕಾಲ ಮರದ ವ್ಯಾಪಾರ ಮಾಡಿದ್ದರು. ಪೂರ್ಣಾವಧಿ ಹೋರಾಟಗಾರ, ಪುಸ್ತಕ ವ್ಯಾಪಾರಿ, ಪ್ರಕಾಶಕ, ಲೇಖಕ, ಪತ್ರಕರ್ತ – ಹೀಗೆ ಹಲವು ಕ್ಷೇತ್ರಗಳಲ್ಲಿ ಹೆಜ್ಜೆ ಮೂಡಿಸಿದವರು.

ಬೆಂಗಳೂರು ಅವರ ಚಟುವಟಿಕೆಗಳ ಕೇಂದ್ರ. ಸ್ವಲ್ಪ ಕಾಲ ಅವರು ಮೈಸೂರಿನಿಂದಲೂ ಚಟುವಟಿಕೆ ನಡೆಸಿದ್ದರು. ಅಲ್ಲೊಂದು ಪುಸ್ತಕದಂಗಡಿ ತೆರೆದಿದ್ದರು. ಅವರ ಪುಸ್ತಕದಂಗಡಿಗೆ ಬೇರೆ ಬೇರೆ ಕಡೆಗಳಿಂದ ಒಳ್ಳೆಯ ಪುಸ್ತಕಗಳನ್ನು ತರಿಸಿ ಮಾರಾಟಮಾಡುತ್ತಿದ್ದರು. ಆ ಅಂಗಡಿ ಅಂದಿನ ಬರಹಗಾರರಾಗಿದ್ದ ಆರ್. ಕೆ. ನಾರಾಯಣ್, ಕೆ. ಎಸ್. ನರಸಿಂಹ ಸ್ವಾಮಿ – ಮುಂತಾದವರ ಸಾಹಿತ್ಯ ಸಲ್ಲಾಪದ ಅಡ್ಡೆಯಾಗಿತ್ತು. ಪ್ರಕಾಶಕರಾಗಿ ಕೆ. ಎಸ್. ನ. ಅವರ ಮೊದಲ ಕವನ ಸಂಗ್ರಹ ಪ್ರಕಟಿಸಿದರು. ಮತ್ತೆ ಕೆಲವರ ಪುಸ್ತಕಗಳೂ ಪ್ರಕಟವಾಗಿದ್ದವು.




ಬೆಂಗಳೂರಿನಿಂದ ಅವರು ಪ್ರಕಟಿಸುತ್ತಿದ್ದ 'ಪೌರವಾಣಿ' ಪತ್ರಿಕೆಯದು ಒಂದು ರೋಚಕ ಕಥೆ. ಮೈಸೂರು ಚಲೋ ಚಳುವಳಿಯ ತಳಮಳದ ದಿನಗಳು ಅವು. ಅರಸರು ಸಿಂಹಾಸನ ತ್ಯಜಿಸಬೇಕೆಂಬುದು ಚಳುವಳಿಯ ಉದ್ದೇಶ. ಮೈಸೂರು ಸೀಮೆಯ ಪ್ರಜೆಗಳ ಮನಸ್ಸಿಗೆ ಆಘಾತ ನೀಡುವಂತಿದ್ದ ಪ್ರಕರಣ. ಅವರ ಮನಸ್ಸನ್ನು ತಿದ್ದುವ ಕೆಲಸದಲ್ಲಿ 'ಪೌರವಾಣಿ' ತೊಡಗಿಕೊಂಡಿತು. ತಿ. ತಾ. ಶರ್ಮರು ಬರೆಯುತ್ತಿದ್ದ ಲೇಖನಮಾಲೆ ಆಡಳಿತಗಾರರ ಕೆಂಗಣ್ಣಿಗೆ ಗುರಿಯಾಯಿತು. ಆ ಲೇಖನಗಳ ಪ್ರಕಟಣೆಯನ್ನು ತತ್‌ಕ್ಷಣವೇ ನಿಲ್ಲಿಸತಕ್ಕದ್ದೆಂದು, ನಾಳೆಯಿಂದ ಪ್ರಕಟಿಸಲಿರುವ ಲೇಖನಗಳನ್ನು ತನಿಖಾಧಿಕಾರಿಗೆ ನೀಡಿ ಅವರು ಅನುಮತಿ ನೀಡಿದ ನಂತರವೇ ಪ್ರಕಟಿಸತಕ್ಕದ್ದೆಂದು ಸರಕಾರದ ಚೀಫ್ ಸೆಕ್ರೆಟರಿಯವರಿಂದ ಅವರಿಗೆ ಒಂದು ನೋಟಿಸ್ ಬಂದಿತು. ಅದನ್ನು ಉಲ್ಲಂಘಿಸಿದ್ದರೆ ಸಂಪಾದಕರು ಜೈಲು ಸೇರಬೇಕಾಗುತ್ತಿತ್ತು. ಅದರಿಂದ ತಪ್ಪಿಸಿಕೊಳ್ಳುವ ಉಪಾಯವಾಗಿ, ಇನ್ನೂ ಉಳಿದಿದ್ದ ತಿ. ತಾ. ಶರ್ಮರ ಎರಡು ಲೇಖನಗಳನ್ನೂ ಒಂದೇ ಸಂಚಿಕೆಯಲ್ಲಿ ಪ್ರಕಟಿಸಿ, ಸರಕಾರದ ನಿರಂಕುಶ ಕ್ರಮಗಳಿಗೆ ಪ್ರತಿಭಟನೆಯಾಗಿ ನಾಳೆಯಿಂದ ಪೌರವಾಣಿ ನಿಲ್ಲಿಸುತ್ತಿದ್ದೇನೆ ಎಂದು ಓದುಗರಿಗೆ ಸೂಚನೆ ನೀಡಿದರು. ಓದುಗರಿಗೆ ತಲುಪಬೇಕಾದ ಸಂದೇಶ ತಲುಪಿತ್ತು. ಆದರೂ ಸರಕಾರ ಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಂಡಿತು ಮತ್ತು ಮುದ್ರಣಾಲಯಕ್ಕೆ ಬೀಗಮುದ್ರೆ ಹಾಕಿತು.

ಅಂದಿನ ಆಡಳಿತ ಕೈಗೊಂಡ ಕ್ರಮದಿಂದ 'ಪೌರವಾಣಿ' ಕೊನೆಯುಸಿರೆಳೆಯಲಿಲ್ಲ ! ದೊರೆಸ್ವಾಮಿಯವರ ಭಗೀರಥ ಪ್ರಯತ್ನದಿಂದ ಅದು ಬ್ರಿಟಿಷ್ ಆಡಳಿತದಲ್ಲಿದ್ದ ಹಿಂದೂಪುರದಿಂದ ಪ್ರಕಟವಾಗತೊಡಗಿತು. ಅದು ಮತ್ತೊಂದು ರೋಚಕ ಕಥೆ. ಆವರೆಗೆ ವಾರಪತ್ರಿಕೆಯಾಗಿದ್ದ ಅದನ್ನು ದಿನಪತ್ರಿಕೆಯಾಗಿ ಪ್ರಕಟಿಸಲು ಏರ್ಪಾಟು ಮಾಡಿದರು. ಆಗ ಎದುರಾದ ಅಡೆತಡೆಗಳು ಒಂದೆರಡಲ್ಲ. ಕಾಂಗ್ರೆಸಿನ ಪರವಾಗಿದ್ದ ಒಬ್ಬ ವ್ಯಕ್ತಿ ಪತ್ರಿಕೆಯನ್ನು ತಮ್ಮ ಮುದ್ರಣಾಲಯದಲ್ಲಿ ಮುದ್ರಿಸಿಕೊಡಲು ಒಪ್ಪಿದರು. ಅವರಲ್ಲಿ ತೆಲುಗು ಅಕ್ಷರಗಳಿದ್ದವು. ಒಂದು ಕೇಸು ಕನ್ನಡ ಅಕ್ಷರಗಳಿದ್ದರೂ ಮೊಳೆ ಜೋಡಿಸುವವರಿರಲಿಲ್ಲ. ಅಕ್ಷರ ಜೋಡಿಸಲು ವ್ಯಕ್ತಿಯನ್ನು ಬೆಂಗಳೂರಿನಿಂದ ಕರೆತರಿಸಿದರು. ಆಗ ದೊರೆಸ್ವಾಮಿಯವರ ವಾಸ, ಊಟ, ನಿದ್ರೆ ಎಲ್ಲ ಪ್ರೆಸ್ಸಿನಲ್ಲಿಯೇ. ಅಚ್ಚಾದ ನಂತರ ಅದನ್ನು ಬಂಡಲು ಮಾಡಿ ಕಳಿಸಿಕೊಟ್ಟರೆ ಅಂದಿನ ಕೆಲಸ ಮುಗಿದಂತೆ. ಪ್ರತಿದಿನ ಒಬ್ಬ ಯುವ ಸತ್ಯಾಗ್ರಹಿ ಪತ್ರಿಕೆಯನ್ನು ಬೆಂಗಳೂರಿಗೆ ಒಯ್ಯುತ್ತಿದ್ದ !

ನಾಡಿನ ಇತರ ಕಡೆಯ ಸುದ್ದಿ ಸಮಾಚಾರಗಳ ಜೊತೆಗೆ ಪಿಟಿಐನಂಥ ಸುದ್ದಿ ಸಂಸ್ಥೆಗಳ ವರದಿಗಳನ್ನು ಆಧಾರವಾಗಿ ಬಳಸಿಕೊಳ್ಳುತ್ತಿದ್ದರು. ಎಂದಿನಂತೆ ವಿಚಾರಪ್ರಚೋದಕ ಲೇಖನಗಳಿರುತ್ತಿದ್ದವು. ಬೆಂಗಳೂರಿನಿಂದ ತಿ. ತಾ. ಶರ್ಮ, ಡಿ. ವಿ. ಜಿ. ಮತ್ತಿತರರು ಪ್ರೋತ್ಸಾಹ ನೀಡುತ್ತಿದ್ದರು. 'ಪೌರವಾಣಿ' ಹಿಂದೂಪುರದಿಂದ ಬರುತ್ತಿದೆ ಎಂದು ಜನರಿಗೆ ಆಶ್ಚರ್ಯ, ದಿನದಿನಕ್ಕೆ ಅದರ ಪ್ರಸಾರ ಹೆಚ್ಚಿತ್ತು. ಮತ್ತು ಪ್ರತಿಗಳ ಸಂಖ್ಯೆ ಹತ್ತು ಸಾವಿರಕ್ಕೆ ತಲುಪಿತು. ಮುದ್ರಣ ಕಾಗದ ಒದಗಿಸಿಕೊಳ್ಳುವುದು ಕಷ್ಟವಾಯಿತು. ಆಗ ದೊರೆಸ್ವಾಮಿಯವರು ಮದರಾಸಿನ ದಿ ಹಿಂದು ಮತ್ತು ಇಂಡಿಯನ್ ಎಕ್ಸ್‌ಪ್ರೆಸ್ ಸಂಸ್ಥೆಗಳಿಗೆ ತಮ್ಮ ತೊಡಕನ್ನು ವಿವರಿಸಿ ಪತ್ರ ಬರೆದರು. ಗೆಳೆಯರ ಸಹಾಯದಿಂದ ಮದರಾಸಿಗೆ ಹೋಗಿ ಒಂದು ಲಾರಿ ಭರ್ತಿ ನ್ಯೂಸ್‌ಪ್ರಿಂಟ್ ದೊರಕಿಸಿಕೊಳ್ಳುವಲ್ಲಿ ಸಫಲರಾದರು!

ಬ್ರಿಟಿಷ್ ಆಡಳಿತದ ವಿರುದ್ಧ ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿಗಳೂ ಅಸಂಖ್ಯಾತ. ಸ್ವಾತಂತ್ರ್ಯಾನಂತರವೂ ಬೇರೆ ಬೇರೆ ಅನ್ಯಾಯಗಳ ವಿರುದ್ಧ ಈಗಲೂ ಹೋರಾಟಗಳು ಮುಂದುವರಿಯುತ್ತಿರುವುದು ಒಂದು ವಿಪರ್ಯಾಸ ಎನ್ನಬಹುದು. ಅಥವಾ ಅದು ಪ್ರಜಾಪ್ರಭುತ್ವದ ಒಂದು ಅನಿವಾರ್ಯ ಅಗತ್ಯವೂ ಆಗಿರಬಹುದು.

ದೊರೆಸ್ವಾಮಿಯವರು ಇಂಥ ಹಲವು ಹೋರಾಟಗಳ ಮುಂಚೂಣಿಯಲ್ಲಿದ್ದರು. ಲಾಠಿ ಏಟಿನ ರುಚಿ ಕಂಡರು. ಜೈಲುವಾಸ ಅನುಭವಿಸಿದರು. ಇವರ ಜೊತೆಯಲ್ಲಿ ಹೋರಾಡಿದವರಲ್ಲಿ ಅನೇಕರು ಸ್ವಾತಂತ್ರ್ಯಾನಂತರ ಬೇರೆ ಬೇರೆ ಪದವಿಗಳನ್ನು ಅಲಂಕರಿಸಿದರು. ಸರಕಾರದ ಸವಲತ್ತುಗಳನ್ನು ಅನುಭವಿಸಿದರು. ಆದರೆ ದೊರೆಸ್ವಾಮಿಯವರು ಮತ್ತೆ ಜನಸಾಮಾನ್ಯರೊಂದಿಗೇ ಉಳಿದರು !

ದೊರೆಸ್ವಾಮಿಯವರ ಪತ್ನಿ ಹೇಳುವಂತೆ, ಅವರು ಮನೆಯಲ್ಲೇ ಇರಬೇಕಾಗಿ ಬರುವ ದಿನಗಳಲ್ಲಿ ಸಾಮಾನ್ಯವಾಗಿ ಮಂಕಾದಂತಿರುತ್ತಾರೆ. ಜನರ ಸಮಸ್ಯೆಯ ಪರಿಹಾರಕ್ಕಾಗಿ ಜನಪರ ಹೋರಾಟಗಳಲ್ಲಿ ಭಾಗವಹಿಸಲು ಹೊರಗಡೆ ಹೋಗಿ ಬಂದಾಗ ಉತ್ಸಾಹದಿಂದಿರುತ್ತಾರೆ !

ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ವಿದ್ಯಮಾನಗಳನ್ನು, ಆಡಳಿತಗಾರರ ಯಡವಟ್ಟುಗಳನ್ನು ಗಮನಿಸಿದಾಗ ಅವರ ನೈತಿಕ ಸಿಟ್ಟಿಗೆ ಮತ್ತಷ್ಟು ಕಾವೇರುತ್ತದೆ. 'ಯಾರಿಗೆ ಬಂತು ಸ್ವಾತಂತ್ರ್ಯ?' ಎಂಬ ಪ್ರಶ್ನೆಯೂ ಕಾಡಿಸತೊಡಗುತ್ತದೆ. ಇಡೀ ಒಂದು ತಲೆಮಾರಿನ ಯುವಕರು, ಹಿರಿಯರು ಹೋರಾಡಿದ್ದು, ಕನವರಿಸಿದ್ದು ಇದಕ್ಕಾಗಿಯೇ ಎಂಬ ಕಳವಳದಿಂದ ಅವರ ಮನಸ್ಸು ಮುದುಡಿಕೊಳ್ಳುವುದುಂಟು. ಹೋರಾಟ ಮುಗಿದಿಲ್ಲ ಎಂಬ ಪ್ರಜ್ಞೆಯಿಂದ ಅದು ಮತ್ತೆ ಜಾಗೃತವಾಗುತ್ತದೆ. ಸಾಮಾನ್ಯ ಜನರು ಎದುರಿಸಬೇಕಾಗಿ ಬರುವ ಹೊಸ ಹೊಸ ಸಮಸ್ಯೆಗಳತ್ತ ಅವರ ಮನಸ್ಸು ತೆರೆದುಕೊಳ್ಳುತ್ತದೆ !

ಕಳೆದ ಶತಮಾನದ ೧೯೩೦ರ ದಶಕದಿಂದ ಬ್ರಿಟಿಷ್ ಸರಕಾರದ ವಿರುದ್ಧ ಪ್ರಾರಂಭವಾದ, ಮುಂದೆ ಮೈಸೂರು ರಾಜರ ವಿರುದ್ಧ ಸ್ವಾತಂತ್ರ್ಯ ನಂತರ ಈಗಲೂ ಅವರ ಹೋರಾಟ ಮುಂದುವರಿದಿದೆ. ಅವರು ಭಾಗವಹಿಸಿದ ಚಳುವಳಿಗಳು, ಹೋರಾಟಗಳು ಸಂಘಟಿಸಿದ ಪ್ರತಿಭಟನೆಗಳು, ಹರತಾಳಗಳು ಲೆಕ್ಕವಿಲ್ಲದಷ್ಟು. ಈ ಚಟುವಟಿಕೆಗಳಲ್ಲಿ ಜೊತೆಯಾಗಿ ಭಾಗವಹಿಸಿದವರೆಲ್ಲರನ್ನೂ ದೊರೆಸ್ವಾಮಿಯವರು ತಮ್ಮ 'ನೆನಪಿನ ಸುರುಳಿ ತೆರೆದಾಗ' ಕೃತಿಯಲ್ಲಿ ಸ್ಮರಿಸಿಕೊಳ್ಳುತ್ತಾರೆ. ಬಿ. ಆರ್. ರಮೇಶ್ ರಚಿಸಿರುವ 'ಗಾಳಿಗೆ ಸಿಕ್ಕ ತರಗೆಲೆ' ಎಂಬ ದೊರೆಸ್ವಾಮಿಯವರ ಜೀವನ ಮತ್ತು ಬದುಕನ್ನು ಚಿತ್ರಿಸುವ ಕೃತಿಯಲ್ಲಿ, ಮೈಸೂರು ಚಲೋ, ಭೂದಾನ, ಕ್ವಿಟ್ ಇಂಡಿಯಾ, ಕರ್ನಾಟಕ ಏಕೀಕರಣ – ಮುಂತಾಗಿ ಅವರು ಭಾಗವಹಿಸಿದ ಬೇರೆ ಬೇರೆ ಚಳುವಳಿಗಳ ಚಿತ್ರಣ ಸಿಗುತ್ತದೆ.

---

ಚಿತ್ರಲೇಖನ : **ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧–ಬಿ ಕ್ರಾಸ್, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

# ನೆಹರು ದೊಡ್ಡವರಲ್ಲ - ಪಟೇಲ್ ಚಿಕ್ಕವರಲ್ಲ

ಮೇಲ್ನೋಟಕ್ಕೆ ಜವಾಹರಲಾಲ್ ನೆಹರು ಮತ್ತು ವಲ್ಲಭಭಾಯಿ ಪಟೇಲ್ ನಡೆವಳಿ ಮತ್ತು ಆಲೋಚನೆಗಳಲ್ಲಿ ಭಿನ್ನರಾಗಿದ್ದರೆಂದು ತೋರುತ್ತದೆ. ಅದನ್ನು ದೊಡ್ಡದು ಮಾಡಿ ಅವರಿಬ್ಬರೂ ಬೇರೆ ಬೇರೆ ಧ್ರುವದವರೆಂದು ವ್ಯಾಖ್ಯಾನಿಸುವುದು ಪ್ರಮಾದವೇ ಸರಿ. ಸ್ವಾತಂತ್ರ್ಯ ಹೋರಾಟದ ಅಂತಿಮ ಘಟ್ಟದಲ್ಲಿ ಮತ್ತು ಸ್ವತಂತ್ರ ಭಾರತದ ಮೊದಲ ಪರ್ವಕಾಲದಲ್ಲಿ ಅಲೆಅಲೆಯಾಗಿ ಎದ್ದ ಸಮಸ್ಯೆಗಳನ್ನು ಸಮರ್ಥವಾಗಿ ಎದುರಿಸುವುದರಲ್ಲಿ ಅವರಿಬ್ಬರೂ ಸಮಭಾಗಿಗಳು. ನೆಹರು ಕಾಂಗ್ರೆಸ್ಸಿನ ಸ್ವತ್ತಲ್ಲ, ಪಟೇಲ್ ಮೋದಿಯವರ ಸ್ವತ್ತಲ್ಲ. ಭಾರತದ ಎಲ್ಲ ಪಕ್ಷಗಳವರೂ ಇಬ್ಬರನ್ನೂ ಸಮಾನಸ್ಕಂಧರೆಂದು ಪರಿಗಣಿಸಬೇಕು, ಇಲ್ಲವೇ ಇಬ್ಬರನ್ನೂ ದೂರಮಾಡಿ ತೆಪ್ಪಗಿರಬೇಕು. ನಮ್ಮದೇ ಎಂದು ಹೇಳಿಕೊಳ್ಳುವ ನಮ್ಮ ದೇಶಕ್ಕೆ ಅವರಿಬ್ಬರೂ ಆಧಾರ ಸ್ತಂಭಗಳೆನ್ನುವುದು ಸತ್ಯದ ಮಾತು.

ಹಳೆಯ ಪುಸ್ತಕಗಳ ಅಂಗಡಿಗಳು ಬೆಂಗಳೂರಿನಲ್ಲಿ ವಿಪುಲವಾಗಿವೆ; ಈ ವಿಚಾರದಲ್ಲಿ ಬೆಂಗಳೂರನ್ನು ಮೀರಿಸುವ ಬೇರೊಂದು ನಗರ ನಮ್ಮ ದೇಶದಲ್ಲಿ ಇರುವುದು ಒಂದೇ ಒಂದು. ಬೆಂಗಳೂರಿನ ಅಂತಹ ಅಂಗಡಿಯೊಂದರಲ್ಲಿ ಎ. ಎಸ್. ಅಯ್ಯಂಗಾರ್ ಬರೆದ ಒಂದು ಪುಸ್ತಕ ದೊರೆಯಿತು. ೧೯೫೦ರಲ್ಲಿ ಪ್ರಕಟವಾಗಿದ್ದ ಆ ಪುಸ್ತಕ "ಗಾಂಧಿ ಯುಗದ ಸಮಸ್ತ ಸಂಗತಿಗಳು" ಎಂಬ ಶೀರ್ಷಿಕೆಯನ್ನು ಹೊಂದಿದೆ. ಲೇಖಕರು ಪತ್ರಕರ್ತರಾಗಿ ಚೆಲ್ಮ್ಸ್‌ಫರ್ಡ್ ಎಂಬ ವೈಸ್‌ರಾಯ್‌ನಿಂದ ಹಿಡಿದು ಮುಂದಿನ ಎಲ್ಲ ವೈಸ್‌ರಾಯ್‌ಗಳನ್ನೂ ಸಂದರ್ಶಿಸಿದ್ದರು ಮತ್ತು ರಾಷ್ಟ್ರೀಯ ಚಳುವಳಿಯ ಎಲ್ಲ ಪ್ರಮುಖ ನಾಯಕರನ್ನೂ ಹತ್ತಿರದಿಂದ ಬಲ್ಲವರಾಗಿದ್ದರು. ಪುಸ್ತಕದಲ್ಲಿ ಅವರ ಸಹೋದ್ಯೋಗಿ ಪತ್ರಕರ್ತರ ಬಗ್ಗೆ, ಅಸಹಕಾರ ಚಳುವಳಿ ಬಗ್ಗೆ, ೧೯೩೦ ಮತ್ತು ೧೯೪೦ರ ಮತೀಯ ರಾಜಕಾರಣದ ಬಗ್ಗೆ, ಎರಡನೆಯ ಮಹಾಯುದ್ಧವು ಭಾರತದ ಮೇಲೆ ಬೀರಿದ ಪ್ರಭಾವದ ಬಗ್ಗೆ, ಹೀಗೆ ಹತ್ತಾರು ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಪುಸ್ತಕದ ಒಂದು ಅಧ್ಯಾಯವು "ನೆಹರು ಮತ್ತು ಪಟೇಲ್" ಎಂಬುದಾಗಿದೆ. ಲೇಖಕ ಇಬ್ಬರನ್ನೂ ಮೊದಲಿಗೆ ಸ್ವಾತಂತ್ರ್ಯ ಚಳುವಳಿಯ ನೇತಾರರನ್ನಾಗಿ ಕಂಡಿದ್ದ, ನಂತರ ಪ್ರಧಾನಿ ಮತ್ತು ಉಪಪ್ರಧಾನಿಯಾಗಿ ತಿಳಿದಿದ್ದ. ಅವರ ಒಂದು ಮಾತು ಹೀಗಿದೆ : "ದೇಶದ ಅದೃಷ್ಟ ಎನ್ನಬೇಕು, ಪಂಡಿತ್ ನೆಹರು ಮತ್ತು ಸರ್ದಾರ್ ಪಟೇಲ್ ನಾಯಕರಾಗಿದ್ದಾರೆ. ಅವರಿಬ್ಬರ ವ್ಯಕ್ತಿತ್ವಗಳು ಹೇಗಿವೆಯೆಂದರೆ ಒಬ್ಬರ ಲಕ್ಷಣಗಳು ಇನ್ನೊಬ್ಬರ ಲಕ್ಷಣಗಳಿಗೆ ಪೂರಕವಾಗಿವೆ. ಮಾನವತೆ ಮತ್ತು ವಾಸ್ತವತೆ ಎರಡೂ ಜವಾಹರಲಾಲ್ ಮತ್ತು ವಲ್ಲಭಭಾಯಿ ಅವರಲ್ಲಿ ಪೂರಕಾಂಶಗಳಾಗಿ ಮೇಳೈಸಿವೆ." ಮುಂದುವರಿದು ಅಯ್ಯಂಗಾರ್ ಹೇಳುತ್ತಾರೆ, "ಇಬ್ಬರೂ ಶುದ್ಧ ಹೋರಾಟಗಾರರು; ನೆಹರು ಕ್ರಿಕೆಟ್ ಆಟದಲ್ಲಿ ಸಿಕ್ಸರ್ ಬಾರಿಸುವಂಥವರು, ಪಟೇಲ್ ಒಬ್ಬ ಸೊಗಸಾದ ಬ್ಯಾಟ್ಸ್‌ಮನ್‌ನಂತೆ ಬೌಲರ್‌ಗಳನ್ನು ಚೆನ್ನಾಗಿ ಸತಾಯಿಸಿ ಉತ್ತಮ ಮೊತ್ತದ ರನ್‌ಗಳನ್ನು ಕಲೆಹಾಕುವಂಥವರು." ಇನ್ನೊಂದು ರೂಪಕವನ್ನು ಸೇರಿಸಿದ್ದಾರೆ: "ಇಬ್ಬರೂ ಎರಡು ವಜ್ರಗಳಿದ್ದಂತೆ; ಪಟೇಲ್ ಅಷ್ಟು ಒಪ್ಪವಾಗಿ ಉಜ್ಜಿದ ವಜ್ರದಂತೆ ತೋರುವುದಿಲ್ಲ, ಆದರೆ ಅದು ಅಮೂಲ್ಯವಾದ ವಜ್ರ. ನೆಹರು ತಿದ್ದಿ ತೀಡಲ್ಪಟ್ಟ ವಜ್ರ, ಎಲ್ಲ ಮೂಲೆಗಳೂ ಒಪ್ಪವಾಗಿವೆ, ಹೊಳಪು ಸರ್ವಾಂಗೀಣ."

ಈ ಸಂಬಂಧದಲ್ಲಿ ಇನ್ನೊಂದು ಪುಸ್ತಕ ಈಚೆಗೆ, ಅಂದರೆ ಮಾರ್ಚ್ ೧೯೯೧ರಲ್ಲಿ, ಬಂದಿದೆ. ಅದು ರಾಜಮೋಹನ್ ಗಾಂಧಿ ಬರೆದ ಪಟೇಲ್ ಜೀವನ ಚರಿತ್ರೆ. ಮುನ್ನುಡಿಯಲ್ಲಿ ಅವರ ಮಾತುಗಳಿವು : "ಸ್ವತಂತ್ರ ಭಾರತವು ಅಸ್ತಿತ್ವಕ್ಕೆ ಬಂದು ಸ್ಥಾನಮಾನ ಮತ್ತು ಪ್ರಾಬಲ್ಯ ಗಳಿಸುವುದರಲ್ಲಿ ಮೂವರ ಮಹತ್ತರ ಶ್ರಮವು ಗಣನೀಯವಾದ್ದು; ಗಾಂಧಿ, ನೆಹರು ಮತ್ತು ಪಟೇಲ್."

**ರಾಮಚಂದ್ರ ಗುಹ**

ತಮ್ಮ ಸ್ವಂತದ ಕಾರಣಗಳಿಗೆ ನೆಹರು ಮತ್ತು ಪಟೇಲ್ ಅವರನ್ನು ದಾಳಗಳನ್ನಾಗಿ ಮಾಡಿಕೊಳ್ಳುವವರು ವಾಸ್ತವವನ್ನು ಅದಿರುವಂತೆ ಗ್ರಹಿಸುವುದಿಲ್ಲ. ಅವರಿಬ್ಬರಲ್ಲಿ ಯಾರೋ ಒಬ್ಬರು ದೇಶದ ದೃಷ್ಟಿಯಿಂದ ಹೆಚ್ಚು ಮಹತ್ವದವರೆಂದು ಹೇಳುವಾಗ ಇವರು ತಮ್ಮ ಬೇಳೆ ಬೇಯಿಸಿಕೊಳ್ಳಲು ತವಕಿಸುತ್ತಿರುತ್ತಾರೆಂಬುದು ಸೂರ್ಯ ಸ್ಪಷ್ಟ . ಇಂತಹ ಕ್ಷುಲ್ಲಕ ರಾಜಕೀಯವು ಇಬ್ಬರನ್ನೂ ಕುಬ್ಜವಾಗಿಸುತ್ತದೆ, ಪರಸ್ಪರ ಅಸೂಯಾಪರರನ್ನಾಗಿಸುತ್ತದೆ. ನಿಜವಾಗಿ ಇಬ್ಬರೂ ಒಬ್ಬರಿಗೊಬ್ಬರು ಪೂರಕ ಶಕ್ತಿಗಳಾಗಿದ್ದವರು. ಖ್ಯಾತ ಇತಿಹಾಸತಜ್ಞ ರಾಮಚಂದ್ರ ಗುಹ ಅದನ್ನು ಸಾಧಾರವಾಗಿ ನಿರೂಪಿಸಿದ್ದಾರೆ.



ಹೀಗೆನ್ನುವ ಲೇಖಕರಿಗೆ ಒಂದು ಅಳುಕಿದೆ: "ನೆಹರು ಮತ್ತು ಗಾಂಧಿ ಅವರ ಕಾಣಿಕೆಯನ್ನು ಪೂರ್ಣಪ್ರಮಾಣದಲ್ಲಿ ಮಾನ್ಯಮಾಡುವವರು ಪಟೇಲರ ಬಗ್ಗೆ ಅದೇಕೋ ಜಿಪುಣತನ ಪ್ರದರ್ಶಿಸುತ್ತಾರೆ." ೧೯೮೯ರಲ್ಲಿ ನಡೆದ ನೆಹರು ಶತಮಾನೋತ್ಸವ ಸಂದರ್ಭದಲ್ಲಿ ಅದೆಷ್ಟು ಅದ್ದೂರಿ ಇತ್ತು; ಸಭೆಗಳು, ದೂರದರ್ಶನದಲ್ಲಿ ಸರಣಿ ಕಾರ್ಯಕ್ರಮಗಳು, ಉತ್ಸವಗಳು, ಇತ್ಯಾದಿ. ಆದರೆ ಪಟೇಲ್ ಜನ್ಮಶತಮಾನೋತ್ಸವವು ೧೯೭೫ರ ಅಕ್ಟೋಬರ್ ೩೧ರಂದು ಕೂಡಿ ಬಂತು. ಆಗ ತುರ್ತುಪರಿಸ್ಥಿತಿಯ ಕಾಲ. ಪಟೇಲ್‌ರ ಸ್ಮರಣೆಯಾಯಿತೇ ವಿನಾ ಅದ್ದೂರಿ ಸಮಾರಂಭಗಳೇನೂ ಇರಲಿಲ್ಲ.



ಈಚಿನ ವರ್ಷಗಳಲ್ಲಿ ನೆಹರು – ಪಟೇಲ್ ವ್ಯಕ್ತಿತ್ವಗಳಲ್ಲಿರುವ ಸಹಜ ಭಿನ್ನತೆಯನ್ನು ಉತ್ಪ್ರೇಕ್ಷಿಸಿ ಕೆಲವು ಸಿದ್ಧಾಂತಿಗಳು ಅವರಿಬ್ಬರ ನಡುವೆ ಎಂಥದೋ ರಾಜಕೀಯ ಸ್ಪರ್ಧೆ ಇದ್ದಿತು, ಅವರು ಎದುರಾಳಿಗಳಾಗಿದ್ದರು, ಎಂದು ಹೇಳುತ್ತಾ ಬಂದಿದ್ದಾರೆ. ನೆಹರು ಪರವಾಗಿರುವವರ ಪ್ರಕಾರ ನೆಹರು ಪಟೇಲರನ್ನು ಮತೀಯವಾದಿಯೆಂದು ಜರಿದಿದ್ದರು ಮತ್ತು ಪಟೇಲ್ ಪರವಾಗಿರುವವರ ಪ್ರಕಾರ ನೆಹರು ವಿದೇಶಾಂಗ ನೀತಿಯ ನೆಲೆಯಲ್ಲಿ ಅನೇಕ ತಪ್ಪುಗಳನ್ನೆಸಗಿದ್ದಾರೆ. ಕೆಲವರು ಇನ್ನೂ ಮುಂದೆ ಹೋಗಿ ಅವರಿಬ್ಬರಲ್ಲಿ ಪರಸ್ಪರ ಅಪನಂಬಿಕೆಗಳಿದ್ದುವೆಂದು ಹೇಳುತ್ತಾರೆ. ನೆಹರು ಪರವಾಗಿರುವವರು ಪಟೇಲ್ ಅವರನ್ನು ಶ್ಲಾಘಿಸದಿರುವುದರಿಂದ ಭಾರತ ಜನತಾ ಪಕ್ಷವು ಅವರನ್ನು ಶ್ಲಾಘಿಸಲು ಮುಂದಾಯಿತು. ಇದೊಂದು ವಿಪರ್ಯಾಸ, ಏಕೆಂದರೆ ಪಟೇಲ್ ಜೀವನದುದ್ದಕ್ಕೂ ಕಾಂಗ್ರೆಸ್‌ನವರಾಗಿದ್ದರು. ನೆಹರು–ಪಟೇಲ್ ನಡುವಣ ತಥಾಕಥಿತ ಸ್ಪರ್ಧೆ ಯಾವ ಹಂತ ತಲುಪಿತೆಂದರೆ ಕಳೆದ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ಭಾರತೀಯ ಜನತಾ ಪಕ್ಷವು "ಡಿಸೆಂಬರ್ ೧೯೫೦ರಲ್ಲಿ ಪಟೇಲರು ಗತಿಸಿದಾಗ ನೆಹರು ಪಟೇಲರ ಅಂತ್ಯಕ್ರಿಯೆಗೆ ಸಹ ಹೋಗಿರಲಿಲ್ಲ" ಎಂಬ ಅಪಪ್ರಚಾರ ಕೈಗೊಂಡಿತ್ತು.

ಅವರಿಬ್ಬರೂ ಎದುರಾಳಿಗಳಾಗಿದ್ದರೆಂಬ ಮಿಥ್ಯೆಯನ್ನು ಅಯ್ಯಂಗಾರ್ ಸಾರಾಸಗಟಾಗಿ ತಳ್ಳಿ ಹಾಕಿದ್ದಾರೆ. ಇಬ್ಬರನ್ನೂ ಬಲ್ಲವರಾಗಿದ್ದ ಅವರು ೧೯೪೭ರಿಂದ ೫೦ರ ವರೆಗಿನ ಅವಧಿಯಲ್ಲಿ ಇಬ್ಬರೂ ಒಟ್ಟಾಗಿ ಹೇಗೆ ಹಂಚಿ ಹೋಳಾಗಿದ್ದ ದೇಶವನ್ನು ಐಕ್ಯಗೊಳಿಸಿದರೆಂಬುದನ್ನು ವಿಶದೀಕರಿಸಿದ್ದಾರೆ. ಅವರ ಮಾತುಗಳು ಹೀಗಿವೆ: "ಪರಸ್ಪರ ಪೂರಕವಾಗಿದ್ದರೇ ವಿನಾ ಅವರು ವಿರೋಧಿಗಳಾಗಿರಲಿಲ್ಲ. ವೈರುಧ್ಯದ ಲಕ್ಷಣಗಳು ಇಬ್ಬರಲ್ಲೂ ಇರಲಿಲ್ಲ. ದೇಶದ ಸಮಸ್ಯೆಗಳನ್ನು ಸಮಗ್ರವಾಗಿ ಗ್ರಹಿಸುವುದರಲ್ಲಿ ಮತ್ತು ಅವಕ್ಕೆ ಪರಿಹಾರ ಕಂಡುಕೊಳ್ಳುವಲ್ಲಿ ಇಬ್ಬರೂ ಸಮರ್ಥರೇ. ಹಾಗಾಗಿ ಉದ್ಭವಿಸುತ್ತಿದ್ದ ಸಮಸ್ಯೆಗಳನ್ನೆದುರಿಸುವುದರಲ್ಲಿ ಇಬ್ಬರೂ ಎತ್ತಿದ ಕೈಗಳೇ. ನೆಹರು ಸ್ವತಃ ಹೇಳುವಂತೆ ಸರ್ದಾರ್ ಪಟೇಲ್ ಅವರನ್ನು ಸಂಧಿಸದ ಒಂದು ದಿನವೂ ಅವರಿಗಿರಲಿಲ್ಲ. ಸರ್ಕಾರದ ನೀತಿ ಮತ್ತು ಆಡಳಿತ ಕ್ರಮವನ್ನು ಸದಾ ಜೊತೆಯಾಗಿ ಪರಿಶೀಲಿಸುತ್ತಿದ್ದರು. ಒಬ್ಬರ ಅಭಿಪ್ರಾಯ ಪಡೆಯದೆ ಇನ್ನೊಬ್ಬರು ಎಂದೂ ಏಕಪಕ್ಷೀಯವಾಗಿ ತೀರ್ಮಾನ ಕೈಗೊಂಡಿದ್ದಿಲ್ಲ. ಇಂತಹ ಇಬ್ಬರು ಜೊತೆಯಾದ್ದು ದೇಶದ ಪ್ರಗತಿಗೆ ಉಪಯುಕ್ತವಾಯಿತು, ರಾಜಕಾರಣಿಗಳ ಒಂದು ವಿಭಾಗಕ್ಕೆ ತೀವ್ರ ನಿರಾಸೆಯೂ ಉಂಟಾಯಿತು." ರಾಜಕಾರಣಿಗಳ ಅಂತಹ ವೈಮನಸ್ಯ ಮುಂದುವರಿದಿದೆ, ಏಕೆಂದರೆ ಇಂದಿರಾ ಗಾಂಧಿಯವರ ಅನುಯಾಯಿಗಳು ಪಟೇಲ್ ಅವರ ಕೊಡುಗೆಗಳನ್ನು ನಗಣ್ಯವೆಂದು ಭಾವಿಸುತ್ತಾರೆ ಮತ್ತು ನರೇಂದ್ರ ಮೋದಿ ಹಾಗೂ ಭಾಜಪ "ದೇಶ ಕಟ್ಟುವ ಕೆಲಸ ಮಾಡಿದ ಇಬ್ಬರ ನಡುವೆ ತಿಕ್ಕಾಟವಿದ್ದಿತು" ಎಂದು ಸಾರುತ್ತಾರೆ.

ಅಯ್ಯಂಗಾರ್ ದೃಷ್ಟಿಯಲ್ಲಿ ನೆಹರು ದೂರದರ್ಶಿ ಮತ್ತು ಆದರ್ಶವಾದಿ; ಪಟೇಲ್ ವಾಸ್ತವತಾವಾದಿ ಮತ್ತು ವ್ಯವಹಾರಸ್ಥ. ನವೀನ ಭಾರತಕ್ಕೆ ಎರಡೂ ವಿಧದ ವ್ಯಕ್ತಿಗಳ ಅವಶ್ಯಕತೆ ಇತ್ತು. ವಾಸ್ತವವಾದಿ ಮತ್ತು ಆದರ್ಶವಾದಿ ಜೊತೆಯಲ್ಲಿ ಕೆಲಸ ಮಾಡುವುದು ಉಪಯುಕ್ತ. ಮಹಿಳೆಯರಿಗೆ ಮತ್ತು ಅಲ್ಪಸಂಖ್ಯಾತರಿಗೆ ಸಮಾನ ಹಕ್ಕುಗಳ ಆಶ್ವಾಸನೆ ನೀಡುವ ನೆಹರು ಮತ್ತು ರಾಜರ ಆಳ್ವಿಕೆಯಲ್ಲಿದ್ದ ಪ್ರದೇಶಗಳನ್ನು ಭಾರತದಲ್ಲಿ ವಿಲೀನಗೊಳಿಸುವ ಪಟೇಲ್ ಇಬ್ಬರೂ ಬೇಕು. ಭಿನ್ನ ವ್ಯಕ್ತಿತ್ವ ಹೊಂದಿದ್ದ ಅವರನ್ನು ಆ ಪರ್ವಕಾಲದಲ್ಲಿ ಬೆಸೆದ ಅಂಶವಾದರೂ ಯಾವುದು ? ದೇಶಭಕ್ತಿ, ದೇಶದ ಐಕ್ಯತೆ ಮತ್ತು ಗಾಂಧೀಜಿ ಪ್ರಣೀತ ಧ್ಯೇಯಗಳು. "ಇಬ್ಬರೂ ಅವಿರತವಾಗಿ ದುಡಿಯುವಂಥವರು, ಇಬ್ಬರಿಗೂ ವಿರಾಮದ ಗೊಡವೆ ಇಲ್ಲ", ಎನ್ನುತ್ತಾರೆ ಅಯ್ಯಂಗಾರ್. ಸ್ವಾತಂತ್ರ್ಯ ಪಡೆದ ಎರಡೂವರೆ ವರ್ಷಕ್ಕೆ ಪಟೇಲ್ ನಿಧನರಾದದ್ದು ಬಹುಶಃ ಅವರ ಪ್ರಭೆಯ ಗುರುತಿಸುವಿಕೆಗೆ ಅಡ್ಡಿಯುಂಟುಮಾಡಿತು.

ಕಳೆದ ಚುನಾವಣಾ ಪ್ರಚಾರದ ಸಮಯದಲ್ಲಿ ನರೇಂದ್ರ ಮೋದಿಯವರು ಪಟೇಲ್ ಅವರನ್ನು ಉದಾತ್ತ 'ಹೀರೋ' ಮಾಡುವ ಸಂಭ್ರಮದಲ್ಲಿ ಕಾಂಗ್ರೆಸ್ ಬೇಕೆಂದೇ ಪಟೇಲ್ ಅವರ ಘನತೆಯನ್ನು ಮರೆಮಾಚಿತೆಂದು ಆಪಾದಿಸಿದರು, ಪಟೇಲ್ ಅವರ ಬೃಹತ್ ಪ್ರತಿಮೆ ನಿರ್ಮಿಸುವ ಅವರ ಆಶಯವನ್ನು ವ್ಯಕ್ತಪಡಿಸಿದರು. ಅಷ್ಟೇ ಅಲ್ಲ, ಪಟೇಲ್ ಪ್ರಧಾನಿಯಾಗಿದ್ದಿದ್ದರೆ ದೇಶವು ಉತ್ತಮವಾದ ಜಾಡಿನಲ್ಲಿ ಕ್ರಮಿಸುತ್ತಿತ್ತು, ಎಂದು ಸಹ ಹೇಳಿದರು. ಆದರೆ ಅವರ ಹೇಳಿಕೆಗಳಲ್ಲಿ ಚಾರಿತ್ರಿಕ ವ್ಯಂಗ್ಯವೊಂದು ಎದ್ದುಕಾಣುತ್ತದೆ: ಪಟೇಲ್ ಸದಾ ಕಾಂಗ್ರೆಸ್ಸಿಗ ಮತ್ತು ಗೃಹಸಚಿವರಾಗಿ ಆರ್‌ಎಸ್‌ಎಸ್‌ಅನ್ನು ನಿಷೇಧಿಸಿದವರು ಅವರು. ಅದು ಗಾಂಧೀಜಿ ಹತ್ಯೆಯ ನಂತರದ ವಿದ್ಯಮಾನ.

ಹರಿಯಾಣದಲ್ಲಿ ಇತ್ತೀಚೆಗೆ ನಡೆದ ಚುನಾವಣೆಯ ಸಂದರ್ಭದಲ್ಲಿ ಪ್ರಧಾನಿ ಮೋದಿಯವರು ನೆಹರು ಅವರ ವರ್ಚಸ್ಸನ್ನು ಶ್ಲಾಘಿಸಿದರು. ಅದು ಕಡೆಯ ಶ್ಲಾಘನೆಯಾಗದಿರಲೆಂದು ಆಶಿಸೋಣ. ಪಟೇಲ್ ಅವರನ್ನು ಕಾಂಗ್ರೆಸ್ ಬಹುಕಾಲ ಒತ್ತಟ್ಟಿಗಿಟ್ಟಿದ್ದಿತೆಂಬುದು ನೆಹರು ಅವರನ್ನು ಅವಗಣಿಸಲು ಭಾಜಪಕ್ಕೆ ಸಮಂಜಸ ಕಾರಣವಾಗಲಾರದು. ಮತಧರ್ಮಗಳ ನಡುವಿನ ಸಾಮರಸ್ಯ, ಸ್ವತಂತ್ರವಾದ ವಿದೇಶಾಂಗ ನೀತಿಯನ್ನು ರೂಪಿಸಿದ್ದು, ಭಾರತದ ಆರ್ಥಿಕ ಸುಭದ್ರತೆಗಾಗಿ ತಾಂತ್ರಿಕ ಮತ್ತು ಔದ್ಯಮಿಕ ಅಡಿಪಾಯ ಹಾಕಿದ್ದು, ಇವೆಲ್ಲಾ ನೆಹರು ಹಾಕಿಕೊಟ್ಟ ಬುನಾದಿ. ರಾಜರ ಆಳ್ವಿಕೆಯನ್ನು ತೊಲಗಿಸಿ ಐಕ್ಯ ಭಾರತದ ರಚನೆಗೆ ಮುಂದಾಗಿದ್ದು, ಆಧುನಿಕ ಆಡಳಿತ ಯಂತ್ರವನ್ನು ಸಜ್ಜುಗೊಳಿಸಿದ್ದು, ಸಂವಿಧಾನದಲ್ಲಿ ವಿರೋಧಾಭಿಪ್ರಾಯಗಳನ್ನು ಸಮನ್ವಯಗೊಳಿಸಿದ್ದು, ಇವು ಪಟೇಲ್ ಅವರ ಸಾಧನೆ.

ಒಟ್ಟಿನಲ್ಲಿ ತೂಗಿನೋಡುವುದಾದರೆ, ಪ್ರಸ್ತುತ ಲೇಖಕ ಅಯ್ಯಂಗಾರ್ ತಾಳಿದ ನಿಲುವನ್ನು ಸಮರ್ಥಿಸುತ್ತಾನೆ. ಅಯ್ಯಂಗಾರ್ ಅವರಂತೆ ನಾನು ಸಹ ಒಬ್ಬ ಕ್ರಿಕೆಟ್ ಪ್ರೇಮಿ. ೧೯೭೦ರ ದಶಕದಲ್ಲಿ ಗವಾಸ್ಕರ್‌ನನ್ನು ಮೆರೆಸಿ ವಿಶ್ವನಾಥ್‌ಅನ್ನು ತೆಗಳುವ ಒಂದು ಸಂಪ್ರದಾಯವಿತ್ತು; ಇಲ್ಲವೇ, ವಿಶ್ವನಾಥ್‌ಅನ್ನು ಹೊಗಳಿ ಗವಾಸ್ಕರ್‌ನನ್ನು ತೆಗಳುವುದು. ನಾನಾದರೋ ಇಬ್ಬರನ್ನೂ ಏಕ ಪ್ರಕಾರವಾಗಿಯೇ ಮೆಚ್ಚುತ್ತಿದ್ದೆ. ನಂತರ ಬಂದಿದ್ದು ದ್ರಾವಿಡ್ ಮತ್ತು ತೆಂಡುಲ್ಕರ್ ಕಾಲ. ನಾನು ಅವರಿಬ್ಬರಲ್ಲಿ ಯಾರು ಉತ್ತಮ ಎನ್ನುವ ಪ್ರಶ್ನೆಗೆ ಓಗೊಡಲಿಲ್ಲ; ಬದಲಾಗಿ, ಇಬ್ಬರನ್ನೂ ಆಪ್ತವಾಗಿ ಕಂಡೆ. ಕ್ರಿಕೆಟ್ ಆಟದಲ್ಲಿ ಅಗತ್ಯವಾಗುವ ಸಾಮಂಜಸ್ಯಕ್ಕೆ ಸಾವಿರ ಪಟ್ಟು ಹೆಚ್ಚು ಮುಖ್ಯವಾದ್ದು ನೆಹರು ಮತ್ತು ಪಟೇಲ್ ಅವರ ನಡುವಣ ಸಾಮರಸ್ಯ. ಒಬ್ಬರನ್ನು ಅತಿಯಾಗಿ ಮೇಲಕ್ಕೆತ್ತಿ ಇನ್ನೊಬ್ಬರನ್ನು ಕುಬ್ಜವಾಗಿಸಹೊರಡುವ ಪದ್ಧತಿ ಅನಾರೋಗ್ಯಕರವಾದ್ದು. ಅವರಿಬ್ಬರ ಘನತೆಯ ಸ್ಮೃತಿಗೆ ಅದು ಕಳಂಕ ಉಂಟುಮಾಡುತ್ತದೆ. ಅದು ಭಾರತವನ್ನು ಕುಬ್ಜಗೊಳಿಸುತ್ತದೆ ಕೂಡ.

**ರಾಮಚಂದ್ರ ಗುಹ**
ಇತಿಹಾಸ ತಜ್ಞ, ಲೇಖಕ ಮತ್ತು ಸಮಕಾಲೀನ ಸಂಗತಿಗಳ ವಿಶ್ಲೇಷಕ, ಬೆಂಗಳೂರು



ಪೂರ್ಣ ಪ್ರಮಾಣದ ಅಂಡಮಾನ್ ಜೈಲಿನ ಮಾದರಿ ಚಿತ್ರದ ಒಂದು ನೋಟ



ಅಂಡಮಾನ್ ಜೈಲಿನ ಒಂದು ನೋಟ

# ಅಂಡಮಾನ್ ಜೈಲುಗಳಲ್ಲಿ ಕನ್ನಡ ನಾಡಿನ ಸ್ವಾತಂತ್ರ್ಯ ಹೋರಾಟಗಾರರು

ನಮ್ಮ ದೇಶದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗೆರಿಲ್ಲಾ ಮಾದರಿಯ ಹೋರಾಟಗಳಲ್ಲಿ ಭಾಗವಹಿಸಿದ ಹಲವರ ಮೇಲೆ ಸರ್ಕಾರವನ್ನು ಬುಡಮೇಲು ಮಾಡುವ ಆರೋಪ ಹೊರಿಸಿ ಬಂಧಿಸಲಾಯಿತು. ಸ್ಥಳೀಯ ಬ್ರಿಟಿಷ್ ನ್ಯಾಯಾಲಯಗಳಿಗೆ ಎಳೆದುತಂದು ಜೀವಾವಧಿ ಶಿಕ್ಷೆ ವಿಧಿಸಿ ಹಲವರನ್ನು ಅಂಡಮಾನ್ ಜೈಲುಗಳಿಗೆ ಗಡೀಪಾರು ಮಾಡಲಾಯಿತು. ಪೋರ್ಟ್ ಬ್ಲೇರ್‌ನಲ್ಲಿರುವ ೬೦೦ ಖೈದಿಗೂಡುಗಳ ಸೆಲ್ಯೂಲರ್ ಬೃಹತ್ ಬಂಧೀಖಾನೆಯನ್ನು ಕಟ್ಟಿದ್ದು ೧೯೦೬ರಲ್ಲಿ. ಈ ಮೊದಲಿಗೆ ಜೀವಾವಧಿ ಶಿಕ್ಷೆಗೊಳಗಾದ ಖೈದಿಗಳನ್ನು ವೈಪರ್ ದ್ವೀಪದ ಸೆರೆಮನೆಗಳಲ್ಲೂ ರಾಸ್ ದ್ವೀಪಗಳಲ್ಲೂ ಅದಕ್ಕೂ ಹಿಂದೆ ದಟ್ಟ ಕಾಡುಗಳ "ಬಯಲು ಬಂದೀಖಾನೆ"ಗಳಲ್ಲೂ ಬಂಧಿಗಳಾಗಿ ಇಡಲಾಗುತ್ತಿತ್ತು; ನಿರ್ದಯೆಯಿಂದ ಹಲವು ರೀತಿಯ ಹಿಂಸೆಗಳನ್ನು ನೀಡಿ ದುಡಿಸಿಕೊಳ್ಳಲಾಗುತ್ತಿತ್ತು.

ಪ್ರೊ॥ ಬಿ. ಗಂಗಾಧರಮೂರ್ತಿ

ಅಂಡಮಾನ್ ದ್ವೀಪಗಳಿಗೆ ಪ್ರವಾಸ ಹೋಗುವವರು ಸಾಮಾನ್ಯವಾಗಿ ಅಲ್ಲಿನ ಹವಳ ತುಂಬಿದ ಸಮುದ್ರ ತೀರಗಳನ್ನು ಕಣ್ತುಂಬಿಸಿಕೊಳ್ಳಲು ಹೋಗುತ್ತಾರೆ. ಕೆಲವರು ಬೋಟಿಂಗ್, ಸಮುದ್ರದ ತಳದಲ್ಲಿ ನಡೆದಾಡುವ ಅಥವಾ ಸ್ಕೂಬಾ ಡೈವಿಂಗ್‌ನಂತಹ ಸಾಹಸ ಜಲಕ್ರೀಡೆಗಳನ್ನು ಸವಿಯುವ ಕನಸನ್ನು ಬೆನ್ನಿಗೆ ಕಟ್ಟಿಕೊಂಡು ಹೋಗುತ್ತಾರೆ. ಮತ್ತೆ ಕೆಲವರು ಅಲ್ಲಿನ ಸಮುದ್ರದಿಂದ ಸುತ್ತುವರಿದ ದ್ವೀಪಗಳ ನಿಬ್ಬೆರಗೆನಿಸುವ ನಿಸರ್ಗ ಸೌಂದರ್ಯವನ್ನು ಸವಿಯಲು ಹೋದರೆ, ಕರೀಕಲ್ಲಿನ ಆಳೆತ್ತರದ ಬೆತ್ತಲೆ/ಅರೆಬೆತ್ತಲೆ ಗೊಂಬೆಗಳಂತೆ ಕಾಡಿನಲ್ಲಿ ಆಕಸ್ಮಿಕವೆಂಬಂತೆ ಜರವಾ ರಿಸರ್ವ್‌ನಲ್ಲಿ ಕಾಣಿಸಿಕೊಳ್ಳುವ ಜರವಾ ಹೆಣ್ಣು–ಗಂಡುಗಳನ್ನು (ಪ್ರಾಣಿಸಂಗ್ರಹಾಲಯದಲ್ಲಿ ಪ್ರದರ್ಶನಕ್ಕಿಟ್ಟ ಅಸಹಾಯಕ ಪ್ರಾಣಿಗಳನ್ನು ವೀಕ್ಷಿಸುವವರ ಕುತೂಹಲದಿಂದ) ನೋಡಲು ಹೋಗುವವರೂ ಇದ್ದಾರೆ.

ಸಾಗರದಿಂದ ಸುತ್ತುವರಿದು ಹವಳದ ನೆಕ್‌ಲೇಸ್ ಕಟ್ಟಿದಂತಿರುವ ದ್ವೀಪಸಮೂಹಗಳ ಮನಮೋಹಕ ನಿಸರ್ಗಲೋಕದ ವೀಕ್ಷಣೆ, ಸಾಹಸ, ಮೋಜು ಇವುಗಳ ನಡುವೆ ಪೋರ್ಟ್ ಬ್ಲೇರ್‌ನಲ್ಲಿರುವ ಸೆಲ್ಯೂಲರ್ ಜೈಲು ಅಂಡಮಾನ್ ಪ್ರವಾಸಿಗರಿಗೆ ಒಂದು ಅಫಿಷಿಯಲ್ ವಿಸಿಟಿಂಗ್ ಐಟಂ. ಅಂಡಮಾನ್‌ಗೆ ಹೋದ ಕೆಲವು ಕನ್ನಡ ಬರಹಗಾರರು ಕೂಡ ಕ್ಯಾಶುಅಲ್ ಎಂಬಂತೆ ಇದರ ಬಗ್ಗೆ ಒಂದೆರಡು ವಾಕ್ಯಗಳನ್ನು ಬರೆದಿರುವುದನ್ನು ಬಿಟ್ಟರೆ ಅಂಡಮಾನ್ ಜೈಲುಗಳಿಗೂ ಕರ್ನಾಟಕಕ್ಕೂ ಇರುವ ಸಂಬಂಧದ ಬಗ್ಗೆ ಬರೆದಿರುವುದು ಕಂಡುಬರುವುದಿಲ್ಲ. ರಾಷ್ಟ್ರೀಯ ಸ್ಮಾರಕವಾಗಿರುವ ಈ ಜೈಲಿನಲ್ಲಿ ದೇಶದ ಇತರ ಎಲ್ಲ ಭಾಗಗಳಿಂದ ಗಡೀಪಾರಾಗಿ ಇಲ್ಲಿ ಜೈಲುವಾಸ ಅನುಭವಿಸಿದವರ ನೂರಾರು ಹೆಸರುಗಳನ್ನು ಕೆತ್ತಿರುವ ಅಮೃತಶಿಲೆಯ ಫಲಕಗಳಿದ್ದರೂ ಕನ್ನಡ ನಾಡಿನ ಸ್ವಾತಂತ್ರ್ಯ ಹೋರಾಟಗಾರರ ಒಂದು ಹೆಸರೂ ಕಾಣದಿರುವುದು ಬೇಸರ ತರುವ ಸಂಗತಿ ಎಂದು ಇತ್ತೀಚೆಗೆ ದ್ವೀಪಸಮೂಹಕ್ಕೆ ಪ್ರವಾಸ ಕೈಗೊಂಡಿದ್ದ ಲೇಖಕಿ ಡಾ॥ ಎಚ್. ಎಸ್. ಅನುಪಮಾ ಬರೆದಿದ್ದಾರೆ. ಕನ್ನಡ ಪತ್ರಿಕೆಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳೂ ಅಂಡಮಾನ್ ಬಗ್ಗೆ ಪ್ರವಾಸಿ ದೃಷ್ಟಿಕೋನದಿಂದ ಮಾತ್ರ ಬರೆದವೇ ಆಗಿವೆ. ಹೀಗಾಗಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಅಂಡಮಾನ್ ಜೈಲುಗಳಲ್ಲಿ ಪ್ರಾಣಾಂತಿಕ ಹಿಂಸೆಗೆ ಬಲಿಯಾದ ಕನ್ನಡ ನಾಡಿನ ಸ್ವಾತಂತ್ರ್ಯ







ಹೋರಾಟಗಾರರ ಬಗ್ಗೆ ಏನೊಂದು ಮಾಹಿತಿಯೂ ನಮಗೆ ದೊರೆಯುವುದಿಲ್ಲ. ಹಾಗಾದರೆ ಕನ್ನಡ ನಾಡಿನಿಂದ ಯಾರೂ "ಕಾಲಾಪಾನಿ" ಶಿಕ್ಷೆಗೆ ಒಳಗಾಗಲಿಲ್ಲವೇ ಎಂದೆನಿಸುವುದು ಸ್ವಾಭಾವಿಕವೇ ಆಗಿದೆ.

೧೮ನೇ ಶತಮಾನದ ಉತ್ತರಾರ್ಧದಿಂದಲೇ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸೈನ್ಯದ ವಿರುದ್ಧ ಇಡೀ ಉಪಖಂಡದಲ್ಲಿ ಬಿಡಿಬಿಡಿಯಾಗಿ ಕೆಲವು ರಾಜರುಗಳು, ಮಾಂಡಲಿಕರು, ಸರದಾರರು ಮತ್ತು ಪ್ರಾಂತೀಯ ಅಧಿಪತಿಗಳು ಹೋರಾಟ ನಡೆಸುತ್ತಿದ್ದರು. ಕೆಲವು ಪ್ರಾಂತ್ಯಗಳಲ್ಲಿ ಇವರುಗಳು ಮುಂಚೂಣಿ ಸಖ್ಯ ಬೆಳೆಸಿಕೊಂಡು ಹೋರಾಟಗಳನ್ನು ನಡೆಸಿರುವ ಉದಾಹರಣೆಗಳೂ ಇವೆ. ಆದರೆ ೧೯ನೇ ಶತಮಾನದ ಹೋರಾಟಗಳು ಬ್ರಿಟಿಷರ ವಿರುದ್ಧದ ಬಂಡಾಯಗಳಾಗಿಯೋ ರಾಜಕೀಯ ಕ್ರಾಂತಿಗಳಾಗಿಯೋ ರೈತರನ್ನು ಮತ್ತು ಆದಿವಾಸಿಗಳನ್ನು ಒಳಗೊಂಡಂತೆ ಊಳಿಗಮಾನ್ಯ ಸಮಾಜದ ವಿವಿಧ ಕ್ಷೇತ್ರಗಳ ಜನರನ್ನು ಸಂಘಟಿಸಿ ಗೆರಿಲ್ಲಾ ಕಾರ್ಯತಂತ್ರದಲ್ಲಿ ಸಿಡಿದೇಳುತ್ತಿದ್ದವು. ಹಾಗೆಯೇ ಕಂಪೆನಿ ಸೈನ್ಯದಲ್ಲಿದ್ದ ದೇಶೀಯ ಸಿಪಾಯಿಗಳಲ್ಲಿ ಅಸಮಾಧಾನ ಮತ್ತು ರೊಚ್ಚು ಹೊಗೆಯಾಡುತ್ತಿತ್ತು. ಪ್ರದೇಶದಿಂದ ಪ್ರದೇಶಕ್ಕೆ ಹರಡುತ್ತಿದ್ದ ಈ ಅಸಮಾಧಾನ, ರೊಚ್ಚು ಮತ್ತು ಹೋರಾಟಗಳು ಬ್ರಿಟಿಷರಿಗೆ ಬೃಹತ್ ಪ್ರಮಾಣದ ಸಮಸ್ಯೆಯಾಗಿಬಿಟ್ಟಿದ್ದವು. ಹೋರಾಟಗಾರರನ್ನು ಸದೆಬಡಿದಷ್ಟೂ ಹೋರಾಟಗಳು ಮತ್ತಷ್ಟು ತೀವ್ರವಾಗಿ, ವ್ಯಾಪಕವಾಗಿ ಪುಟಿದೇಳುತ್ತಿದ್ದವು. ಉತ್ತರ ಭಾರತದಲ್ಲಂತೂ ನಿಯಂತ್ರಣಕ್ಕೆ ಸಿಗದ ಪ್ರಮಾಣದಲ್ಲಿ ಬಂಡಾಯಗಳು ಸೈನ್ಯದಲ್ಲೂ ಸೈನ್ಯದ ಹೊರಗೂ ಕಾಣಿಸಿಕೊಂಡವು. ೧೮೫೭ರ ಸರಣಿ ಬಂಡಾಯಗಳಂತೂ ಸುಮಾರು ೧೯೦ ವರ್ಷಗಳ ಸುದೀರ್ಘ ಇತಿಹಾಸವಿರುವ ಭಾರತದ ಸ್ವಾತಂತ್ರ್ಯ ಹೋರಾಟದ ಅತ್ಯಂತ ಪ್ರಮುಖ ಅಧ್ಯಾಯವೆಂದು ಇತಿಹಾಸಕಾರರು ಗುರುತಿಸಿದ್ದಾರೆ.

ಸೈನಿಕ ಬಂಡಾಯವೆಂದು ಬ್ರಿಟಿಷರು ಕರೆದ ೧೮೫೭ರ ನಮ್ಮ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವು ಕಂಪೆನಿ ಮತ್ತು ಅದರ ವ್ಯಾಪಾರಿ ಆಸಕ್ತಿಯನ್ನು ಪೋಷಿಸುತ್ತಿದ್ದ ಬ್ರಿಟಿಷರಿಗೆ ಮುಂಬರಲಿರುವ ಆಪತ್ತಿನ ಸೂಚನೆಯನ್ನು ನೀಡಿತ್ತು. ೧೮೫೮ರಲ್ಲಿ ಬ್ರಿಟಿಷ್ ಸರ್ಕಾರವು ಸಂಕಷ್ಟದಲ್ಲಿ ಸಿಲುಕತೊಡಗಿದ್ದ ಕಂಪೆನಿಯ ಅಧಿಕಾರ ಮತ್ತು ಆಡಳಿತ ಸ್ವಾಮ್ಯವನ್ನು ನಿರ್ವಹಿಸಲು ಮುಂದಾಯಿತು. ಜೊತೆಗೆ ಕಂಪೆನಿಯ ಅಧೀನದಲ್ಲಿದ್ದ ಇಡೀ ಬ್ರಿಟಿಷ್ ಹಾಗೂ ಭಾರತೀಯ ಸೈನ್ಯವನ್ನು ರಾಚನಿಕವಾಗಿ ಮಾರ್ಪಡಿಸಿ ತಮ್ಮ ಹತೋಟಿಗೆ ತೆಗೆದುಕೊಂಡರು. ಆ ಮೂಲಕ ಭಾರತದಲ್ಲಿ ನೇರ ರಾಜಕೀಯ ನಿಯಂತ್ರಣವನ್ನು ತನ್ನ ಕೈಗೆ ತೆಗೆದುಕೊಂಡ ಸರ್ಕಾರವು ಎಲ್ಲ ರೀತಿಯ ಬಂಡಾಯ ಮತ್ತು ಕ್ರಾಂತಿಕಾರಿ ಸಾಹಸಗಳನ್ನು ಪರಿಣಾಮಕಾರಿಯಾಗಿ ಹತ್ತಿಕ್ಕುವ ಕಾರ್ಯತಂತ್ರವನ್ನು ರೂಪಿಸಲು ತೊಡಗಿತು. ೧೮೫೭ರ ಸಂಗ್ರಾಮ ಮತ್ತು ಅದರ ಪ್ರಭಾವದಲ್ಲಿ ರೂಪುಗೊಳ್ಳುತ್ತಿದ್ದ ಎಲ್ಲ ಹೋರಾಟಗಳ ಸಾವಿರಾರು ನಾಯಕರುಗಳು ಮತ್ತು ಸಕ್ರಿಯ ಹೋರಾಟಗಾರರು ದೇಶಬಾಂಧವರ ಮೇಲೆ ಅಗಾಧವೂ

## ಅಭಿನಂದನೆ...

ಕರ್ನಾಟಕ ಲೇಖಕಿಯರ ಸಂಘ ಕೊಡಮಾಡುವ 'ಅನುಪಮಾ ಪ್ರಶಸ್ತಿ'ಯು ಈ ಸಾಲಿನಲ್ಲಿ ವೈದ್ಯೆ ಹಾಗೂ ಸಾಹಿತಿ ಡಾ|| ಎಚ್. ಗಿರಿಜಮ್ಮ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.









ರಾತ್ರಿಗೆ ಕನಸಿನ ಗೂಡೊಂದಿದೆ
ಹಗಲಿಗೆ ಸಾವಿನ ನೆರಳಿದೆ
ರಾತ್ರಿ ಹಗಲ ಸಾವಾಗುತ್ತದೆ
ಹಗಲು ರಾತ್ರಿಯ ಆಳಾಗುತ್ತದೆ

ದಿನಗಳ ಕೂಗಿಗೆ ಸೂರ್ಯ ಹುಟ್ಟುತ್ತಾನೆ
ದಿನಗಳ ಸಾವಿಗೆ ಚಂದ್ರ ಮೌನದಲ್ಲಿರುತ್ತಾನೆ

ಇಲ್ಲಿ ಎಲ್ಲವೂ ಮೌನದಿಂದಲೇ ಹುಟ್ಟಿ
ಮಾತನಾಡಲು ಆರಂಭಿಸುತ್ತವೆ
ಮುಸುಕಿನ ಮಂಜು, ನಸುಕಿನ ಹೂವು
ಆಸೆಯ ನರನು, ಹಸಿದ ಮೃಗವು
ಎಲ್ಲವೂ ಮಾತನಾಡಲು ಪ್ರಾರಂಭಿಸುತ್ತವೆ

ಬಾಳ ಬಟ್ಟೆಯಲ್ಲಿ ನೋವೆಂದು
ಹುಯಿಲಿಟ್ಟರೆ ಇಲ್ಲದ ದೇವ ಕೇಳುವನೇ ? ಮೊರೆಯ
ಅಡಗಿದ ಹಸಿವು ತಣಿಯುವುದೇ ? ಬಯಕೆಯ ಬೀಜ ಮುರುಟುವುದೇ ?
ಸಮನಾಗಿಡದ ಬದುಕು ಸಮವಾಗಿರಬೇಕು
ಸಿಡಿಲಂತೆ ಇದಿರಾಗಬೇಕು ನೋವಿಗೆ
ಹೊಸ ದಾರಿಗೆ ಹೊಳೆವ ಮಿಂಚಾಗಬೇಕು
ಗಾಳಿಯಂತೆ ಜೀವಿ ಹರಣವಾಗಿರಬೇಕು

ಸಿಡಿಲಿಗೂ ಭಯವಿದೆ
ಅದಕೆ ಮೋಡದ ಮರೆಯಲ್ಲಿಯೇ ಇರುತ್ತದೆ
ಮಿಂಚಿಗೂ ಕಣ್ಣು ಹೋಗಿದೆ
ಎಲ್ಲೆಂದರಲ್ಲಿ ಆಯತಪ್ಪಿ ಬೀಳುತ್ತದೆ / ಬೀಳುತ್ತಿರುತ್ತದೆ
ಆಕಾಶಕ್ಕೂ ಗರ್ಭಧಾರಣೆಯಾಗುತ್ತಿದೆ
ಅದಕ್ಕಾಗಿಯೇ ಭುವಿಯ ತುಂಬೆಲ್ಲಾ ಹನಿಮಕ್ಕಳಾಗುತ್ತವೆ

ಆಯ ತಪ್ಪಿದವರು ನಾವುಗಳು ನಿಜ !
ಆಯತವನ್ನೂ ನಾವೇ ಕಟ್ಟಿಕೊಂಡವರೂ ನಿಜ !
ಮೋಹದ ಯಾನಕೆ, ಕಾಯದ ಸಾವ ಭಯ
ಜೀವ ಮಾರಾಂಕನಿಗೆ.

**ಪ್ರಸನ್ ಕುಮಾರ್**
ಸಹಾಯಕ ಸಂಶೋಧಕರು
ಬೆಂಗಳೂರು – ೧೨

ಪರಿಣಾಮಕಾರಿಯೂ ಆದ ಪ್ರಭಾವವನ್ನು ಬೀರುತ್ತಿದ್ದರು. ಈ "ಮಾಡು–ಮಡಿ" ಹೋರಾಟಗಾರರು ಜನಮಾನಸದಲ್ಲಿ ಬಿತ್ತುತ್ತಿದ್ದ ದೇಶಾಭಿಮಾನ ಮತ್ತು ಹೋರಾಟದ ಕಿಚ್ಚನ್ನು ನಂದಿಸದೆ ಆಡಳಿತ ನಡೆಸುವುದು ಬ್ರಿಟಿಷರಿಗೆ ಅಸಾಧ್ಯವಾಗಿ ಪರಿಣಮಿಸಿತು. ಕ್ರಾಂತಿಕಾರಿ ಹೋರಾಟಗಾರರನ್ನೂ ಅವರ ಪ್ರಭಾವಶಾಲೀ ಮುಂದಾಳುಗಳನ್ನೂ ದೇಶೀಯರ ಸಂಪರ್ಕದಿಂದ ಸಂಪೂರ್ಣವಾಗಿ ಬೇರ್ಪಡಿಸಿ ದೇಶದ ಆಡಳಿತವನ್ನು ಬಿಗಿಗೊಳಿಸಲು ಅವರು ನಿರ್ಧರಿಸಿದರು. ಸಮುದ್ರದ ನಡುವಿನ ಬಹುದೂರದ ದ್ವೀಪಕ್ಕೆ ಅವರನ್ನು ಗಡೀಪಾರು ಮಾಡುವ ಮೂಲಕ ಹೋರಾಟವನ್ನು ದುರ್ಬಲಗೊಳಿಸುವ ಕಾರ್ಯತಂತ್ರ ಇದಾಗಿತ್ತು. ಅಂಡಮಾನನ್ನು ಕಂಡುಹಿಡಿದಿದ್ದು ಈ ಕಾರಣಕ್ಕಾಗಿಯೇ. ಶತಮಾನಗಳಿಂದ ಆದಿಮ ಬುಡಕಟ್ಟುಗಳ ತಾಣವಾಗಿದ್ದ ಈ ಅನಾಗರಿಕ ದ್ವೀಪಗಳು ನಾಗರಿಕ ಪ್ರಪಂಚಕ್ಕೆ ಪರಿಚಯವಾದದ್ದು ಹೀಗೆ.

೧೮೫೭ರ ಸಂಗ್ರಾಮವು ಸುಸಂಘಟಿತವೂ ಸುಸಜ್ಜಿತವೂ ಆದ ಸಶಸ್ತ್ರ ಹೋರಾಟವಲ್ಲದಿದ್ದರೂ ಉತ್ತರದ ವಹಾಬಿ ಮತ್ತು ದಕ್ಷಿಣದ ಮಾಪಿಳ್ಳೆ ಹೋರಾಟಗಳಂತಹ ಹಲವು ಕ್ರಾಂತಿಕಾರಿ ಹೋರಾಟಗಳಿಗೆ ಸ್ಫೂರ್ತಿಯನ್ನೊದಗಿಸಿತು. ಹಾಗೆಯೇ ಕನ್ನಡ ನಾಡಿನ ಕೆಲವು ಪ್ರದೇಶಗಳಲ್ಲೂ ಇದರ ಪ್ರಭಾವವು ಹರಡಿತ್ತು. ಹೈದರಾಲಿ, ಟಿಪ್ಪು, ಜನನಾಯಕ ದೋಂಡಿಯಾ ವಾಘ್, ವತನ್ ತಳವಾರ ಸಂಗೊಳ್ಳಿ ರಾಯಣ್ಣ ಇವರುಗಳ ಕಂಪೆನಿ ವಿರುದ್ಧದ ಕದನಗಳು ಮುಗಿದು ಚರಿತ್ರೆಯ ಪುಟಗಳಲ್ಲಿ ಸೇರಿಹೋಗಿದ್ದವು. ೧೮೫೭ರ ಸ್ಫೋಟವು ದೇಶದ ಹಲವು ಭಾಗಗಳಲ್ಲಿ ಹೋರಾಟದ ಚೈತನ್ಯವನ್ನು ಪುನಶ್ಚೇತನಗೊಳಿಸಿತು. ಈ ಕಾಲಘಟ್ಟದಲ್ಲಿ ನಡೆದ ಕನ್ನಡ ನಾಡಿನ ಸ್ವಾತಂತ್ರ್ಯ ಹೋರಾಟಗಳಲ್ಲಿ ಹಲಗಲಿ ಬೇಡರ ಬಂಡಾಯ (೧೮೫೭), ನರಗುಂದ ಬಂಡಾಯ (೧೮೫೮) ಹಾಗೂ ಸುರಪುರ ಬೇಡರ ಬಂಡಾಯಗಳು (೧೮೬೦) ಪ್ರಮುಖವಾದವು. ಈ ಹೋರಾಟಗಳ ಮೇಲೆ ೧೮೫೭ರ ಸಂಗ್ರಾಮದ ಪ್ರತ್ಯಕ್ಷ ಅಪ್ರತ್ಯಕ್ಷ ಪ್ರೇರಣೆಯ ಅಂಶಗಳು ಕಂಡುಬರುತ್ತವೆ. ಬ್ರಿಟಿಷ್ ವಿರೋಧಿ ಪ್ರತಿರೋಧವನ್ನು ಸಂಘಟಿಸಿ ಹೋರಾಡಿದ ನರಗುಂದದ ಬಾಬಾ ಸಾಹೇಬ ಮತ್ತು ಮುಂಡರಗಿಯ ಭೀಮರಾವ್ ಅವರುಗಳು ಅದರ ನೇರ ಪ್ರಭಾವಕ್ಕೊಳಗಾಗಿ ಈ ಹೋರಾಟವನ್ನು ಕನ್ನಡ ನಾಡಿನ ಈ ಭಾಗದಲ್ಲಿ ಪರಿಣಾಮಕಾರಿಯಾಗಿ ಸಂಘಟಿಸಿದವರು.

ಇವರುಗಳ ನೇತೃತ್ವದಲ್ಲಿ ನಡೆದ ಗೆರಿಲ್ಲಾ ಮಾದರಿಯ ಹೋರಾಟಗಳಲ್ಲಿ ಭಾಗವಹಿಸಿದ ಹಲವರ ಮೇಲೆ ಸರ್ಕಾರವನ್ನು ಬುಡಮೇಲು ಮಾಡುವ ಆರೋಪ ಹೊರಿಸಿ ಬಂಧಿಸಲಾಯಿತು. ಸ್ಥಳೀಯ ಬ್ರಿಟಿಷ್ ನ್ಯಾಯಾಲಯಗಳಿಗೆ ಎಳೆದು ತಂದು ಜೀವಾವಧಿ ಶಿಕ್ಷೆ ವಿಧಿಸಿ ಹಲವರನ್ನು ಅಂಡಮಾನ್ ಜೈಲುಗಳಿಗೆ ಗಡೀಪಾರು ಮಾಡಲಾಯಿತು. ಪೋರ್ಟ್ ಬ್ಲೇರ್‌ನಲ್ಲಿರುವ ೬೦೦ ಖೈದಿಗೂಡುಗಳ ಸೆಲ್ಯೂಲರ್ ಬೃಹತ್ ಬಂದೀಖಾನೆಯನ್ನು ಕಟ್ಟಿದ್ದು ೧೯೦೬ರಲ್ಲಿ. ಈ ಮೊದಲಿಗೆ ಜೀವಾವಧಿ ಶಿಕ್ಷೆಗೊಳಗಾದ ಖೈದಿಗಳನ್ನು ವೈಪರ್ ದ್ವೀಪದ ಸೆರೆಮನೆಗಳಲ್ಲೂ ರಾಸ್ ದ್ವೀಪಗಳಲ್ಲೂ ಅದಕ್ಕೂ ಹಿಂದೆ ದಟ್ಟ ಕಾಡುಗಳ "ಬಯಲು ಬಂದೀಖಾನೆ"ಗಳಲ್ಲೂ ಬಂಧಿಗಳಾಗಿ ಇಡಲಾಗುತ್ತಿತ್ತು; ನಿರ್ದಯೆಯಿಂದ ಹಲವು ರೀತಿಯ ಹಿಂಸೆಗಳನ್ನು ನೀಡಿ ದುಡಿಸಿಕೊಳ್ಳಲಾಗುತ್ತಿತ್ತು. ತಪ್ಪಿಸಿಕೊಳ್ಳಲು ಪ್ರಯತ್ನಿಸಿದವರನ್ನು ಗುಂಡಿಟ್ಟು ಕೊಲ್ಲಲಾಗುತ್ತಿತ್ತು. ಕಣ್ಣು ತಪ್ಪಿಸಿ ಸಮುದ್ರಕ್ಕೆ ಹಾರಿದ ಬಂಧಿಗಳನ್ನು ಮೂಲನಿವಾಸಿ ನರಭಕ್ಷಕರು ಕೊಂದು ತಿಂದುಬಿಡುತ್ತಿದ್ದರು. ಈ ಕಾಲಘಟ್ಟದಲ್ಲಿ ವೈಪರ್ ದ್ವೀಪವೊಂದರಲ್ಲೇ ಹೀಗೆ ಬಂಧಿಗಳಾಗಿದ್ದವರ ಸಂಖ್ಯೆಯು ೧೮ ಸಾವಿರವಿತ್ತೆಂದು ಸರ್ಕಾರಿ ದಾಖಲೆಗಳು ತಿಳಿಸುತ್ತವೆ. ರಾಜಕೀಯ ಖೈದಿಗಳಾಗಿ ಇಲ್ಲಿಗೆ ಗಡೀಪಾರಾಗುತ್ತಿದ್ದವರು ದಟ್ಟ ಕಾಡುಗಳನ್ನು ಕಡಿದು, ಬೃಹದಾಕಾರದ ಮರಗಳನ್ನು ಉರುಳಿಸಿ, ಸೈನಿಕರಿಗೆ ಬ್ಯಾರಕ್ ಕಟ್ಟಡಗಳನ್ನು ಕಟ್ಟಿ, ಬ್ರಿಟಿಷ್ ಅಧಿಕಾರಿಗಳಿಗೆ ವಾಸದ ಬಂಗಲೆಗಳನ್ನೂ, ವಿಲಾಸದ ಸಭಾಂಗಣಗಳನ್ನೂ, ತಮ್ಮನ್ನು ಬಂಧಿಸಿಡಲು ಬಂದೀಖಾನೆಗಳನ್ನೂ ನಿರ್ಮಿಸಿ ಬ್ರಿಟಿಷ್ ಧಣಿಗಳಿಗೆ ಹಲವಾರು ರೀತಿಯ ಸೇವೆಗಳನ್ನು ಒದಗಿಸಬೇಕಿತ್ತು. ಯಾವುದೇ ರೀತಿಯ ವಿರೋಧ ವ್ಯಕ್ತಪಡಿಸಿದರೆ ಕಲ್ಪಿಸಿಕೊಳ್ಳಲು ಸಾಧ್ಯವಾಗದ ಕ್ರೌರ್ಯ ಮತ್ತು ಹಿಂಸೆಗಳನ್ನು ಅನುಭವಿಸಬೇಕಾಗಿತ್ತು.

ಹೀಗೆ ಕ್ರೌರ್ಯದ ಜಗತ್ತಿಗೆ ತಳ್ಳಲ್ಪಟ್ಟು ಸ್ವಾತಂತ್ರ್ಯದ ಕನಸು ಕಾಣುತ್ತಾ ಅಂಡಮಾನ್‌ನಲ್ಲಿ ಕೊನೆಯುಸಿರೆಳೆದ ಕನ್ನಡ ನಾಡಿನ ಸ್ವಾತಂತ್ರ್ಯಪ್ರಿಯರು ಕೂಡ



೧೮೫೭ ಮತ್ತು ಆನಂತರದ ದಿನಗಳಲ್ಲಿ ಕಂಡುಬರುತ್ತಾರೆ. ಆದರೆ ಇದುವರೆಗೆ ಕರ್ನಾಟಕದಿಂದ ಅಥವಾ ಬೇರೆ ರಾಜ್ಯ / ದೇಶಗಳಿಂದ ಅಂಡಮಾನ್ ದ್ವೀಪಗಳಿಗೆ ಪ್ರವಾಸ ಹೋಗುವವರಿಗೆ ಈ ಬಗ್ಗೆ ಯಾವುದೇ ಮಾಹಿತಿ ಅಲ್ಲಿ ದೊರಕುವುದಿಲ್ಲ ಎಂಬುದು ಖೇದದ ಸಂಗತಿಯಾಗಿದೆ. ಕನ್ನಡ ನಾಡಿನ ೬೯ ಹೋರಾಟಗಾರರು ಅಂಡಮಾನ್ ಜೈಲುಗಳಲ್ಲಿ ಜೀವಾವಧಿ ಶಿಕ್ಷೆಗೆ ಗುರಿಯಾಗಿದ್ದ ಬಗೆಗಿನ ಮಾಹಿತಿಯು ಇತ್ತೀಚಿನ ಇತಿಹಾಸ ಸಂಶೋಧನೆಯಿಂದ ಲಭ್ಯವಾಗಿದೆ. ಇವರಲ್ಲಿ ಹಲವರು ಇನ್ನಿತರ ನೂರಾರು ಖೈದಿಗಳಂತೆ ಘೋರ ಮಲೇರಿಯಾ ಕಾಯಿಲೆಗೆ, ೧೯೪೧ರಲ್ಲಿ ಸಂಭವಿಸಿದ ಭೀಕರ ಭೂಕಂಪಕ್ಕೆ ಹಾಗೂ ಎರಡನೇ ಮಹಾಯುದ್ಧದ (೧೯೪೫) ಬಾಂಬುದಾಳಿಗೆ ಬಲಿಯಾದವರಾಗಿದ್ದಾರೆ. ಇಂಡಿಯಾ ಲೀಗ್‌ಗೆ ಸೇರಿದ ಕನ್ನಡ ಮೂಲದ ಇನ್ನು ಕೆಲವರು ಜಪಾನ್ ಸೇನೆಯು ನಡೆಸಿದ ಹಿಂಸಾಚಾರ ಮತ್ತು ಕಗ್ಗೊಲೆಗೆ ಬಲಿಯಾದವರಿದ್ದಾರೆ.

ಸ್ವಾತಂತ್ರ್ಯಕ್ಕಾಗಿ ಪ್ರಾಣತ್ಯಾಗ ಮಾಡಿದವರ ನೆನಪನ್ನು ಮುಂದಿನ ಪೀಳಿಗೆಗೆ ಕೃತಜ್ಞತೆಯಿಂದ ದಾಟಿಸುವುದು ಫಲಾನುಭವಿಗಳಾದ ನಮ್ಮೆಲ್ಲರ ಕರ್ತವ್ಯವಾಗಿದೆ. ಹಾಗೆಯೇ ನಮ್ಮ ಸುದೀರ್ಘ ರಾಷ್ಟ್ರೀಯ ಹೋರಾಟವು ಎತ್ತಿಹಿಡಿದ ಮೌಲ್ಯಗಳ ಬಗ್ಗೆಯೂ ಮುಂದಿನ ಪೀಳಿಗೆಯವರಲ್ಲಿ ಅರಿವು ಮೂಡಿಸುವಂತಾಗಬೇಕು. ಆದ್ದರಿಂದ ಕರ್ನಾಟಕ ಸರ್ಕಾರವು ಈ ಕುರಿತು ಎರಡು ಅಂಶಗಳ ಒಂದು ಕ್ರಿಯಾ ಯೋಜನೆಯನ್ನು ಹಮ್ಮಿಕೊಳ್ಳುವುದು ಸೂಕ್ತವೆನಿಸುತ್ತದೆ : ಒಂದು, ಅಂಡಮಾನ್ ಜೈಲುಗಳಲ್ಲಿ ಕೊನೆಯುಸಿರೆಳೆದು ಈಗ ಸಾರ್ವಜನಿಕ ನೆನಪಿನಿಂದ ಅಳಿಸಿಹೋಗಿರುವ ಕನ್ನಡ ನಾಡಿನ ಈ ಸ್ವಾತಂತ್ರ್ಯ ಹೋರಾಟಗಾರರ ಹೆಸರುಗಳನ್ನು ಕೆತ್ತಿದ ಫಲಕಗಳನ್ನು ಆಯಾ ಊರಿನ ಅಥವಾ ಆಯಾ ಜಿಲ್ಲಾ ಕೇಂದ್ರದಲ್ಲಿ ಸ್ಮಾರಕವಾಗಿ ಸ್ಥಾಪಿಸುವುದು. ಎರಡು, ಪೋರ್ಟ್ ಬ್ಲೇರ್‌ನ ರಾಷ್ಟ್ರೀಯ ಸ್ಮಾರಕದಲ್ಲಿ ಇವರುಗಳ ಹೆಸರು ಕೆತ್ತಿದ ಫಲಕದ ಪ್ರದರ್ಶನ ವ್ಯವಸ್ಥೆಯನ್ನು ಮಾಡಿ ಆ ಕಾಲಘಟ್ಟದಲ್ಲಿಯೂ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾದ ಕನ್ನಡ ನಾಡಿನ ಈ ಘನತೆಯ ಪರಂಪರೆಯನ್ನು ಅಂಡಮಾನ್ ಪ್ರವಾಸಿಗರ ಗಮನಕ್ಕೆ ತರುವುದು.

ಸರ್ಕಾರವು ಈ ದಿಕ್ಕಿನಲ್ಲಿ ಕಾರ್ಯೋನ್ಮುಖವಾದರೆ ಈ ಸ್ವಾತಂತ್ರ್ಯ ಯೋಧರಿಗೆ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ.

*(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಸೆಲ್ಯೂಲರ್ ಜೈಲಿನ ಕ್ಯೂರೇಟರ್ ಡಾ॥ ಇಕ್ಬಾಲ್ ರಶೀದಾ ಮತ್ತು ಅಲ್ಲಿನ ಪತ್ರಾಗಾರದ ನೀರಜ್ ವೈದ್ಯ ಅವರುಗಳು ನೀಡಿದ ಸಹಕಾರವನ್ನು ನೆನೆಯುತ್ತೇನೆ.)*

**ಪ್ರೊ॥ ಬಿ. ಗಂಗಾಧರಮೂರ್ತಿ**
ನಂ. ೧೯, 'ನಳಂದ', ಸಂಪಿಗೆ ರಸ್ತೆ, ಕೆಂಪೇಗೌಡ ನಗರ
ಗೌರಿಬಿದನೂರು – ೫೬೧೨೦೮




# ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಗತಿ

ನಾನು ಓದಿದ ಪುಸ್ತಕ

ಕೃತಿಯ ಹೆಸರು (ಇಂಗ್ಲಿಷ್) : 'ಇಂಡಿಯಾ ಸಿನ್ಸ್ ಇಂಡಿಪೆಂಡೆನ್ಸ್'
ಲೇಖಕರು: **ಬಿಪನ್‌ಚಂದ್ರ, ಮ್ರಿದುಲ ಮುಖರ್ಜಿ, ಆದಿತ್ಯ ಮುಖರ್ಜಿ**
ಪುಟಗಳು : ೭೭೨ ಬೆಲೆ : ರೂ. ೩೯೯/-
ಪ್ರಕಾಶಕರು : **ಪೆಂಗ್ವಿನ್ ಬುಕ್ಸ್**, ನವದೆಹಲಿ

ಸ್ವತಂತ್ರ ಭಾರತದ ಬೆಳವಣಿಗೆ ಎಷ್ಟು ? ಏನು ? ಜನಜೀವನದಲ್ಲಿ ಬದಲಾವಣೆಗಳಾಗಿವೆಯೆ ? ಇದಕ್ಕೆ ಉತ್ತರ ನೀಡಿ ಆಗಿದೆ, ಆದರೆ ನಿರೀಕ್ಷಿತ ಮಟ್ಟದಲ್ಲಿ ಆಗಿಲ್ಲ. ದೇಶ ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳಶಾಹಿ ಸಮಾಜದತ್ತ ಭರದಿಂದ ಸಾಗುತ್ತಿದೆ. ಯೋಜನಾಬದ್ಧವಾದ ಆರ್ಥಿಕವನ್ನು ಸ್ಥಾಪಿಸಿ ಹೊರಟ ದೇಶ ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ವಿದೇಶೀ ಬಂಡವಾಳ, ಮುಕ್ತ ಮಾರುಕಟ್ಟೆ ಇವುಗಳ ವಿಷವೃತ್ತದಲ್ಲಿ ಸಿಲುಕಿಕೊಂಡಿದೆ. ಸ್ವಾವಲಂಬನೆ ಸಾಧಿಸುವುದಕ್ಕೆ ಪರಾವಲಂಬನೆಯತ್ತ ದೇಶ ಸಾಗುತ್ತಿದೆ. ಶ್ರೀಮಂತರು ಮತ್ತು ಬಡವರ ಮಧ್ಯೆ ಅಂತರ ತೀವ್ರವಾಗಿ ಹೆಚ್ಚಿದೆ. ಕೃಷಿ ಕ್ಷೇತ್ರದಲ್ಲಿ ಮುನ್ನಡೆಯಾಗಿದ್ದರೂ ಕೃಷಿಕರ ಸ್ಥಿತಿ ಮಾತ್ರ ಸುಧಾರಿಸಿಲ್ಲ, ರೈತರ ಆತ್ಮಹತ್ಯೆ ಈಚಿನ ದಿನಗಳಲ್ಲಿ ಸಾಂಕ್ರಾಮಿಕದಂತೆ ಹರಡುತ್ತಿದೆ. ಕೈಗಾರಿಕೆಗಳು ವೃದ್ಧಿಯಾದಂತೆ ಕಾರ್ಮಿಕರ ಸ್ಥಿತಿ ಉತ್ತಮಗೊಳ್ಳುವ ಬದಲು ಕ್ಷೀಣಿಸುತ್ತಿದೆ, ಉದ್ಯೋಗ ಸೃಷ್ಟಿಯ ಬದಲು ನಿರುದ್ಯೋಗದ ಪ್ರಮಾಣ ಹೆಚ್ಚುತ್ತಿದೆ. ಸ್ವತಂತ್ರ ರಾಷ್ಟ್ರವಾಗಿ ಏಳನೆ ದಶಕದಲ್ಲಿ ಅಡಿಯಿರಿಸುತ್ತಿರುವ ಭಾರತ ಪ್ರಜಾತಂತ್ರ ವ್ಯವಸ್ಥೆಯಾಗಿ ಉಳಿದಿರುವುದೇ ದೊಡ್ಡ ಸಾಧನೆ. ದೇಶದ ವಿಭಜನೆಯ ಕಾಲದಲ್ಲಿ ಮತೀಯವಾದದಿಂದ ಸಾಕಷ್ಟು ಯಾತನೆಯನ್ನು ಅನುಭವಿಸಿದ್ದ ಈ ನೆಲದಲ್ಲಿ ಹಿಂದುತ್ವ ರಾಜಕಾರಣ ಪ್ರಬಲಗೊಂಡಿದ್ದು ಅಧಿಕಾರ ಗ್ರಹಣ ಮಾಡಿರುವುದೀಗ ಆತಂಕಕಾರಿ. ಭ್ರಷ್ಟಾಚಾರ, ಕಪ್ಪುಹಣ, ಸ್ವಜನ ಪಕ್ಷಪಾತ, ಐಕ್ಯಭಂಜಕ ರಾಜಕಾರಣ ಮುಂದುವರಿದಿದೆ. ಈ ಎಲ್ಲ ಬೆಳವಣಿಗೆಗಳನ್ನು ಇತಿಹಾಸಕಾರರು ಗುರುತಿಸಿದ್ದಾರೆ, ದಾಖಲಿಸಿದ್ದಾರೆ.

ಇಲ್ಲಿ ಪ್ರಸ್ತಾಪಿಸುತ್ತಿರುವ ಗ್ರಂಥ ದೇಶದ ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ ಒಂದಾದ ದೆಹಲಿಯ ಜವಹರಲಾಲ್ ವಿಶ್ವವಿದ್ಯಾಲಯದ ಮೂವರು ಇತಿಹಾಸ ಪ್ರಾಧ್ಯಾಪಕರುಗಳಿಂದ ರಚಿತವಾದ್ದು. ೧೯೪೭ರಿಂದ ೨೦೦೦ದವರೆಗಿನ ದೇಶದ ಪ್ರಗತಿಯನ್ನು, ಏರಿಳಿತಗಳನ್ನು, ಮುನ್ನಡೆ ಹಿನ್ನಡೆಗಳನ್ನು ನಲವತ್ತೊಂದು ಅಧ್ಯಾಯಗಳಲ್ಲಿ ದಾಖಲಿಸಿದ್ದಾರೆ. ಈ ಗ್ರಂಥ ಕನ್ನಡದಲ್ಲಿ ಲಭ್ಯವಾಗಿದ್ದರೆ ಚೆನ್ನಾಗಿರುತ್ತಿತ್ತು. ಇಂಗ್ಲಿಷಿನಲ್ಲಿರುವ ಈ ಪುಸ್ತಕ ಭಾರತದ ವಿದ್ಯಮಾನಗಳನ್ನು ಕುರಿತು ತಿಳಿದುಕೊಳ್ಳಲು ಯೋಗ್ಯವಾದ್ದು ಇಂದಿನ ಪೀಳಿಗೆಗೆ. ಇನ್ನೂರು ವರ್ಷಗಳ ವಸಾಹತುಶಾಹಿ ಆಳ್ವಿಕೆಯಲ್ಲಿ ಪ್ರಗತಿಯನ್ನೇನೂ ಕಾಣದ ನಾಡು ವಿಭಜನೆಯ ಸಂಕಷ್ಟಗಳನ್ನು ಎದುರಿಸಿ ಮುನ್ನಡೆದದ್ದು ಕಠಿಣವಾದ ಹಾದಿ. ಸುಮಾರು ೫೦೦ ಚಿಲ್ಲರೆ ರಾಜಮಹಾರಾಜರುಗಳ ಆಳ್ವಿಕೆಯಲ್ಲಿದ್ದ ರಾಜ್ಯಗಳ ಸೇರ್ಪಡೆ, ಹೈದರಾಬಾದ್ ಪೊಲೀಸು ಕಾರ್ಯಾಚರಣೆ, ಗೋವಾ ವಿಮೋಚನೆಯ ವಿವರಗಳಿವೆ. ಹೊಸದಾಗಿ ಸ್ವತಂತ್ರಗೊಂಡ ಭಾರತ ಸ್ವಾತಂತ್ರ್ಯ ಹೋರಾಟದ ಪರಂಪರೆಯ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡದ್ದು ಪ್ರಜಾಪ್ರಭುತ್ವ, ಜಾತ್ಯತೀತ ಸಮಾಜ ವ್ಯವಸ್ಥೆ. ಮೂರು ವರ್ಷಗಳಲ್ಲಿ ಅದಕ್ಕನುಗುಣವಾದಂಥ ಸಂವಿಧಾನವನ್ನು ರೂಪಿಸಿ, ನಾಗರಿಕರಿಗೆ ಮೂಲಭೂತ ಹಕ್ಕುಗಳ ಭರವಸೆ ನೀಡಿದ್ದನ್ನು ಗ್ರಂಥ ವಿವರವಾಗಿ ತಿಳಿಸಿಕೊಡುತ್ತದೆ.

ಅಂತರರಾಷ್ಟ್ರೀಯ ರಂಗದಲ್ಲಿ ಶೀತಯುದ್ಧ ಉತ್ತುಂಗದಲ್ಲಿದ್ದಾಗ, ಪರಸ್ಪರ ವಿರುದ್ಧ ಬಣಗಳು ಸೆಣೆಸುತ್ತಿದ್ದಾಗ ಅಲಿಪ್ತ ನೀತಿಯನ್ನು ಅನುಸರಿಸಿ ಹೊಸದಾಗಿ ಸ್ವತಂತ್ರಗೊಂಡ ದೇಶಗಳಿಗೆ ಮಾರ್ಗದರ್ಶನ ಮಾಡಿದ್ದು ಭಾರತದ ಹಿರಿಮೆಗಳಲ್ಲಿ ಒಂದು. ಆರ್ಥಿಕ ಸ್ವಾವಲಂಬನೆಯ ಹಾದಿಯಲ್ಲಿ ಮುನ್ನಡೆಯಲು ಭಾರತ ಆಯ್ಕೆ ಮಾಡಿಕೊಂಡಿದ್ದು ಪಂಚವಾರ್ಷಿಕ ಯೋಜನೆ. ಸಾರ್ವಜನಿಕ ಕ್ಷೇತ್ರದಲ್ಲಿ ಉದ್ಯಮಗಳ ಸ್ಥಾಪನೆಯಾದದ್ದೂ ಆಗಲೆ. ಈಗ ಇಪ್ಪತ್ತೊಂದನೇ ಶತಮಾನದಲ್ಲಿ ಈ ಉದ್ಯಮಗಳು ಒಂದೊಂದಾಗಿ ಖಾಸಗೀಕರಣಗೊಳ್ಳುತ್ತಿವೆ. ಸುದೀರ್ಘಕಾಲ ಕಾಂಗ್ರೆಸ್ ಆಡಳಿತ, ಎಪ್ಪತ್ತು ವರ್ಷಗಳಲ್ಲಿ ಹೆಚ್ಚುಕಡಿಮೆ ಐವತ್ತು ವರ್ಷಗಳು ಒಂದೇ ಪಕ್ಷದ ಕಾರುಬಾರು, ಉಳಿದದ್ದು ಸಮ್ಮಿಶ್ರ ಸರಕಾರಗಳ ಯುಗ. ನೆಹರು–ಇಂದಿರಾ ಗಾಂಧಿ ಸುದೀರ್ಘ ಆಳ್ವಿಕೆಯಲ್ಲಿನ ಎಲ್ಲ ಪ್ರಮುಖ ದಾಖಲೆಗಳನ್ನೂ ಅಂಕಿಅಂಶಗಳ ಸಮೇತ ಲೇಖಕರು ವಿವರಿಸಿದ್ದಾರೆ. ತುರ್ತುಪರಿಸ್ಥಿತಿ ಹೇರಿಕೆಯ ಹಿನ್ನೆಲೆ, ಸಂಭವಿಸಿದ ಘಟನೆಗಳನ್ನು ಯಥಾವತ್ತಾಗಿ ನೀಡಲಾಗಿದೆ. ಕಾಂಗ್ರೆಸ್ ಪಕ್ಷದ ಅವನತಿ, ಎಡಪಕ್ಷಗಳ ಏರಿಳಿತಗಳು, ಪ್ರಾದೇಶಿಕ ಪಕ್ಷಗಳ ಪಾತ್ರ, ಮತೀಯವಾದದ ಬೆಳವಣಿಗೆ, ಪ್ರಾಬಲ್ಯ ಇವುಗಳನ್ನು ಗುರುತಿಸುವುದರಲ್ಲಿ ಲೇಖಕರು ತಮ್ಮ ಪರಿಣತಿಯನ್ನು ತೋರಿದ್ದಾರೆ. ದೇಶದ ಆರ್ಥಿಕ ಪರಿಸ್ಥಿತಿಯನ್ನು ಕುರಿತು ವಿವರಿಸಿರುವ ಕೆಲವು ಅಂಕಿಅಂಶಗಳು ಹೀಗಿವೆ: ೧೯೫೦ರಲ್ಲಿ ಭಾರತದ ಕೈಗಾರಿಕಾ ಕ್ಷೇತ್ರ ಶೇ. ೯೦ರಷ್ಟು ಯಂತ್ರ ಸಾಮಗ್ರಿಗಳನ್ನು ಆಮದುಮಾಡಿಕೊಳ್ಳುತ್ತಿತ್ತು. ಆಗ ದೇಶದಲ್ಲಿ ಉತ್ಪಾದನೆಯಾಗುತ್ತಿದ್ದುದು ೧.೦೪ ಟನ್ ಉಕ್ಕು, ೩೨.೮ ಮಿಲಿಯ ಟನ್ ಕಲ್ಲಿದ್ದಲು, ೨.೭ ಮಿಲಿಯ ಟನ್ ಸಿಮೆಂಟ್ ಇತ್ಯಾದಿ. ಆಗ ದೇಶದಲ್ಲಿದ್ದ ಬ್ಯಾಂಕುಗಳ ಸಂಖ್ಯೆ ೫೦೭೨ ಮಾತ್ರ. ಇಂದು ಎಲ್ಲ ಕ್ಷೇತ್ರಗಳಲ್ಲೂ ಸಾಕಷ್ಟು ಅಭಿವೃದ್ಧಿಯನ್ನು ಕಾಣಬಹುದು. ಸ್ವಾತಂತ್ರ್ಯಾನಂತರದ ಮೊದಲ ವರ್ಷಗಳಲ್ಲಿ ಇದ್ದ ರೇಶನ್ ವ್ಯವಸ್ಥೆ ಹೋಗಿ ಈಗ ಬಡಜನರಿಗೆ ಮಾತ್ರ ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ಆಹಾರ ಸಾಮಗ್ರಿಗಳನ್ನು ಒದಗಿಸಲಾಗುತ್ತದೆ. ದೇಶದಲ್ಲಿ ಆಗಿರುವ ಬೆಳವಣಿಗೆಗಳನ್ನು ಗಮನಿಸಿರುವ ಲೇಖಕರು ದೇಶದ ವಿವಿಧ ರಾಜ್ಯಗಳ ಅಭಿವೃದ್ಧಿಯಲ್ಲಿರುವ ವ್ಯತ್ಯಾಸಗಳನ್ನು, ಅಸಮತೆಯನ್ನು ವಿವರವಾಗಿ ನೀಡಿದ್ದಾರೆ. 'ದೇಶದಲ್ಲಿ ಉದ್ಯೋಗದ ಪರಿಸ್ಥಿತಿಯನ್ನು ವ್ಯಾಖ್ಯಾನಿಸುತ್ತ ನಿರುದ್ಯೋಗ ಮತ್ತು ದೊಡ್ಡ ಪ್ರಮಾಣದಲ್ಲಿರುವ ಅತಿ ನಿರುದ್ಯೋಗ ಜನರ ಜೀವನದ ಗುಣಮಟ್ಟದ ಮೇಲೆ ಪರಿಣಾಮ ಬೀರಿದೆ. ಆರ್ಥಿಕ ಅಭಿವೃದ್ಧಿಯಾಗಿದ್ದರೂ ಕೈಗಾರಿಕಾ ಕ್ಷೇತ್ರದಲ್ಲಿ ಸಾಕಷ್ಟು ಉದ್ಯೋಗಾವಕಾಶಗಳಿಲ್ಲ, ಗ್ರಾಮಾಂತರ ಪ್ರದೇಶಗಳಲ್ಲಿ ಭೂರಹಿತ ರೈತರ ಸ್ಥಿತಿ ಚಿಂತಾಜನಕವಾಗಿದೆ. ಇದು ಅವರ ಜೀವನದ ಮೇಲೆ ಮಾನಸಿಕ, ಸಾಮಾಜಿಕ, ಆರ್ಥಿಕ ಪರಿಣಾಮಗಳನ್ನು ಉಂಟುಮಾಡಿದೆ' ಎಂದು ಲೇಖಕರು ನಮೂದಿಸಿದ್ದಾರೆ.

ಹೊಸ ಸಹಸ್ರಮಾನದವರೆಗಿನ ದೇಶದ ಪ್ರಗತಿಯನ್ನು ಸುದೀರ್ಘವಾಗಿ ಅವಲೋಕಿಸಿರುವ ಇತಿಹಾಸಕಾರರು ತಮ್ಮ ಗ್ರಂಥವನ್ನು, ನಾವಿನ್ನೂ ಎಲ್ಲ ಕ್ಷೇತ್ರಗಳಲ್ಲಿಯೂ ಬಹುದೂರ ಕ್ರಮಿಸಬೇಕಾಗಿದೆ; ಬಡತನ, ಅನಾರೋಗ್ಯ, ಅನಕ್ಷರತೆ, ಅಸಮಾನತೆ, ಸಾಮಾಜಿಕ ಹಿನ್ನಡೆ, ಲಿಂಗ ಹಾಗೂ ಜಾತಿ ಭೇದ, ದಬ್ಬಾಳಿಕೆ ಎಲ್ಲವನ್ನೂ ಎದುರಿಸಬೇಕಾಗಿದೆ. ಪ್ರಗತಿಯ ಬಗ್ಗೆ ನಮ್ಮ ಆಶಾಭಾವನೆಗೆ ಮುಖ್ಯ ಕಾರಣ ಪ್ರಜಾಪ್ರಭುತ್ವ ವ್ಯವಸ್ಥೆಯಿಂದ ಎಲ್ಲ ಸಮಸ್ಯೆಗಳನ್ನೂ ಬಗೆಹರಿಸಲು ಸಾಧ್ಯವಿದೆ ಎನ್ನುವ ವಿಶ್ವಾಸ ವ್ಯಕ್ತಪಡಿಸಿದ್ದಾರೆ. ದೇಶದ ಆಗುಹೋಗುಗಳಲ್ಲಿ ಆಸಕ್ತಿ ಇರುವ ಎಲ್ಲರೂ ಓದಲೇಬೇಕಾಗಿರುವ ಗ್ರಂಥ ಇದು. ಇತಿಹಾಸದ ವಿದ್ಯಾರ್ಥಿಗಳಿಗೆ, ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸುವವರಿಗೆ, ಸಾಮಾನ್ಯ ಓದುಗರಿಗೆ ಅಗತ್ಯವಿರುವ ಹೊತ್ತಿಗೆ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಸಾಂಸ್ಕೃತಿಕ ರಾಷ್ಟ್ರೀಯತೆ

♦ ಡಾ|| ಅನಸೂಯ ಕಾಂಬಳೆ

ಸಾಂಸ್ಕೃತಿಕ ರಾಷ್ಟ್ರೀಯತೆ ಅನ್ನುವುದು ಸಂಕೇತಗಳ ಸ್ವರೂಪದಲ್ಲಿದ್ದು, ಮಾನವನ ಬದುಕಿನಲ್ಲಿ ಆಚರಣಾ ಸಂಬಂಧಿಯಾಗಿದೆ. ಈ ಆಚರಣೆಗಳು ಮೇಲ್ನೋಟಕ್ಕೆ ಸರಳ ಮತ್ತು ಒಂದುಗೂಡುವಿಕೆಯ ಜೀವನ ವಿಧಾನದಂತೆ ಕಂಡರೂ ಆಳದಲ್ಲಿ ಒಡೆಯುವಿಕೆ ಗುಣವನ್ನು ಹೊಂದಿದ್ದು ಒಂದು ನಿರ್ದಿಷ್ಟ ಸಮುದಾಯದ ಧರ್ಮ ಮತ್ತು ದೈವತ್ವಕ್ಕೆ ಸೀಮಿತಗೊಂಡಿರುತ್ತವೆ. ಆಯಾ ಧರ್ಮದ ಸಂಕೇತಗಳಾದ ದೇವರುಗಳ ಹೆಸರಿನಲ್ಲಿ ಭಯ ಮತ್ತು ಮೌಢ್ಯವನ್ನು ಜೀವಂತವಾಗಿಟ್ಟಿರುವಲ್ಲಿ ಅವುಗಳ ಅಸ್ತಿತ್ವದ ಪ್ರಶ್ನೆ ಇದೆ. ಮಾನವಪ್ರಜ್ಞೆಯ ಮೇಲೆ ಇವು ನಿರಂತರ ನಿಗಾ ಇಟ್ಟು ದಾಳಿ ಮಾಡುತ್ತಲೇ ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳುತ್ತವೆ.

**ಸಾಂ**ಸ್ಕೃತಿಕ ರಾಷ್ಟ್ರೀಯತೆಯ ನಿಯಂತ್ರಣ ಯಾಕಾಗಿ ಎಂಬ ಪ್ರಶ್ನೆಯನ್ನು ಎತ್ತುವ ಮೂಲಕ ಅದನ್ನು ಪರಿಶೋಧಿಸುವ ಅವಶ್ಯಕತೆ ಇದೆ. ಸಾಂಸ್ಕೃತಿಕ ರಾಷ್ಟ್ರೀಯತೆ ಎಂದಾಗ 'ರಾಷ್ಟ್ರೀಯತೆ' ಅನ್ನುವುದೊಂದಿದೆ ಎಂಬ ಮೂಲ ಕಲ್ಪನೆ ಜಾಗೃತಗೊಳ್ಳುವ ವಿವೇಕವೊಂದು ನಮ್ಮನ್ನು ಕಾಡದಿದ್ದರೆ ಸ್ಥಾಪಿತ ಸಾಂಸ್ಕೃತಿಕ ಸ್ವರೂಪದಲ್ಲಿ ಕಳೆದುಹೋಗುತ್ತೇವೆ. ಆದಿಮ ಮನುಷ್ಯನ ಪ್ರಾಕೃತಿಕ ಚಿಂತನ ಕ್ರಮ ಆತನ ಬದುಕನ್ನು ನಿರ್ಧರಿಸುತ್ತಿತ್ತು ಮತ್ತು ಬದುಕಿನ ರೀತಿ, ನೀತಿ, ಮೌಲ್ಯಗಳು ನಿರ್ದಿಷ್ಟ ಕಾಲ, ಸಂದರ್ಭ ಮತ್ತು ಅವಶ್ಯಕತೆಯನ್ನು ಆಧರಿಸಿ ಕಾಲಕಾಲಕ್ಕೆ ಪರಿಷ್ಕರಣ ಹೊಂದುತ್ತಿದ್ದವು. ಪ್ರಕೃತಿ ವಿಕೋಪಗಳಿಗೆ ಹೆದರಿ ಭಯದಿಂದ ಪ್ರಕೃತಿ ಆರಾಧನೆಯಲ್ಲಿಯೂ ಆದಿಮ ಮಾನವ ತೊಡಗಿದ್ದ ಎಂಬ ವಿದ್ವಾಂಸರ ಅಭಿಮತವಿದೆ.

ಮುಂದೆ ಬಂದಂತಹ ಆರ್ಯರು/ವೈದಿಕರು ಮೂಲ ನಿವಾಸಿಗಳ ಈ ಭಯ ಮತ್ತು ಮೌಢ್ಯವನ್ನೇ ಬಂಡವಾಳವಾಗಿಸಿಕೊಂಡು ತಮ್ಮ ಅಧಿಕಾರ ಸ್ಥಾಪಿಸಲು ಅಸ್ತ್ರವಾಗಿಸಿಕೊಂಡದ್ದು ಐತಿಹಾಸಿಕ ಸಂಗತಿಯಾಗಿದೆ.

ಖ್ಯಾತ ಸಂಸ್ಕೃತಿ ಚಿಂತಕರಾದ ಶಂ. ಬಾ. ಜೋಶಿಯವರು ವ್ಯಾಸಪಂಥದ ಹುಟ್ಟಿನಿಂದಾಗಿ ಜೀವನ-ಸಾಹಿತ್ಯ-ಸಂಸ್ಕೃತಿಯಲ್ಲಿ ಬದಲಾವಣೆ ಬಂತು ಎಂದು ಆಧಾರ ಸಹಿತ ಸಂಶೋಧಿಸಿದ್ದಾರೆ. ಈ ವ್ಯಾಸಪಂಥವನ್ನು ಚಾಂದ್ರಪಂಥ ಅಂದರೆ ಕತ್ತಲೆ/ಅಜ್ಞಾನಿಪಂಥ ಎಂದು ಕರೆದಿದ್ದಾರೆ. ಚಾಂದ್ರಪಂಥವು ಸೂರ್ಯೋಪಾಸಕರ ಅಂದರೆ ಬೆಳಕಿನ ಪಂಥದ ಮೇಲೆ ಹೇಗೆ ಸವಾರಿ ಮಾಡಿತು ಅನ್ನುವುದೇ ಅದರ ಒಗಟುಗಳಾಗಿವೆ.

ನಾವು ರಾಷ್ಟ್ರೀಯ ಕಾವ್ಯಗಳೆಂದು ಹೇಳುತ್ತಿರುವ ರಾಮಾಯಣ-ಮಹಾಭಾರತಗಳ ರಚನೆಯ ವ್ಯಾಸಪಂಥವು ಭಾರತೀಯತೆಯ ಜಾಗದಲ್ಲಿ ಧರ್ಮ/ಧಾರ್ಮಿಕತೆಯನ್ನು ಇಟ್ಟಿತು. 'ಭಾರತೀಯತೆ' ಅನ್ನುವ ಐಡೆಂಟಿಟಿಯನ್ನು ಅಳಿಸುವಲ್ಲಿ, ಧಾರ್ಮಿಕತೆಯ ಐಡೆಂಟಿಟಿಯನ್ನು ಸ್ಥಾಪಿಸುವಲ್ಲಿ ನಡೆದ ಸಾಂಸ್ಕೃತಿಕ ರಾಜಕಾರಣ ಅಕ್ಷರ ವಂಚಿತ ಜನಸಮುದಾಯದ ಮನಸ್ಸಲ್ಲಿ ತುಂಬಲು/ಸ್ಥಾಪಿಸಲು ಶಾಸ್ತ್ರ-ಪುರಾಣ-ಕಾವ್ಯಗಳ ರಚನೆಯ ಮೂಲಕ ಗಟ್ಟಿಗೊಳಿಸಲು ಪ್ರಾರಂಭಿಸಿತು. ಭಾರತೀಯತೆಯ ಜಾಗದಲ್ಲಿ ಧರ್ಮವನ್ನು ಹಾಗೂ ಮನುಷ್ಯನ ಜಾಗದಲ್ಲಿ ದೇವರನ್ನು ಇಡುವ ಮೂಲಕ ಮನುಷ್ಯನ ಜೀವನವನ್ನು ನಗಣ್ಯವಾಗಿಸಿತು. ಸ್ವರ್ಗ-ನರಕ, ಪಾಪ-ಪುಣ್ಯ ಎಂಬ ಹುಸಿ ತತ್ವಗಳ ಮೂಲಕ ಧಾರ್ಮಿಕ ನಿಯಂತ್ರಣದ ತಂತ್ರವೊಂದು ರೂಪುಗೊಂಡಿತು. ಇವು ಮನುಷ್ಯಪ್ರಜ್ಞೆಯನ್ನು ಹೀನಗೊಳಿಸುವಲ್ಲಿ ಪ್ರಮುಖ ಅಸ್ತ್ರಗಳಾದವು. ಇವು, ಜೀವಂತವಿದ್ದಾಗ ಸಿಗುವುದಿಲ್ಲ; ಸತ್ತ ಮೇಲೆ ಲಭಿಸುತ್ತವೆಂದು 'ಸ್ವರ್ಗಸುಖದ' ಸಂಭ್ರಮವನ್ನು ನಿರೀಕ್ಷೆಯಲ್ಲಿಟ್ಟು ಪರಲೋಕದ ಚಿಂತನೆಯತ್ತ ಒಯ್ಯಿತು. ಸತ್ತ ಮೇಲೆ ಸ್ವರ್ಗ ಸಿಗಬೇಕಾದರೆ ಹೇಗೆ ದಾನ-ಧರ್ಮ ಕಾರ್ಯಗಳಲ್ಲಿ ತೊಡಗಬೇಕು, ಹೇಗೆ ಸೇವಕನಾಗಿರಬೇಕು ಎಂಬ ಸಾಂಸ್ಕೃತಿಕ ಬದುಕಿನ ಆಚರಣಾ ಕ್ರಮಗಳನ್ನು ನಿಗದಿಗೊಳಿಸಿತು.

ರಾಮಾಯಣ ರಚನೆಯ ಪೂರ್ವದಲ್ಲಿ ನಡೆಯಿತೆಂದು ಹೇಳಲಾದ ಪವಾಡ (Myth) ಸದೃಶ ಕಥೆಯು "ಹುತ್ತ" ಅನ್ನುವ ಸಂಕೇತವನ್ನು ಸೃಷ್ಟಿಸಿತು ಮತ್ತು ಅದನ್ನು ರಂಜನೀಯವಾಗಿ ಹೇಳುವ ಮೂಲಕ ಮಾನಸಿಕ ದಾಸ್ಯ ಅಥವಾ ಗುಲಾಮಿ ಸಂಸ್ಕೃತಿಯನ್ನು ಹುಟ್ಟುಹಾಕಿತು. ಹುತ್ತದ ಸಾಂಕೇತಿಕತೆಯು ಮನುಷ್ಯನ ಚಲನಶೀಲ ಆಲೋಚನೆಯ ಶಕ್ತಿಯನ್ನು (ಚಿತ್ತವನ್ನು) ಸ್ಥಗಿತಗೊಳಿಸಿ ಸ್ಥಾಪಿತ ಮಾದರಿಗಳನ್ನು ಒಪ್ಪಿಕೊಳ್ಳುವ, ಆಚರಿಸುವ ನಡವಳಿ (Ritual)ಯನ್ನು ಹೇಳುತ್ತದೆ. ಪಾಪ-ಪುಣ್ಯಗಳ ಪರಿಕಲ್ಪನೆಯ ಮೂಲಕ ಸಾಧಿಸಿದ್ದನ್ನು ಹೇಳುತ್ತದೆ. ನೈಸರ್ಗಿಕವಾಗಿ ಬದುಕುತ್ತಿದ್ದ ಬೇಡ ತಾನು, ತನ್ನ ಕುಟುಂಬ, ಸಮುದಾಯ ಎಂಬ ಸಾಂಘಿಕ ಜೀವನ ಮಾಡುತ್ತಿದ್ದುದನ್ನು ಬಿಟ್ಟು ಪರ ಅಥವಾ ಪರಲೋಕದ ಚಿಂತನೆಗಳನ್ನು ಅಳವಡಿಸಿಕೊಳ್ಳುವಂತೆ ಮಾಡಿದ ತಂತ್ರ. ಅದೇ ಸ್ವರ್ಗ-ನರಕದ





ಪರಿಕಲ್ಪನೆ. 'ರಾಮ' ಧ್ಯಾನ/ಜಪ ಮಾಡಲು ಹೇಳಿದಾಗ ಆತನ ನಾಲಿಗೆಯೇ ಹೊರಳುವುದಿಲ್ಲ. ಹಾಗಾದರೆ ನಿನಗೆ ಏನು ಗೊತ್ತು ಎಂದು ಋಷಿಗಳು ಕೇಳಿದಾಗ 'ಮರ' ಗೊತ್ತು ಎಂದು ಹೇಳುವ ಬೇಡ ನಿಸರ್ಗ/ಪ್ರಕೃತಿ ತತ್ವವನ್ನು ಹೇಳುತ್ತಾನೆ. ಈ ಪ್ರಕೃತಿ ತತ್ವವು ಬುದ್ಧನದಾಗಿತ್ತು ಎಂಬುದು ತಿಳಿದ ಸಂಗತಿ. 'ಮರ'ದಿಂದ 'ರಾಮ' ನುಡಿ/ಚಿಂತನೆಯತ್ತ ಹೊರಳಿದ ಬೇಡನ ನಾಲಿಗೆ 'ಮತಾಂತರ'ದ ಪ್ರಸಂಗದಂತೆ ಧ್ವನಿಸುತ್ತದೆ. ಈ ಧಾರ್ಮಿಕ ಬದಲಾವಣೆ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗುತ್ತದೆ. 'ಬೇಡ' ವಾಲ್ಮೀಕಿಯಾಗಿ ರೂಪಾಂತರ ಹೊಂದಿದ್ದು, ಅನಂತರವೆ ರಾಷ್ಟ್ರೀಯ ಮಹಾಕಾವ್ಯವನ್ನು ಬರೆದದ್ದು, ಸಾಂಸ್ಕೃತಿಕ ರಾಷ್ಟ್ರೀಯತೆ (ರಾಮರಾಜ್ಯದತ್ತ)ಯತ್ತ ಪಲ್ಲಟ ಹೊಂದಿದ ಕಾಲಘಟ್ಟವೇ ಆದಂತೆ ಕಾಣುತ್ತದೆ. ಚಿತ್ತವನ್ನು ಹುತ್ತಗಟ್ಟಿಸುವ ಈ ಪ್ರಯೋಗವನ್ನು ಡಾ॥ ಅಂಬೇಡ್ಕರ್‌ರ ಈ ಮಾತಿನ ಮೂಲಕ ಗಮನಿಸಬಹುದಾಗಿದೆ. 'ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ಮನುಷ್ಯನ ಕೈಕಾಲುಗಳಿಗೆ ಇನ್ನುಳಿದ ಇತರೆ ಅಂಗಗಳಿಗೆ ಬೇಡಿ ಹಾಕಿ ಗುಲಾಮ/ಜೀತಗಾರರನ್ನಾಗಿ ಇಟ್ಟುಕೊಂಡರೆ, ನನ್ನ ದೇಶದಲ್ಲಿ ಮನುಷ್ಯನ ಮೆದುಳಿಗೆ ಬೇಡಿ ಹಾಕಲಾಗಿದೆ.' ಮಾನಸಿಕ ದಾಸ್ಯದಿಂದ ಮನುಷ್ಯನನ್ನು ಬಿಡುಗಡೆಗೊಳಿಸುವುದು ಸಂಕೀರ್ಣವಾಗಿದೆ. ಇದು ಧರ್ಮ, ದೇವರುಗಳೆಂಬ ಸಾಂಸ್ಕೃತಿಕ ಭಾವನಾತ್ಮಕತೆಗೆ ಸಂಬಂಧಿಸಿದೆ. ಭಾವನೆಗಳನ್ನು ಮನುಷ್ಯನ ಜೀವಪರವಾಗಿ ಬದಲಾಯಿಸಿಕೊಳ್ಳಲು ಸಾಧ್ಯವಾಗದಂತೆ ಬ್ರೈನ್‌ವಾಶ್ ಮಾಡಲಾಗಿದೆ.

ಆರ್ಯರ ಈ ಪರಿಕಲ್ಪನೆಗಳ ತಂತ್ರವನ್ನು ಬುದ್ಧಗುರು ಒಡೆಯುವ ಪ್ರಯತ್ನ ಮಾಡಿದರು. "ಪುರುಷಯಾಗ" ಎಂಬ ಪ್ರಯೋಗದ ಮೂಲಕ ಪುರುಷ ನಡವಳಿಕೆಗಳನ್ನು ತಿದ್ದಿದರು. ಧರ್ಮ, ದೇವರು, ಯಜ್ಞ-ಯಾಗಗಳ ಕುರಿತು ಜನರಿಗೆ ತಿಳಿಯಪಡಿಸುತ್ತ ಮನುಷ್ಯನನ್ನು ಇಹದ ಬದುಕಿಗೆ ತಂದರು. ಇದನ್ನು ಧಾರ್ಮಿಕ ಕ್ರಾಂತಿ ಮಾಡುವ ಮೂಲಕ ಸಾಮಾಜಿಕ-ರಾಜಕೀಯ ಕ್ರಾಂತಿಯನ್ನು ಬುದ್ಧಗುರು ಸಾಧಿಸಿದ. "ಯಜ್ಞ-ಯಾಗಗಳನ್ನು ಮಾಡುವ ಮತ್ತು ಬಲಿಕೊಡುವ ಮೂಲಕ ಸ್ವರ್ಗ ಸಿಗುವುದಾದರೆ ಮೊದಲು ಬ್ರಾಹ್ಮಣರೇ ಯಜ್ಞದಲ್ಲಿ ಬಲಿಯಾಗುತ್ತಿದ್ದರು" ಎಂದು ಜನರಲ್ಲಿ ಎಚ್ಚರವನ್ನು ಮೂಡಿಸಿದ್ದರು.

ಮುಂದೆ ಬಂದ ವಚನಕಾರರು ಸ್ವರ್ಗ-ನರಕ ಬೇರೆಲ್ಲಿ ಇಲ್ಲ ಎಂದು ಹೇಳುವ ಮೂಲಕ ಮನುಷ್ಯನ ಇಹದ ಬದುಕಿಗೆ ಪ್ರಾಮುಖ್ಯತೆ ನೀಡಿದರು. ಆಧುನಿಕ ಚಿಂತಕರಾದ ಮಹಾತ್ಮ ಫುಲೆಯವರು ಸ್ವರ್ಗ-ನರಕ ಈ ಹೆಸರಿನ ಊರುಗಳೇ ಈ ಭೂಮಿಯ ಮೇಲೆ ಇಲ್ಲ ಎಂದು ವೈದಿಕ ಚಿಂತನೆಯ ಹುಸಿ ಪರಿಕಲ್ಪನೆಗಳನ್ನು ಜಾಲಾಡಿಸಿದರು.

ಪಾಪ-ಪುಣ್ಯದ ಹುಸಿ ಡಾಂಭಿಕತೆಯನ್ನು 'ಪುಣ್ಯ' ಎಂಬ ವೇಶ್ಯೆ ಬಯಲಿಗೆಳೆದಳು. ಅವಳಿಗೆ "ನಿನ್ನ ವೇಶ್ಯಾವಾಟಿಕೆಯಿಂದ ಪಾಪ ಮಾಡಿದ್ದೀಯಾ. ಗಂಗಾ ನದಿಯಲ್ಲಿ ಸ್ನಾನ ಮಾಡಿದರೆ ಪುಣ್ಯ ಬರುತ್ತದೆ" ಎಂದು ಹೇಳಿದಾಗ – "ಹಾಗಾದರೆ ಗಂಗಾ ನದಿಯಲ್ಲಿರುವ ಮೀನುಗಳೆಲ್ಲ ಸ್ವರ್ಗಕ್ಕೆ ಹೋಗುತ್ತಿದ್ದವು" ಎಂದು ಪ್ರತ್ಯುತ್ತರ ನೀಡುವ ಮೂಲಕ ಪಾಪ-ಪುಣ್ಯದ ಪರಿಕಲ್ಪನೆಯನ್ನು ಒಡೆಯುತ್ತಾಳೆ. ಬಿ. ಕೃಷ್ಣಪ್ಪ ಅವರು "ಪಾಪ ಅನ್ನುವುದು ಮೈಮೇಲಿನ ಧೂಳೇ ?" ಎಂದು ಪ್ರಶ್ನಿಸಿದ್ದಾರೆ.

ಇಹದ ಮನುಷ್ಯನನ್ನು ಮಾನಸಿಕವಾಗಿ ಹಿಡಿದಿಟ್ಟುಕೊಂಡ ವೈದಿಕರು ಮೂಲ ನಿವಾಸಿಗಳ ಭೂಮಿ/ಆಸ್ತಿ ಮತ್ತು ಅವರು ಹೊಂದಿರುವ ರಾಜ್ಯಾಧಿಕಾರವನ್ನು ಕಿತ್ತುಕೊಳ್ಳುವ ತಂತ್ರಗಳನ್ನು ರೂಪಿಸಿದರು. ಭಕ್ತಿ ಮತ್ತು ದಾನ ಅನ್ನುವ ಮೌಲ್ಯಗಳನ್ನು ಧಾರ್ಮಿಕ ಸಂಕೇತಗಳಾದ ದೇವರ ಹೆಸರಿನಲ್ಲಿ ಹುಟ್ಟುಹಾಕಿದರು. ಆ ಮೂಲಕ ಆಳುವ ಅಧಿಕಾರವನ್ನು ಹೊಂದಿದರು. ಪುರಾಣಗಳನ್ನು ಈ ನೆಲೆಯಲ್ಲಿ ಪರಿಶೋಧಿಸಿದ ಅಂಬೇಡ್ಕರ್‌ರು – "ಪುರಾಣಗಳನ್ನು ದೇವತೆಗಳ ಭೂ ಹೋರಾಟಗಳು" ಎಂದು ಕರೆದಿದ್ದಾರೆ. ಮುಂದುವರಿದು ಇವು ಹೆಂಗಸರನ್ನು ಮತ್ತು ಮಕ್ಕಳನ್ನು ರಂಜಿಸಲು ಬರೆದರು ಎಂದರು.

ಅಧಿಕಾರದ ನೆಲೆಯಲ್ಲಿ ಪುರಾಣಗಳನ್ನು ನೋಡಿದ ಚಿಂತನ ಕ್ರಮದಲ್ಲಿಯೇ ನೋಡುವ ಜರೂರು ಇಂದಿನದಾಗಿದೆ. ಬಲಿ ಚಕ್ರವರ್ತಿಯಿಂದ ಭೂಮಿಯನ್ನು ದಾನವಾಗಿ ಪಡೆದ ವಾಮನ ಅವತಾರವು ಭಾರತದ ಮೂಲ ನಿವಾಸಿಗಳ ಭೂ ಒಡೆತನ ಮತ್ತು ರಾಜ್ಯಾಧಿಕಾರವನ್ನು ಕಿತ್ತುಕೊಂಡದ್ದರ ಸಂಕೇತವಾಗಿ ಕಾಣುತ್ತದೆ. ಭಕ್ತಪ್ರಹ್ಲಾದ ಮತ್ತು ಹಿರಣ್ಯಕಶ್ಯಪು ಕಥನವು ಮೇಲ್ನೋಟಕ್ಕೆ ಹರಿ-ಹರರ ಸಂಘರ್ಷದಂತೆ ಕಂಡರೂ ದಾನವಾಗಿ ಕೊಡಲು ಒಪ್ಪದ ಅಸುರ (ದಲಿತ) ರಾಜರಿಂದ ಹೋರಾಟದ ಮೂಲಕ ಅದೂ ಕೂಡ ಪ್ರತ್ಯಕ್ಷವಾಗಿರದೆ ಮೋಸದ ಯುದ್ಧ / ಹೋರಾಟದ ಮೂಲಕ ರಾಜ್ಯಾಧಿಕಾರವನ್ನು ಕಿತ್ತುಕೊಂಡದ್ದರ ಸಂಚಿನ ಭಾಗವಾಗಿ ಕಾಣುತ್ತದೆ. ಹೀಗೆ ಭಾರತೀಯ ವೈದಿಕ ಪುರಾಣಗಳನ್ನು ಭೂಒಡೆತನ ಮತ್ತು ಅಧಿಕಾರದ ನೆಲೆಯಲ್ಲಿ ನೋಡಿದಾಗ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಸ್ಥಾಪಿಸಿದ್ದರ ಹಿಂದಿನ ತಂತ್ರ ಸ್ಪಷ್ಟವಾಗುತ್ತದೆ. ಮೊನ್ನೆ ಕೇರಳದ "ಓಣಂ" ಹಬ್ಬದ ಸಂದರ್ಭದಲ್ಲಿ "ವಾಮನ ಹಬ್ಬ" ಎಂದು ಬಿ.ಜೆ.ಪಿ.ಯ ರಾಷ್ಟ್ರೀಯ ಪಕ್ಷದ ಅಧ್ಯಕ್ಷರಾದ ಅಮಿತ್ ಷಾ ಟ್ವಿಟ್ ಮಾಡಿದ್ದರ ಔಚಿತ್ಯವನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಅಲ್ಲದೆ ಈ ಪುರಾಣಗಳಿಗೆ ಪುನಃಶ್ಚೇತನ ನೀಡುತ್ತಿರುವುದರ ಹಿಂದಿನ ಉದ್ದೇಶವನ್ನು ಅರಿಯಬಹುದಾಗಿದೆ.

ಅಸುರರು/ರಾಕ್ಷಸರು ಅನ್ನುವ ಜನಾಂಗವೇ ಇರಲಿಲ್ಲ ಎಂದಿರುವ ಅಂಬೇಡ್ಕರ್‌ರು ಭೀಮಕಾಯದ, ಬಲಾಢ್ಯರಾದ, ಧೈರ್ಯಶಾಲಿ ಶೂರರಾದ ಜನಸಮುದಾಯಗಳಿದ್ದವು ಎಂದಿದ್ದಾರೆ. ಬಲಾಢ್ಯರಾದ ಜನಸಮುದಾಯಗಳು ಈ ನೆಲದ ಮೂಲ ನಿವಾಸಿಗಳಾಗಿದ್ದರು. ಅವರನ್ನು ದೈಹಿಕವಾಗಿ ಎದುರಿಸದ ವೈದಿಕರು ಸಂಚುಗಳ ಮೂಲಕ ಸೋಲಿಸಿದರು ಹಾಗೂ ತಮ್ಮನ್ನು ಸುರ/ದೇವತೆಗಳೆಂದು ಮೂಲ ನಿವಾಸಿಗಳನ್ನು ಅಸುರ/ರಾಕ್ಷಸರೆಂದು ತಮ್ಮ ಪುರಾಣ-ಕಾವ್ಯಗಳಲ್ಲಿ ಬರೆದುಕೊಂಡು ತಮ್ಮನ್ನು ದೈವತ್ವಕ್ಕೇರಿಸಿಕೊಂಡರು ಎಂದು ತಮ್ಮ





ಸಂಶೋಧನೆಯ ಮೂಲಕ ತೋರಿಸಿದ್ದಾರೆ. ಇಂತಹ ಮೂಲ ನಿವಾಸಿಗಳ ಸಮುದಾಯಗಳಲ್ಲಿ 'ನಾಗ' ಜನಾಂಗವೂ ಒಂದು. "ಸರ್ಪಯಾಗ" ಎಂಬ ಯಾಗ ಮಾಡಿ ನಾಗಗಳನ್ನು ನಾಶ ಮಾಡಿದೆವು ಎಂದು ಕಥೆ ಕಟ್ಟಿದ ವೈದಿಕರು ಸರ್ಪಯಾಗವನ್ನು ನಾಗವಂಶವನ್ನು ನಾಶ ಮಾಡಿದ್ದರ ಸಂಕೇತವಾಗಿಸಿದರು. ಹಾವು ಮನೆಯಲ್ಲಿ ಬಂದರೆ "ಆಸ್ತಿಕ ಋಷಿ ಕಾಳಭೈರವ" ಎಂದು ಬರೆವ ಜನಸಾಮಾನ್ಯರಿಗೆ ಈ ಐತಿಹ್ಯದ ಹಿಂದೆ ನಾಗ ಜನಾಂಗದ ಚರಿತ್ರೆ, ಇತಿಹಾಸ ಮರೆಯಾಗಿರುವುದು ಗೋಚರಿಸುವುದಿಲ್ಲ. ಈ ಸಂಕೇತಗಳ ಆಚರಣೆಯ ಹಿಂದಿನ ಹುನ್ನಾರಗಳು ನಮ್ಮ ವಿನಾಶವನ್ನೇ ಸಾರುತ್ತಿವೆ. ಅಂಬೇಡ್ಕರ್‌ರು "ನಾಗ"ಗಳಲ್ಲಿ ಎರಡು ವಿಧಗಳಿದ್ದು, ಒಂದು ಅಂಡದಿಂದ ಹುಟ್ಟಿದ ನಾಗಗಳು ಮತ್ತು ಯೋನಿಯಿಂದ ಹುಟ್ಟಿದ ನಾಗಗಳು ಎಂದು ಆಧಾರ ಸಹಿತ ಸರ್ಪಯಾಗ ಸಂಕೇತವನ್ನು ಒಡೆದರು.

ಶಂ. ಬಾ. ಜೋಶಿಯವರು – ಈ ಅಹಿಃನಾಗ ಹನನ ಎಂದರೇನು ? ಎಂಬ ಪ್ರಶ್ನೆಯನ್ನು ಎತ್ತುವ ಮೂಲಕ ಪ್ರಜ್ಞಾವಂತ ಮನುಷ್ಯನನ್ನು ನಿಯಂತ್ರಿಸಲು ಸ್ಥಿತ/ಸ್ಥಗಿತ ಪ್ರಜ್ಞಾವಂತನಾಗಿಸಲು ಈ ಸಂಕೇತವನ್ನು ಸೃಷ್ಟಿಸಿರುವುದನ್ನು ಭೇದಿಸಿದ್ದಾರೆ. "ಇಂದ್ರನನ್ನು 'ಅಹಿ–ಜಿತ್' ಎನ್ನುವಲ್ಲಿ ಔಚಿತ್ಯವಿದೆಯೆ ಹೊರತು ಅಹಿ–ಹಂತಕನೆಂಬಲ್ಲಿ ಇಲ್ಲ ! ಹನ್> ಹಂತಕನೆಂಬ ಮಾತು, ಇಂದ್ರ ಶತ್ರುಗಳ ಅತಿಶಯೋಕ್ತಿಯ ಮಾತು. ನಾಗ (ಸರ್ಪ) ಯಾಗ ಮಾಡಿ ಈ ಮೃತ್ಯುಶಕ್ತಿಯನ್ನೇ ಇಲ್ಲವಾಗಿಸುವ ಕ್ರೂರ ವಿನೋದವು ಮಹಾಭಾರತದಲ್ಲಿ ಇದೆ. ಸ್ವರ ಪಾತಳಿಯ ಧೀಃ ಪ್ರಜ್ಞಾರೂಪೀ ಸೂರ್ಯನ ಪರ್ಯಾಯನು ಎಂಬ ಇಂದ್ರನು, ನೆಲದ ಮೇಲಿನ ಅಹಿಃ ನಾಗಃ ಲಿಂಗನ ಹಂತಕನು ಎಂದರೇನು ? ಇಲ್ಲಿ 'ಮನು–ಜ' ಮನು; ವೈವಸ್ವತನು ಪ್ರಜ್ಞಾರೂಪ ಸೂರ್ಯನ ಅಂಶವಾಗುತ್ತಿದ್ದಾನೆ. ಮಾನವನೊಳಗಿನ ಪ್ರಜ್ಞಾ; ಮನಸ್ಸು ಜಾಗೃತವಿದ್ದಲ್ಲಿ, ಈ ಮಾನವನು ತನ್ನ ನರ(ಳ)ತ್ವದ ಪ್ರಭಾವಕ್ಕೆ ಬಲಿ ಬೀಳಲು ಶಕ್ಯವಿಲ್ಲ. ನರ(ಳ) ಸಂಪ್ರದಾಯದ ಗೀತೆಯ 'ಭಗ'–ವಂತನು, 'ಸ್ಥಿತ (ಸ್ಥಗಿತ) ಪ್ರಜ್ಞನಾಗು' ಎಂದು ಬೋಧಿಸಿರುವ ಕಾರಣವೇನು ಮತ್ತೆ ? ಅಹಿ–ಹನನದಲ್ಲಿ ಇಂದ್ರನಿಗೆ 'ತ್ರಿತ ಆಪ್ತ್ಯ' = ಮಾನವನು ನೆರವಾಗುತ್ತಾನೆ" (ಶಂ. ಬಾ. ಕೃತಿ ಸಂಪುಟ : ಐದು, ಪುಟ–೩೭೩) ಎಂದು ವಿವರಿಸಿದ್ದಾರೆ. ಇಂದ್ರನಿಗೆ ಮಾನವನು ನೆರವಾಗುವುದು ಮತ್ತು ಹೀಗೆ ನೆರವಾಗುವ ಮಾನವನು ಆಲೋಚನಾರಹಿತನಾಗಿ ಸ್ಥಿತ (ಸ್ಥಗಿತ) ಪ್ರಜ್ಞನಾಗುವುದರ ಹಿಂದಿನ ಮರ್ಮವಾದರು ಏನು ? ಇಂದ್ರ ದೇವರಿಗೆ ಅಧಿಕಾರವನ್ನು ವರ್ಗಾಯಿಸಿ ಸೇವಕ ಅಥವಾ ಅಧೀನನಾಗಿ ಬದುಕುವುದು ನಾಗ ಹನನದ ಹಿಂದಿನ ಉದ್ದೇಶ ಮತ್ತು ಕ್ರಿಯೆ ಆಗಿದೆ. ಇನ್ನೂ ಮುಂದುವರಿದು ನಾಗಃ ಲಿಂಗ ಅಂದರೆ ಸಿಗ್ಮಂಡ್ ಫ್ರಾಯ್ಡ್‌ನ ಥಿಯರಿಯಂತೆ ಲೈಂಗಿಕ ಸ್ವಾತಂತ್ರ್ಯದ ನಿರ್ಬಂಧದ ರೂಪಕವಾಗಿದೆ ಹಾಗೂ ಮನುಷ್ಯನ ವೈಯಕ್ತಿಕ ಅನುಭವದ ಆತ್ಮವಂಚನೆಯ ಸಂಭ್ರಮಕ್ಕೆ ಕಾರಣವಾಗಿದೆ ಎಂದಿದ್ದಾರೆ.

ಜಿ. ರಾಮಕೃಷ್ಣ ಅವರು, ಋಗ್ವೇದದಲ್ಲಿ ಮೂರು ಸಮುದಾಯಗಳ ಉಲ್ಲೇಖವಿದೆ. ಅದರಲ್ಲಿ 'ಪಣಿ' ಅನ್ನುವ ಸಮುದಾಯವೂ ಒಂದು ಎಂದಿದ್ದಾರೆ (ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ). 'ಪಣಿ' ಎಂದರೆ ಅದು 'ನಾಗ' ಜನಾಂಗವೇ ಆಗಿದೆ. ಡಾ॥ ಜಿ. ಭಾಸ್ಕರ್‌ಮಯ್ಯ ಅವರು 'ಗರುಡ' ಮತ್ತು 'ನಾಗ' ಒಬ್ಬನೇ ಪ್ರಜಾಪತಿ ಕಶ್ಯಪನ ಸಂತಾನ. ನಾಗನು ಕದ್ರುವಿನ ಮಗನಾದರೆ ಗರುಡನು ವಿನುತೆಯ ಮಗ. ಇಲ್ಲಿ 'ಗರುಡ' ಮತ್ತು 'ನಾಗ' ಇವುಗಳನ್ನು ಗಣ ಸಮಾಜದ ಪ್ರತೀಕ (ಟೋಟೆಮ್) ಎಂದು ತಿಳಿಯಬೇಕಾಗಿದೆ... ಅದೇ ಮಹಾಭಾರತ, ರಾಮಾಯಣಗಳಲ್ಲಿ ಅವುಗಳ ತೀವ್ರ ವಿರೋಧವನ್ನು ಗಮನಿಸಬಹುದು" ಎಂದು ವಿವರಿಸಿದ್ದಾರೆ. ಮುಂದುವರಿದು –"ಪುರಾಣಗಳಲ್ಲಿ ಗರುಡ ನಾಗಗಳನ್ನು ನಾಶ ಮಾಡುತ್ತಾನೆ. ಬೌದ್ಧ ಸಾಹಿತ್ಯದಲ್ಲಿ ನಾಗರಾಜನೆದುರು ಗರುಡ–ಇಂದ್ರ ಸೋಲೊಪ್ಪಿಕೊಳ್ಳುತ್ತಾನೆ. ಈ ಮಿಥ್‌ಗಳ ಒಳಗೆ ಭಾರತದ ಇತಿಹಾಸ ಅಡಗಿ ಕುಳಿತಿದೆ. ಮಿಥ್‌ಗಳನ್ನು ಒಡೆಯುವ ಸಂಶೋಧನೆಯಿಂದ ಮಾತ್ರ ಇತಿಹಾಸದ ವಾಸ್ತವವನ್ನು ಅರಿಯಲು ಸಾಧ್ಯ" (ಋಗ್ವೇದ ಮತ್ತು ಜನ ಸಂಸ್ಕೃತಿ : ಪುಟ. ೫೧ ಮತ್ತು ೫೩). ಭಾರತದ ಮೂಲ ನಿವಾಸಿಗಳಿಂದ ಭೂಒಡೆತನ (ಆಸ್ತಿ) ಮತ್ತು ಆಳುವ ಅಧಿಕಾರವನ್ನು ಕಿತ್ತುಕೊಂಡದ್ದರ ಇತಿಹಾಸವು ಈ ಸಾಂಸ್ಕೃತಿಕ ಸಂಕೇತಗಳಲ್ಲಿದೆ.

ಮನುಷ್ಯನ ಆಹಾರೋತ್ಪನ್ನದ ಮೂಲ ಘಟಕವಾದ ಭೂಮಿಯನ್ನು ಈ ಮೇಲಿನ ಸಂಚುಗಳ ಮೂಲಕ ಕಿತ್ತುಕೊಂಡರೆ, ಈ ಆಹಾರೋತ್ಪನ್ನದ ಇನ್ನೊಂದು ಮೂಲ ಘಟಕ ಪಶು ಮತ್ತು ಪ್ರಾಣಿಗಳು. ಆದಿಮ ಮಾನವನು ಬೇಟೆ ಸಂಸ್ಕೃತಿಯಲ್ಲಿ ಕೇವಲ ಮಾಂಸಾಹಾರಿ ಆಗಿದ್ದ ಚರಿತ್ರೆ ನಮಗೆ ತಿಳಿದಿದೆ. ಬೇಟೆಯಿಂದ ಕೃಷಿಗೆ ಪಲ್ಲಟವಾದಾಗ ಮೂಲ ಮಾನವನ ಪ್ರವೃತ್ತಿಯಲ್ಲಿ ಬದಲಾವಣೆ ಕಂಡಿದೆ. ಕೃಷಿ ಮತ್ತು ಪಶುಪಾಲನಾ ಸಂಸ್ಕೃತಿ ಎರಡೂ ಒಟ್ಟೊಟ್ಟಿಗೆ ಸಾಗಿವೆ. ಆದರೆ ಆಹಾರ ಭೇದ ಸಂಸ್ಕೃತಿ ಇದ್ದ ಉಲ್ಲೇಖಗಳು ಇಲ್ಲ. ತಮಗೆ ಅನ್ನ ಕೊಡುವ ಭೂಮಿಯನ್ನು ತಾಯಿ/ದೇವರು ಎಂದು ಪೂಜಿಸಿದಂತೆ ಕೃಷಿಗೆ ಎತ್ತುಗಳನ್ನು ಕೊಡುವ ಆಕಳನ್ನು ತಾಯಿ/ದೇವತೆ/ಮಾತೆ ಎಂದೇ ಗೌರವಿಸಿದ್ದು ಇದೆ. ಆಕಳನ್ನು ಆಹಾರದ ಭಾಗವಾಗಿಯೂ ಅನ್ನದಂತೆ ಜನಪದರು ಪೂಜಿಸಿದ್ದೂ ಇದೆ. ಅಧಿಕಾರಕೇಂದ್ರಿತ ಪ್ರಭುತ್ವವು ಗೋವನ್ನು ಆರ್ಥಿಕ ವ್ಯವಸ್ಥೆಯ ಉತ್ಪಾದನೆಯ ಘಟಕವಾಗಿಯೂ ತನ್ನ ವಶದಲ್ಲಿಟ್ಟುಕೊಂಡಿತ್ತು.

ವೈದಿಕಶಾಹಿಯ ಭೂದಾನ, ಸಂಪತ್ತಿನ ದಾನದಂತೆ 'ಗೋದಾನ'ವನ್ನು ದಾನ ಮೌಲ್ಯದ ಭಾಗವಾಗಿಸಿದ್ದನ್ನು ಕಾಣುತ್ತೇವೆ. ಬ್ರಾಹ್ಮಣರಿಗೆ ಗೋವುಗಳನ್ನು ದಾನವಾಗಿ ಕೊಟ್ಟ ಉಲ್ಲೇಖಗಳು (ಗೋಶಾಸನಗಳು) ಇತಿಹಾಸದಲ್ಲಿ ಹಾಗೂ ಶಾಸ್ತ್ರ–ಕಾವ್ಯ–ಪುರಾಣಗಳಲ್ಲಿ ಹೇರಳವಾಗಿ ಸಿಗುತ್ತವೆ. ವೈದಿಕರು ಯಜ್ಞಯಾಗಗಳಲ್ಲಿ ಆಕಳುಗಳನ್ನು ಸಾಮೂಹಿಕವಾಗಿ ಬಲಿಕೊಡುತ್ತಿದ್ದುದನ್ನು ಬುದ್ಧಗುರು ಖಂಡಿಸಿದ್ದನ್ನು ಹಾಗೂ ಸಾಮೂಹಿಕ ಬಲಿಕೊಡುವುದನ್ನು ನಿಷೇಧಿಸಿದ್ದನ್ನು ಕಾಣುತ್ತೇವೆ. ಬುದ್ಧನ ನಂತರ ಬಂದ ಬ್ರಾಜಿಷ್ಟು – ಮನು ಮತ್ತು ಪುಷ್ಯಮಿತ್ರರು ಚಾತುರ್ವರ್ಣ್ಯ ಮತ್ತು ಜಾತಿಪದ್ಧತಿಯನ್ನು ಕಡ್ಡಾಯವಾಗಿ ಜಾರಿಗೊಳಿಸುವ ಮೂಲಕ ಬುದ್ಧನ ಕ್ರಾಂತಿಗೆ ಪರ್ಯಾಯವಾಗಿ ಪ್ರತಿಕ್ರಾಂತಿಯನ್ನು ಮಾಡಿದರು. ಜಾತಿಯಲ್ಲಿ ಮೇಲು–ಕೀಳನ್ನು ಸ್ಥಾಪಿಸಲು ಆಹಾರ ಪದ್ಧತಿಯಲ್ಲೂ ಭೇದ ಸಂಸ್ಕೃತಿಯನ್ನು ಹುಟ್ಟು ಹಾಕಿದರು. ಯಜ್ಞದಲ್ಲಿ ಸಾಮೂಹಿಕವಾಗಿ ಗೋವುಗಳನ್ನು ಬಲಿ ಕೊಡಬೇಡಿ ಎಂಬ ಬುದ್ಧನ "ದಯೆ" ತತ್ವಕ್ಕೆ ಪರ್ಯಾಯವಾಗಿ ಮಾಂಸಾಹಾರ ನಿಷೇಧದ ಜಾತಿ ಶ್ರೇಣೀಕ ಪದ್ಧತಿಯನ್ನು ಹುಟ್ಟು ಹಾಕಿದರು. "ಗೋಮಾಂಸ ನಿಷೇಧದ" ರಾಜಕಾರಣವು ಬುದ್ಧಯುಗದ ನಂತರ ಆರಂಭವಾದುದು. ಅದಕ್ಕಾಗಿ ಕಾಮಧೇನುವಿನ ಪರಿಕಲ್ಪನೆಯ ಮಿಥ್‌ಅನ್ನು ಸೃಷ್ಟಿಸಲಾಯಿತು. ಅದನ್ನು ಸಮಾಜದಲ್ಲಿ ಸ್ಥಾಪಿತ ಸತ್ಯವಾಗಿಸಲು ಸಾಂಸ್ಕೃತಿಕ ಪಠ್ಯಗಳನ್ನು ರಚಿಸಲಾಯಿತು. 'ಧರಣಿ ಮಂಡಲ ಮಧ್ಯದೊಳಗೆ' ಎಂಬ ಗೋವಿನ ಹಾಡು ಮನುಷ್ಯನ ಸ್ವಭಾವಗಳನ್ನು ಪ್ರಾಣಿ ಸಂಕೇತದ ಮೂಲಕ ನಿಯಂತ್ರಿಸಲು ಸಾಂಸ್ಕೃತಿಕ ರಾಜಕಾರಣದ ಭಾಗವಾಗಿ ಹುಲಿ ಗೋವನ್ನು ಭಕ್ಷಿಸದಂತೆ ಮಾಡುವ ಹುನ್ನಾರ ಈ ಪದ್ಯದ ತಾತ್ವಿಕತೆಯಾಗಿದೆ.





ವೈದಿಕ ಚಿಂತನೆಗಳಿಗೆ ಪರ್ಯಾಯವಾಗಿ ಅವೈದಿಕ ಚಿಂತಕರೂ ಅದೇ ಮಾದರಿಗಳಲ್ಲಿ ಸಾಂಸ್ಕೃತಿಕ ನೆಲೆಯಲ್ಲೇ ಪ್ರತಿರೋಧವನ್ನು ಒಡ್ಡಿದರು. ಅಘೋರಿ, ನಾಥ, ತಂತ್ರ ಪಂಥಗಳು ತೀವ್ರವಾದ ಪ್ರತಿರೋಧ ಒಡ್ಡಿದರೆ, ಹನ್ನೆರಡನೆ ಶತಮಾನದ ಶಿವಶರಣರು ಈ ಆಹಾರಭೇದ ಸಂಸ್ಕೃತಿಯನ್ನು ಪ್ರಶ್ನಿಸಿದರು. 'ದಾನ' ಮೌಲ್ಯದ ಜಾಗದಲ್ಲಿ "ದಾಸೋಹ" ಪದ್ಧತಿಯನ್ನು ಜೀವ ಪರವಾದ ಮೌಲ್ಯವಾಗಿಸಿದರು. ಆ ಮೂಲಕ ಜಾತಿ ವಿನಾಶ ಮತ್ತು ಸಹಬಾಳ್ವೆಯ ಜೀವನಕ್ಕೆ ಮುನ್ನುಡಿ ಬರೆದರು.

*ಕುರಿಕೋಳಿ ಕಿರುಮೀನು ತಿಂಬವರಿಗೆಲ್ಲ ಕುಲಜಕುಲಜರೆಂದೆಂಬರು.*
*ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು*
*ಅವರೆಂದು ಕೀಳು ಜಾತಿಯಾದರು ? ಜಾತಿಗಳು ನೀವೇಕೆ ಕೀಳಾಗಿರೊ ?*
*ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿ ಹೋಯಿತು.*
*ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು.*
*ಅದೆಂತೆಂದಡೆ; ಸಿದ್ದಲಿಕೆಯಾಯಿತು, ಸಗ್ಗಳೆಯಾಯಿತು.*
*ಸಿದ್ದಲಿಕೆಯ ತುಪ್ಪವನು, ಸಗ್ಗಳೆಯ ನೀರನು*
*ಶುದ್ಧವೆಂದು ಕುಡಿವ ಬುದ್ಧಿಗೇಡಿ ವಿಪ್ರರಿಗೆ ನಾಯಕ–ನರಕ ತಪ್ಪದಯ್ಯಾ.*
*ಉರಿಲಿಂಗಪೆದ್ದಿಗಳರಸು ಒಲ್ಲನವ್ವಾ*
(ಶಿವಶರಣೆಯರ ವಚನ ಸಂಪುಟ–೫; ಪು. ೨೨೫–೨೨೬)

ಎಂದು ಕಾಳವ್ವೆ ಆಹಾರ ಪದ್ಧತಿಗೆ ಹೊಸ ವ್ಯಾಖ್ಯಾನ ಮಾಡಿದಳು. ಹದಿನೈದನೇ ಶತಮಾನದಲ್ಲಿ ಬಂದ ಅವೈದಿಕ ಜನಪದ ಚಿಂತನಧಾರೆಯ ಜುಂಜಪ್ಪನ ಮಹಾಕಾವ್ಯವು ಹಸುವಿನ/ಸತ್ಯದ ಪರವಾಗಿರದೆ ಹೊಟ್ಟೆ ಹಸಿವಿನ ಕ್ರೂರತೆಯ ಹುಲಿಯ ಪರವಾಗಿದೆ. ಈ ಕಥನದಲ್ಲಿ ಹಸುವಿನ ಜಾಗದಲ್ಲಿ ನಾಗರಿಕ ಪ್ರತಿನಿಧಿಯಾಗಿ ಮೈಲಣ್ಣ ಇದೆ. ಮೈಲಣ್ಣ ತನ್ನನ್ನು ತಿನ್ನಲು ಬಂದ ಹುಲಿಗೆ "ನಾನು ಬರುತ್ತೇನೆ" ಎಂದಾಗ ಹುಲಿಯ ಪ್ರತಿಕ್ರಿಯೆ –

*ಸಾಕ್ ಮುಚ್ಚು*
*ಎಂಜಲು ಮಾತಾಡುವೆಯಾ ದಗಡೀ ಮಗನೆ*

...........................................................

*ಎಲವೋ ನರಮಾನವರೇ*
*ಬೆಂದಿದ್ದಷ್ಟು ಬೇಯಿಸಿದ್ದಿಷ್ಟು*
*ತಿಂಬ ನರಮಾನವನಿಗೆ*
*ಆಣೆ ಪ್ರಮಾಣವಿದೆಯೇನು ?*

ಎಂದು ಮುಖ್ಯ ವಾಹಿನಿಯ ಸಾಂಸ್ಕೃತಿಕ ಸತ್ಯದ ರಾಜಕೀಯಕ್ಕೆ ಮುಖಾಮುಖಿ ಆಗುವ ಮೂಲಕ ಹುಲಿಯ ಅಂದರೆ ಹಸಿವಿನ ಪರವಾಗಿ ಮಾತಾಡುತ್ತದೆ. ಇಲ್ಲಿ ಹುಲಿ ಸತ್ಯಕ್ಕೆ ಮೆಚ್ಚಿ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ; ಮೈಲಣ್ಣ ತನ್ನ ಚಿಪ್‌ಗೊಡಲಿಯಿಂದ ಹುಲಿಯನ್ನು ಕೊಲ್ಲುತ್ತಾನೆ. ಇದು ಸಮುದಾಯ, ಸಮುದಾಯಗಳ ಸಂಘರ್ಷ, ವಾಸ್ತವ ಸ್ಥಿತಿಯನ್ನು ಹೇಳುವ ಮೂಲಕ "ಸತ್ಯ" ಎಂಬ ವೈದಿಕರ ಸ್ಥಾಪಿತ ಮೌಲ್ಯಕ್ಕೆ ಹುಲಿ ಮೈಲಣ್ಣನ ಮೂಲಕ ಕೊಲ್ಲಲ್ಪಟ್ಟು ಮುಖಾಮುಖಿಯಾಗುತ್ತದೆ.

ಒಟ್ಟಿನಲ್ಲಿ ಎರಡೂ ಪಠ್ಯಗಳನ್ನು ಜೊತೆಗಿಟ್ಟು ನೋಡಿದಾಗ ನಾಗರಿಕ ಸಮುದಾಯವು ಹುಲಿಯನ್ನು ಕ್ರೂರತೆಯ ಪ್ರತೀಕವಾಗಿ ಹಸುವನ್ನು ಸತ್ಯದ ಪ್ರತೀಕವಾಗಿ ನೋಡಿ ಕೊನೆಗೆ ಹಸುವಿನ ಸತ್ಯಕ್ಕೆ ಜಯ ಒದಗಿಸುತ್ತದೆ. ಇದು ಗೋವಿನ ಹಾಡಿನಲ್ಲಿ ಕಂಡರೆ, ಜುಂಜಪ್ಪನ ಕಾವ್ಯದಲ್ಲಿ, ಹುಲಿಯ ಸಹಜ ಹಸಿವಿನ ಕಡೆಗೆ ಗಮನ ಹರಿಸಿ, ಬದುಕಿಗೆ ಬೇಕಾದ ಅನ್ನಕ್ಕೆ ಹಾಗೂ ಅದನ್ನು ಪಡೆಯುವ ಪ್ರಾಣಿ ಸಹಜ ಹಸಿವಿಗೆ ಜಯ ನೀಡಲು ಪ್ರಯತ್ನಿಸಿರುವುದನ್ನು ಕಾಣಬಹುದು. ಆದಿವಾಸಿ ಸಮುದಾಯಗಳು ಗೋವಿನ ಹಾಡಿನಂಥ ರಚನೆಗಳನ್ನು ಹೇಗೆ ಭಂಜಿಸುತ್ತವೆ ಹಾಗೂ ಹೊಸ ರಚನೆಗಳನ್ನು ಕಟ್ಟುತ್ತವೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ (ಡಾ॥ ಎಂ. ಎಸ್. ಮುತ್ತಯ್ಯ : ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ: ಪುಟ–೧೧೮). ಹಸು ಮತ್ತು ಹುಲಿಯ ಸಂಘರ್ಷ ಪ್ರಭುತ್ವದೊಂದಿಗೆ ಪಶುಪಾಲನಾ ಸಂಸ್ಕೃತಿಯ ತಳಸಮುದಾಯಗಳು ಪ್ರಭುತ್ವದ ವಶದಲ್ಲಿರುವ ಹುಲ್ಲುಗಾವಲನ್ನು ವಶಪಡಿಸಿಕೊಳ್ಳುವ ಮುಖಾಮುಖಿಯೂ ಆಗಿ ಕಾಣುತ್ತದೆ.

ಜನಪದ ಕಥನ ಗೀತೆಗಳಾದ 'ಕವುಲಿ', 'ಸಿರಿಕವುಲಿ' ಮತ್ತು 'ಹೆಬ್ಬುಲಿಗೆ ನಾನು ಕೊಟ್ಟೆನು ಭಾಷೆ' ಎಂಬ ಗೀತೆಗಳು ಒಂದಕ್ಕೊಂದು ಪರ್ಯಾಯವಾಗಿ ಹುಟ್ಟಿಕೊಂಡಂತೆ ರಚನೆಗೊಂಡಿವೆ. ಜುಂಜಪ್ಪನ ಮಹಾಕಾವ್ಯದಷ್ಟು ಪ್ರಖರವಾದ ಜೀವ ಸತ್ವದಿಂದ ಕೂಡಿರದೆ ಸಾಂಸ್ಕೃತಿಕ ರಾಜಕಾರಣದ ಭಾಗವಾಗಿ ಒಂದಕ್ಕೆ ಪ್ರತಿಕ್ರಿಯೆಯಾಗಿ ಮತ್ತೊಂದು ಹುಟ್ಟಿಕೊಂಡಂತೆ ಕಾಣುತ್ತವೆ. 'ಕವುಲಿ' ಹಾಡಿನಲ್ಲಿ ಹುಲಿ ತಿನ್ನದೇ ಬಿಟ್ಟ ಹಸುವಿನ ಚಿತ್ರ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಕ್ರೂರತೆಯ ಬದಲಾಗಿ ಮೃದುತ್ವವನ್ನು ಅಂತಸ್ಥಗೊಳಿಸಿರುವುದು, ಮುಗ್ಧ, ಪ್ರಾಮಾಣಿಕ ವ್ಯಕ್ತಿತ್ವಕ್ಕೆ ಸಂದ ಗೌರವವಾದರೆ, 'ಸಿರಿಕವಲಿ'ಯಲ್ಲಿ ಹುಲಿ ತಿನ್ನದೇ ಬಿಟ್ಟರೂ, ಹಸಿರು ಹುಲ್ಲಿನ ಆಸೆಗಾಗಿ ಎತ್ತರದ ಗುಡ್ಡಕ್ಕೆ ಹೋಗಿ ಕಾಲು ಜಾರಿ ಪ್ರಪಾತಕ್ಕೆ ಬಿದ್ದು, ಜೀವ ಕಳೆದುಕೊಳ್ಳುವುದು... ಈ ಎರಡೂ ಕತೆಗಿಂತಲೂ ಭಿನ್ನವಾದ ಘಟನೆ 'ಹೆಬ್ಬುಲಿಗೆ ನಾನು ಕೊಟ್ಟೆನು ಭಾಷೆ' ಎಂಬ ಕಥನ ಗೀತೆಯಲ್ಲಿದೆ. ಇಲ್ಲಿ ಹಿಂತಿರುಗಿ ಬಂದ ಹಸುವನ್ನು ಹುಲಿ ತಿಂದುಬಿಡುತ್ತದೆ. ಮುಗ್ಧ ಗೋವನ್ನು ನಾಶ ಮಾಡಿದ್ದಕ್ಕಾಗಿ ಹುಲಿಮರಿ ತಾಯಿಯನ್ನು ಆಕ್ಷೇಪಿಸುತ್ತದೆ. ಹಾಲು ಕುಡಿಯುತ್ತಿರುವಾಗ ಹೊಟ್ಟೆ ಬಗಿದು ತಾಯಿಯನ್ನೇ ಕೊಲ್ಲುತ್ತದೆ. ಅಷ್ಟೇ ಅಲ್ಲ; ತಬ್ಬಲಿ ಕರುವಿಗೆ ಸಮಾಧಾನ ಮಾಡಿ, ಹಿಂಡನ್ನು ಸೇರಿಕೊಳ್ಳಲು ಉಪದೇಶಿಸುತ್ತದೆ (ಸಂ : ಡಾ॥ ಶಾಲಿನಿ ರಘುನಾಥ : ಜಾನಪದ ಸಾಮಾಜಿಕ ಕಥನ ಗೀತೆಗಳು, ಪುಟ. ೩೩). ಈ ಮೂರೂ ಗೀತೆಗಳಲ್ಲಿ ಹಸುವನ್ನು ಸಂರಕ್ಷಿಸುವ ತಂತ್ರವಿದೆ. 'ಸಿರಿಕವುಲಿ'ಯಲ್ಲಿ ಹುಲ್ಲುಗಾವಲಿನ ಆಸೆಗಾಗಿ ಪ್ರಾಣ ಬಿಡುವ ಹಸು ಪಶುಪಾಲನಾ ಸಮುದಾಯಗಳು ಹುಲ್ಲುಗಾವಲಿಗಾಗಿ ಪ್ರಭುತ್ವದೊಂದಿಗೆ ಸಂಘರ್ಷ ನಡೆಸಿದ್ದರ ಸಂಕೇತವಿದೆ. ಮೂರನೆಯ ಗೀತೆ ಹಸುವಿನ ಪರವಾಗಿದ್ದು ತನ್ನನ್ನು ತಾನೇ ವಂಚಿಸಿಕೊಳ್ಳುವ ಪ್ರಭುತ್ವದ ಪರವಾಗಿ ನಿಲ್ಲುವ ಹುಲಿಮರಿ ಚಿತ್ರಣ ಧಾರ್ಮಿಕ ಅವಿವೇಕತನದ ಇಂದಿನ ಸಮಕಾಲೀನ ಸಂದರ್ಭದ ಅಣಕದಂತಿದೆ.

ಧಾರ್ಮಿಕ ಸ್ವರೂಪದ ಈ ಸಾಂಸ್ಕೃತಿಕ ಪಠ್ಯಗಳ ರಾಷ್ಟ್ರೀಯತೆಯ ಹಿಂದಿನ ಕಥನಗಳು ಆಸ್ತಿ ಮತ್ತು ಅಧಿಕಾರವನ್ನು ಕಿತ್ತುಕೊಳ್ಳುವ ಸಂಚಿನ ಭಾಗವಾಗಿವೆ. ಪ್ರಭುತ್ವವು ಕಾಲಕಾಲಕ್ಕೆ ಧಾರ್ಮಿಕ ಮೌಲ್ಯಗಳನ್ನು ಪರಿಷ್ಕರಿಸುತ್ತ ಸಮಾಜದ ಮೇಲೆ ನಿರಂತರವಾಗಿ ಹೇರುತ್ತಲೇ ಇರುತ್ತದೆ. ರಾಷ್ಟ್ರೀಯತೆ ಅನ್ನುವುದನ್ನು ದೇಶೀಯತೆ ಅಥವಾ ಭಾರತೀಯತೆ ಅನ್ನುವ ಅಸ್ಮಿತೆಯನ್ನು ಮಂಕಾಗಿಸುತ್ತ ಧಾರ್ಮಿಕ ಸಂಕೇತಗಳು ಢಾಳಾಗುತ್ತ ಸಾಂಸ್ಕೃತಿಕ ರಾಷ್ಟ್ರೀಯತೆ ಎಂಬ ಧಾರ್ಮಿಕತೆ ಬಹುತ್ವದ ನೆಲೆಗಳನ್ನು ನಾಶಮಾಡಿ ಏಕಸಂಸ್ಕೃತಿಯ ನಿಯಂತ್ರಣ ಮಾಡಲು ದಮನಕಾರಿ ನೀತಿಯನ್ನು ಅನುಸರಿಸುತ್ತವೆ. ಅರಸೊತ್ತಿಗೆಯಿಂದ ಪ್ರಜಾಪ್ರಭುತ್ವದತ್ತ ದೇಶದ ರಾಜಕೀಯ ಅಥವಾ ಅಧಿಕಾರದ ಸ್ವರೂಪ ಬದಲಾದರೂ ಧರ್ಮಾಧಾರಿತ ಸಾಂಸ್ಕೃತಿಕ ಸಂಕೇತಗಳು ಪ್ರಬಲ ಹಿಡಿತ ಸಾಧಿಸುತ್ತಿವೆ. ಇವುಗಳ ನಾಶವೆಂದರೆ ಬುದ್ಧ ಗುರು ಹೇಳಿದ ಜಾಗೃತಿ, ಅರಿವು, ಪ್ರಜ್ಞೆ ಮತ್ತು ವಿವೇಕದ ಮೂಲಕ ಮಾತ್ರ ಸಾಧ್ಯ. ಜನಸಾಮಾನ್ಯರ ವಿವೇಕದಿಂದಲೇ ಭಾರತೀಯತೆ ಎಂಬ ರಾಷ್ಟ್ರೀಯತೆಯನ್ನು ಕಟ್ಟಿಕೊಳ್ಳಲು ಸಾಧ್ಯವಾಗುವುದು.

**ಡಾ॥ ಅನಸೂಯ ಕಾಂಬಳೆ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಸ್ನಾತಕೋತ್ತರ ಕೇಂದ್ರ
ಕೆರಿಮತ್ತಿಹಳ್ಳಿ, ಹಾವೇರಿ – ೫೮೧ ೧೧೦



# ಹಸಿವು, ಸ್ವಾತಂತ್ರ್ಯ ಮತ್ತು ಅನ್ನಭಾಗ್ಯ

ಮೊದಲು ಉತ್ಪಾದನೆ, ನಂತರ ವಿತರಣೆ ಅನ್ನುವುದು ಉಳ್ಳವರನ್ನು ಪೋಷಿಸುವ, ಓಲೈಸುವ ಕ್ರಮವಾಗಿದೆ. ಬಡವರ, ಅಂಚಿನಲ್ಲಿರುವವರ, ವಂಚಿತರ, ಮಹಿಳೆಯರ, ಹಿಂದುಳಿದವರ ದೃಷ್ಟಿಯಿಂದ ಉತ್ಪಾದನೆ ಮತ್ತು ವಿತರಣೆ – ಎರಡೂ ಏಕ ಕಾಲದಲ್ಲಿ ನಡೆಯಬೇಕು. ಆಗ ಅದು ಉಳಿದವರ ಹಿತಾಸಕ್ತಿಯನ್ನು ಕಾಪಾಡಬಹುದು. 'ಕರ್ಮ ಮಾಡುವುದು ನಿನ್ನ ಕೆಲಸ, ಫಲಾಫಲಗಳು ದೇವರಿಗೆ ಬಿಟ್ಟಿದ್ದು' ಅನ್ನುವ ಕರ್ಮ ಸಿದ್ಧಾಂತವನ್ನು ಇದು ನೆನಪಿಸುತ್ತದೆ. ಇದು ದುಡಿಮೆಗಾರರನ್ನು ಅವರ ದುಡಿಮೆಯಿಂದ ವಂಚಿಸುವ ತಂತ್ರವಾಗಿದೆ. ಉತ್ಪಾದನೆ ಮಾಡುವವರು ಬೇರೆ: ಉತ್ಪಾದನೆಯನ್ನು ಅನುಭವಿಸುವವರು ಬೇರೆ ಎಂಬ ವಿಭಜನೆಗೆ ಇದು ಕಾರಣವಾಗುತ್ತದೆ. ಇದು ಅಸಮಾನತೆಗೆ ಹೆದ್ದಾರಿಯಾದೀತು.

ಅಮರ್ತ್ಯ ಸೇನ್‌ಗೆ ೧೯೯೮ರಲ್ಲಿ ನೊಬೆಲ್ ಪ್ರಶಸ್ತಿ ತಂದು ಕೊಟ್ಟ ಕೃತಿ 'ಪಾವರ್ಟಿ ಆಂಡ್ ಫ್ಯಾಮಿನ್ : ಎಸ್ಸೆ ಆನ್ ಎನ್‌ಟೈಟಲ್ಮೆಂಟ್ ಆಂಡ್ ಡಿಪ್ರೈವೇಶನ್' (೧೯೮೧)ನಲ್ಲಿನ ಮೊದಲ ವಾಕ್ಯ ಹೀಗಿದೆ : 'ಹಸಿವು ಅನ್ನುವುದು ಸಮಾಜದಲ್ಲಿ ಕೆಲವರಿಗೆ ಆಹಾರ ದೊರೆಯದಿರುವುದರ ಸಮಸ್ಯೆಯೇ ವಿನಾ ಅದು ಆಹಾರ ಇಲ್ಲದಿರುವುದರ ಸಮಸ್ಯೆಯಲ್ಲ'. ಇಂದು ನಮ್ಮ ದೇಶದಲ್ಲಿ ಅನುಸರಿಸುತ್ತಿರುವ 'ಮೊದಲು ಉತ್ಪಾದನೆ : ನಂತರ ವಿತರಣೆ' ಅನ್ನುವ ನೀತಿಯನ್ನು ಸೇನ್‌ರ ಮಾತುಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕು. ಉತ್ಪಾದನೆ, ವರಮಾನ, ಬಂಡವಾಳ – ಇವುಗಳನ್ನೇ ಅಭಿವೃದ್ಧಿಯ ಮಾನದಂಡಗಳನ್ನಾಗಿ ಮಾಡಿಕೊಂಡು ಬರಲಾಗಿದೆ. ಇವೆಲ್ಲ ಅಭಿವೃದ್ಧಿಗೆ ಬೇಕು. ಆದರೆ ಇವೇ ಅಭಿವೃದ್ಧಿಯಲ್ಲ. ಏಕೆಂದರೆ ವರಮಾನದಲ್ಲಿನ ಏರಿಕೆಯಾಗಿಬಿಟ್ಟರೆ ಹಸಿವು, ಬಡತನ, ದುಸ್ಥಿತಿ ನಿವಾರಣೆಯಾಗುತ್ತದೆ ಎಂದು ಹೇಳಲು ಬರುವುದಿಲ್ಲ. ವರಮಾನವನ್ನು ಅಭಿವೃದ್ಧಿಗೆ ಸಂವಾದಿಯನ್ನಾಗಿ ಮಾಡಿಕೊಂಡು ಅದನ್ನು ವ್ಯಸನದಂತೆ ಹಚ್ಚಿಕೊಂಡಿರುವ ಕ್ರಮಕ್ಕೆ ನಮ್ಮ ಕೇಂದ್ರ ಹಣಕಾಸು ಮಂತ್ರಿಗಳ ಎರಡು ನಿಲುವುಗಳೇ ಸಾಕ್ಷಿ. ಅವರು ಅಮಾನ್ಯೀಕರಣದಿಂದ ಜಿಡಿಪಿಯಲ್ಲಿ ಏರಿಕೆಯಾಗುತ್ತದೆ ಎಂದು ಹೇಳಿದ್ದರು. ಈಗ ಜಿಎಸ್‌ಟಿಯಿಂದ ಜಿಡಿಪಿಯು ಶೇ. ೨ರಷ್ಟು ಏರಿಕೆಯಾಗುತ್ತದೆ ಎಂದು ಹೇಳುತ್ತಿದ್ದಾರೆ. ಈ ಬಗೆಯ ಹೇಳಿಕೆಗೆ ಅವರು ಯಾವುದೇ ಅಧ್ಯಯನದ, ಸಮೀಕ್ಷೆಯ ಆಧಾರವನ್ನು ನೀಡುತ್ತಿಲ್ಲ. ಜಿಡಿಪಿಯಲ್ಲಿ ಏರಿಕೆಯಾಗಿಬಿಟ್ಟರೆ ಹಸಿವು, ಬಡತನ, ಅಸಮಾನತೆ, ದುಸ್ಥಿತಿ ನಿವಾರಣೆಯಾಗಿಬಿಡುತ್ತದೆ ಎಂದು ನಂಬಿದ್ದಾರೆ. ಆದರೆ ಅದು ನಡೆಯುತ್ತಿಲ್ಲ.

ಮೊದಲು ಉತ್ಪಾದನೆ, ನಂತರ ವಿತರಣೆ ಅನ್ನುವುದು ಉಳ್ಳವರನ್ನು ಪೋಷಿಸುವ, ಓಲೈಸುವ ಕ್ರಮವಾಗಿದೆ. ಬಡವರ, ಅಂಚಿನಲ್ಲಿರುವವರ, ವಂಚಿತರ, ಮಹಿಳೆಯರ, ಹಿಂದುಳಿದವರ ದೃಷ್ಟಿಯಿಂದ ಉತ್ಪಾದನೆ ಮತ್ತು ವಿತರಣೆ – ಎರಡೂ ಏಕಕಾಲದಲ್ಲಿ ನಡೆಯಬೇಕು. ಆಗ ಅದು ಉಳಿದವರ ಹಿತಾಸಕ್ತಿಯನ್ನು ಕಾಪಾಡಬಹುದು. 'ಕರ್ಮ ಮಾಡುವುದು ನಿನ್ನ ಕೆಲಸ, ಫಲಾಫಲಗಳು ದೇವರಿಗೆ ಬಿಟ್ಟಿದ್ದು' ಅನ್ನುವ ಕರ್ಮ ಸಿದ್ಧಾಂತವನ್ನು ಇದು ನೆನಪಿಸುತ್ತದೆ. ಇದು ದುಡಿಮೆಗಾರರನ್ನು ಅವರ ದುಡಿಮೆಯಿಂದ ವಂಚಿಸುವ ತಂತ್ರವಾಗಿದೆ. ಉತ್ಪಾದನೆ ಮಾಡುವವರು ಬೇರೆ: ಉತ್ಪಾದನೆಯನ್ನು ಅನುಭವಿಸುವವರು ಬೇರೆ ಎಂಬ ವಿಭಜನೆಗೆ ಇದು ಕಾರಣವಾಗುತ್ತದೆ. ಇದು ಅಸಮಾನತೆಗೆ ಹೆದ್ದಾರಿಯಾದೀತು.

ಹಸಿವು, ದುಸ್ಥಿತಿ, ಅಸಮಾನತೆಗಳು ಜನರ ಸ್ವಾತಂತ್ರ್ಯವನ್ನು ಸೀಮಿತಗೊಳಿಸುವ ಸಂಗತಿಗಳಾಗಿವೆ. ಮೊದಲು ಉತ್ಪಾದನೆ, ನಂತರ ವಿತರಣೆ ಅನ್ನುವುದು ಅಸಮಾನತೆಯನ್ನು ಊರ್ಜಿತಗೊಳಿಸುವ ಒಂದು ಪ್ರಕ್ರಿಯೆಯಾಗಿದೆ. ಇಂದು ಅಧಿಕಾರಸ್ಥರು ಬಡತನದ ಬಗ್ಗೆ ಮಾತನಾಡುತ್ತಿಲ್ಲ, ಹಸಿವಿನ ಬಗ್ಗೆ ಚಕಾರವೆತ್ತುತ್ತಿಲ್ಲ. ಉಲ್ಬಣಗೊಳ್ಳುತ್ತಿರುವ ಅಸಮಾನತೆಯ ಬಗ್ಗೆ ಚರ್ಚೆ ಮಾಡುತ್ತಿಲ್ಲ. ಗೋರಕ್ಷಣೆ, ರಾಮಮಂದಿರ, ಭಗವದ್ಗೀತೆ, ಯೋಗ, ಅಲ್ಪಸಂಖ್ಯಾತರ ಬಗ್ಗೆ ಇಲ್ಲದ ಸಲ್ಲದ ಆಕ್ಷೇಪಾರ್ಹ ನಡೆಗಳು, ಸಾಮಾಜಿಕ ನ್ಯಾಯದ ಬಗ್ಗೆ ತಿರಸ್ಕಾರ ಮುಂತಾದವು ಚರ್ಚೆಯ ಮುಂಚೂಣಿಯಲ್ಲಿವೆ. ನೋಟು ಅಮಾನ್ಯೀಕರಣವು ಬಡವರಿಗೆ, ದುಡಿಮೆಗಾರರಿಗೆ ಎಷ್ಟೊಂದು ನೋವು

ಡಾ॥ ಟಿ. ಆರ್. ಚಂದ್ರಶೇಖರ

ಉಂಟುಮಾಡಿತ್ತು ಎಂಬುದು ಎಲ್ಲರಿಗೂ ತಿಳಿದಿದೆ. ಈಗ ಮತ್ತೆ ಬಡವರ ಬದುಕಿನ ಮೇಲೆ ಬರೆ ಎಳೆಯುವಂತೆ ಜಿಎಸ್‌ಟಿ ತರಲಾಗಿದೆ. ನೋಟಿನ ಅಮಾನ್ಯೀಕರಣವು ಬಲ್ಲಿದರ, ಉದ್ಯಮಪತಿಗಳ, ಕಳ್ಳಕಾಕರ ಕೂದಲನ್ನೂ ಅಲುಗಿಸಲಿಲ್ಲ. ಅದೇ ರೀತಿಯಲ್ಲಿ ಜಿಎಸ್‌ಟಿ ವ್ಯಾಪಾರಿಗಳಿಗೆ ಸಮೃದ್ಧತೆಯ ಸಾಧನವಾಗಿದ್ದರೆ ಅದು ಕೂಲಿಕಾರ್ಮಿಕರ ಬದುಕನ್ನು ಹೈರಾಣವಾಗಿಸಿದೆ.

**ಭಾಗ ೧**

**ಹಸಿವು ಚರಿತ್ರೆಯ ಭಾಗವಲ್ಲ, ಜ್ವಲಂತ ವರ್ತಮಾನ**

ಉಳ್ಳವರು, ಪಟ್ಟಭದ್ರ ರಾಜಕಾರಣದ ನಾಯಕರು, ರಾಷ್ಟ್ರೀಯತೆಯ ನಶೆ ಹಚ್ಚಿಕೊಂಡವರು ನಮ್ಮ ಸಮಾಜದಲ್ಲಿ ಹಸಿವು ಅನ್ನುವುದು ಇಲ್ಲವೇ ಇಲ್ಲ, ಅದೇನಿದ್ದರೂ ಚರಿತ್ರೆಯ ಭಾಗ ಅನ್ನುವಂತೆ ಮಾಡನಾಡುತ್ತಿದ್ದಾರೆ. ಎಡಪಂಥೀಯರಿಗೆ ಮಾತ್ರ ಬಡತನ ಅನ್ನುವುದು ಕಾಣುತ್ತದೆ ಎಂದು ಅಣಕವಾಡಲಾಗುತ್ತಿದೆ. ಹೀಗಾಗಿ ಉಳ್ಳವರು ಸೆನ್ಸೆಕ್ಸ್ ೩೦೦೦೦ ಗಡಿ ದಾಟಿದ ಬಗ್ಗೆ ಉತ್ಸಾಹದಿಂದ ಕುಣಿದಾಡುತ್ತಿದ್ದಾರೆ. ಅದನ್ನು ದೇಶದ ಸಮೃದ್ಧತೆಯ ಸೂಚಿಯನ್ನಾಗಿ ಪರಿಗಣಿಸಿ ಮಾತನಾಡುತ್ತಾರೆ. ಮಂಗಳಯಾನವನ್ನು ಆತ್ಯಂತಿಕ ಸಾಧನೆ ಅನ್ನುವ ರೀತಿಯಲ್ಲಿ ಬಣ್ಣಿಸಲಾಗುತ್ತಿದೆ. ಒಮ್ಮೆ ದೆಹಲಿಯಲ್ಲಿಯೇ ಹೆಚ್ಚು ಸಮಯ ಕಳೆಯುತ್ತಿದ್ದ ಉತ್ತರ ಪ್ರದೇಶದ ಮುಖ್ಯಮಂತ್ರಿಯೊಬ್ಬರ ಬಗ್ಗೆ 'ಆಗಿಂದಾಗ್ಗೆ ಲಕ್ನೋಗೆ ಭೇಟಿ ಕೊಡುತ್ತಾರೆ' ಎಂದು ಅಣಕವಾಡಲಾಗುತ್ತಿತ್ತು. ವಿದೇಶಗಳಲ್ಲಿಯೇ ಹೆಚ್ಚು ಸಮಯ ಕಳೆಯುತ್ತಿರುವ ನಮ್ಮ ಪ್ರಧಾನ ಸೇವಕರ ಬಗ್ಗೆಯೂ ಈ ಅಣಕ ಪ್ರಚಲಿತಕ್ಕೆ ಬಂದರೆ ಆಶ್ಚರ್ಯವಿಲ್ಲ. ಡಿಜಿಟಲ್ ಇಂಡಿಯ, ಸ್ವಚ್ಛ ಭಾರತ (ಡಿಜಿಟಲ್‌ಗೆ ಇಂಡಿಯ ಆದರೆ ಸ್ವಚ್ಛಕ್ಕೆ ಭಾರತ !!), ಮೇಕ್ ಇನ್ ಇಂಡಿಯ, ಸ್ಟ್ಯಾಂಡ್ ಅಪ್ ಇಂಡಿಯ (ಇದರ ಭರಾಟೆ ಈಗ ಕಡಿಮೆಯಾಗಿದೆ ?), ಸ್ಟಾರ್ಟ್ ಅಪ್ ಇಂಡಿಯಾ ಇವು ಇಂದಿನ ಭಾರತದ ಅಭಿವೃದ್ಧಿಯ ಗುರಿಗಳು. ಬಡವರು, ಹಸಿದವರು, ಅಪೌಷ್ಟಿಕತೆ ಎದುರಿಸುತ್ತಿರುವವರು, ಅನಕ್ಷರಸ್ಥರು, ದಲಿತರು, ಹಿಂದುಳಿದವರು ಇಲ್ಲಿ ಲೆಕ್ಕಕ್ಕಿಲ್ಲ. ಹಸಿವು ಮುಕ್ತ ಭಾರತ ಅನ್ನುವುದು ಇಂದಿನ ಸರ್ಕಾರದ ಕನಸು ಮನಸ್ಸಿನಲ್ಲಿಯೂ ಇದ್ದಂತೆ ಕಾಣುವುದಿಲ್ಲ. ಇಂದಿನ ಅಧಿಕಾರಸ್ಥರಿಗೆ ಹಸಿವಿನ ನಿವಾರಣೆ ಮುಖ್ಯವೋ ಸ್ವಚ್ಛ ಭಾರತ ಮುಖ್ಯವೋ ಎಂದು ಕೇಳಿದರೆ ಅವರು ಖಂಡಿತವಾಗಿ ಸ್ವಚ್ಛ ಭಾರತ ಮೊದಲು ಎಂದು ಹೇಳಿಯಾರು ! ಸ್ವಚ್ಛತೆ ಅನ್ನುವುದು ಎಲ್ಲರಿಗೂ ಅಗತ್ಯವಾದ ಒಂದು ಸಂಗತಿ. ಆದರೆ ಅದು ಹಸಿವಿನ ನಿವಾರಣೆಗಿಂತ ಮುಖ್ಯವಲ್ಲ. ಹಸಿವಿನ ಭಾರತದಲ್ಲಿ ಸ್ವಚ್ಛತೆ ಬಗ್ಗೆ ಆಂದೋಳನ ನಡೆಸುವುದು ಫ್ರಾನ್ಸ್ ದೇಶದಲ್ಲಿ ಒಬ್ಬ ರಾಣಿಯು 'ಜನರಿಗೆ ತಿನ್ನಲು ಬ್ರೆಡ್ ಇಲ್ಲದೆ ಸಾಯುತ್ತಿದ್ದಾರೆ' ಅಂದರೆ 'ಅವರು ಕೇಕ್ ತಿನ್ನಲಿ' ಅಂದಳಂತೆ ಎಂಬುದಕ್ಕೆ ಸಮನಾದೀತು. ಹಸಿದವರನ್ನು ಮತ್ತು ಹೊಟ್ಟೆ ತುಂಬಿದವರನ್ನು ಒಂದೇ ತಕ್ಕಡಿಯಲ್ಲಿ ತೂಗುವ ಕ್ರಮವೇನಿದೆ ಅದು ಹಸಿದವರಿಗೆ ಅನ್ಯಾಯ ಮಾಡುತ್ತದೆ. 'ಸಬ್ ಕಾ ಸಾತ್ ಸಬ್ ಕಾ ವಿಕಾಸ್' ಅನ್ನುವ ನೀತಿಯೇನಿದೆ ಅದು ಅಸಮಾನತೆಯನ್ನು ಊರ್ಜಿತಗೊಳಿಸುವ ಒಂದು ಕ್ರಮ. ಇದು ಯಶಸ್ವಿಯಾಗಿರುವುದಕ್ಕೆ ನಮಗೆ ಚರಿತ್ರೆಯಲ್ಲಿ ಒಂದೂ ಉದಾಹರಣೆ ದೊರೆಯುವುದಿಲ್ಲ ಅನ್ನುತ್ತಾನೆ ಮತ್ತೊಬ್ಬ ನೊಬೆಲ್ ಪ್ರಶಸ್ತಿ ವಿಜೇತ ಜೋಸೆಫ್ ಸ್ಟಿಗ್‌ಲಿಡ್ಜ್. ಎಲ್ಲರ ಅಭಿವೃದ್ಧಿಯಲ್ಲಿ ಹಸಿದವರ ಅಭಿವೃದ್ಧಿಯೂ ಆಗುತ್ತದೆ ಎಂಬುದಕ್ಕೆ ನಮಗೆ ಆಧಾರಗಳಿಲ್ಲ. ಅದು ಸಾಧ್ಯವೂ ಇಲ್ಲ. ಹಸಿದವರಿಗೆ ಹೆಚ್ಚಿನ ಆದ್ಯತೆಯನ್ನು ನೀಡ ಬೇಕಾಗುತ್ತದೆ. ಹಸಿವು ಅನ್ನುವುದು ಸಮಾಜದ ಒಂದು ವರ್ಗಕ್ಕೆ ಅನೂಚಾನವಾಗಿ ಹರಿದುಕೊಂಡು ಬಂದಿರುವ ಅನ್ಯಾಯವಾಗಿದೆ. ಇಂದು ನಮ್ಮ ಪರಂಪರೆಯ ವೈಭವೀಕರಣ ಅಡೆತಡೆಯಿಲ್ಲದೆ ನಡೆದಿದೆ. ನಮ್ಮ ಪರಂಪರೆಯಲ್ಲಿ ಎಲ್ಲವೂ ಆದರ್ಶಮಯವಾಗಿತ್ತು ಎಂದು ಅದನ್ನು ಹೊಗಳಲಾಗುತ್ತಿದೆ. ಆದರೆ ನಮ್ಮ ಸಮಾಜದ ಶೂದ್ರ ವರ್ಗಕ್ಕೆ, ದಲಿತರಿಗೆ ಅಕ್ಷರವನ್ನು ನಿಷೇಧಿಸಿದ್ದು ಇದೇ ಪರಂಪರೆಯಲ್ಲವೆ ! ಅಸ್ಪೃಶ್ಯತೆ ಅನ್ನುವುದು ನಮ್ಮ ಪರಂಪರೆಯ ಕೊಡುಗೆಯಲ್ಲವೆ ? ಈ ವರ್ಗವನ್ನು ಭೂಮಿಯಿಂದ ವಂಚಿಸಿದ್ದು ನಮ್ಮದೇ ಪರಂಪರೆಯಲ್ಲವೆ ! ಈ ಪರಂಪರೆಯ ಕಾರಣವಾಗಿಯೇ ಇಂದು ನಮ್ಮ ದೇಶದಲ್ಲಿರುವ ಒಟ್ಟು ಸಾಕ್ಷರತೆಯಲ್ಲಿ ದಲಿತರ ಸಾಕ್ಷರತಾ ಪ್ರಮಾಣ ಕೆಳಮಟ್ಟದಲ್ಲಿದೆ. ಭೂ ಮಾಲೀಕರಲ್ಲಿ ಅವರ ಪ್ರಮಾಣ ಕೆಳಮಟ್ಟದಲ್ಲಿದೆ. ಆದರೆ ಭೂರಹಿತ ದಿನಗೂಲಿ ದುಡಿಮೆಗಾರರಲ್ಲಿ ಅವರ ಪ್ರಮಾಣವು ಅವರು ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದ್ದರೋ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿದೆ.




ನಮ್ಮ ಸಮಾಜದ ಸಂದರ್ಭದಲ್ಲಿ ಸಾವಿರಾರು ವರ್ಷಗಳಿಂದ ಸಮೃದ್ಧಿಯನ್ನು ಯಾರು ಅನುಭವಿಸಿಕೊಂಡು, ಗುತ್ತಿಗೆ ಹಿಡಿದುಕೊಂಡು ಬಂದಿದ್ದರೋ ಅವರೇ ಇಂದಿಗೂ ಅದರ ಮೇಲೆ ಏಕಸ್ವಾಮ್ಯ ಸಾಧಿಸಿಕೊಂಡಿದ್ದಾರೆ. ಕೆಲವು ಅಪವಾದಗಳಿರಬಹುದು. ಸರ್ವೇಸಾಮಾನ್ಯವಾಗಿ ನಮ್ಮ ಸಮಾಜದಲ್ಲಿ ಜಾತಿ ಶ್ರೇಣಿ ವ್ಯವಸ್ಥೆ ಮುಂದುವರಿದಿದೆ. ಅಲ್ಲದೆ ಶೂದ್ರರು ಮತ್ತು ದಲಿತರು ಹಿಂದಿನಿಂದ ಯಾವ ವೃತ್ತಿಗಳನ್ನು ಅನುಸರಿಸಿಕೊಂಡು ಬರುತ್ತಿದ್ದರೋ ಅವುಗಳಲ್ಲೇ ಮುಂದುವರಿಯಬೇಕು ಎಂದು ಅಲ್ಲದೆ ಸಮಾಜ ಬಯಸುತ್ತದೆ. ಪರಂಪರೆಯನ್ನು ವೈಭವೀಕರಿಸುವುದು ಅಂದರೆ ಅಲ್ಲಿನ ತಾರತಮ್ಯವನ್ನು, ಮೌಢ್ಯವನ್ನು ಅನುಸರಿಸುವುದು ತಾನೆ !




ದೇಶದ ವರಮಾನದಲ್ಲಿ ಏರಿಕೆಯಾದರೆ, ಉತ್ಪಾದನೆಯ ಮಟ್ಟದಲ್ಲಿ ವರ್ಧನೆ ಉಂಟಾದರೆ, ಬಂಡವಾಳ ಹೂಡಿಕೆಯಲ್ಲಿ ಹೆಚ್ಚಳ ಉಂಟಾದರೆ ಹಸಿವು, ಬಡತನ, ಅನಕ್ಷರತೆ ತಮ್ಮಷ್ಟಕ್ಕೆ ತಾವು ಬಗೆಹರಿದುಬಿಡುತ್ತವೆ ಅನ್ನುವುದು ಇಂದು ಹುಸಿಯಾಗಿದೆ. ಆದರೆ ನಮ್ಮ ಅಧಿಕಾರಸ್ಥರು ಅದರಲ್ಲಿ ಇಂದಿಗೂ ನಂಬಿಕೆಯಿಟ್ಟಿದ್ದಾರೆ. ಅದರ ಅಭಿವ್ಯಕ್ತಿಯೇ ಸಬ್ ಕಾ ಸಾತ್, ಸಬ್ ಕಾ ವಿಕಾಸ್. ಇದಕ್ಕೆ ಪೂರಕವಾದ ನೀತಿ 'ಮಿನಿಮಮ್ ಗೌವರ್ನಮೆಂಟ್, ಮ್ಯಾಕ್ಸಿಮಮ್ ಗೌವರ್ನನ್ಸ್'. ಇದೂ ಕೂಡ ಬಡವರಿಗೆ, ವಂಚಿತರಿಗೆ, ಹಿಂದುಳಿದವರಿಗೆ, ಮಹಿಳೆಯರಿಗೆ ಪ್ರತಿಕೂಲವಾಗಿದೆ. ಏಕೆಂದರೆ ಅವರು ಎಲ್ಲದಕ್ಕೂ ಸರ್ಕಾರದ ಕಡೆ ನೋಡುತ್ತಾರೆ. ಮಾರುಕಟ್ಟೆ ಶಕ್ತಿಯಿಂದ ಬಡವರಿಗೆ ನ್ಯಾಯ ದೊರೆಯುವುದು ಸಾಧ್ಯವೆ ? ಅದರ ಚಾಲಕ ಶಕ್ತಿಯೆಂದರೆ ಲಾಭ.

ಬಡವರನ್ನು ರಕ್ಷಿಸುವುದನ್ನು ಬಿಟ್ಟು ಸರ್ಕಾರವು ಉಳ್ಳವರ, ಬಲಿಷ್ಠರ, ಪಟ್ಟಭದ್ರರ ಹಿತವನ್ನು ಕಾಪಾಡುವಲ್ಲಿ ಎಲ್ಲಿಲ್ಲದ ಆಸಕ್ತಿ ತೋರಿಸುತ್ತಿದೆ. ಉಳ್ಳವರು ನೀಡುವ ಪ್ರತ್ಯಕ್ಷ ತೆರಿಗೆ ಪ್ರಮಾಣವನ್ನು ಒಂದೋ ಕಡಿಮೆ ಮಾಡಲಾಗುತ್ತಿದೆ, ಇಲ್ಲವೇ ಸ್ಥಿರವಾಗಿಡಲಾಗಿದೆ. ಆದರೆ ಬಡವರು, ವಂಚಿತರು, ದುಡಿಮೆಗಾರರು ನೀಡುವ ಅಪ್ರತ್ಯಕ್ಷ ತೆರಿಗೆ (ಜಿಎಸ್‌ಟಿ) ಪ್ರಮಾಣವನ್ನು ಹೆಚ್ಚಿಸಲಾಗುತ್ತಿದೆ. ಪ್ರತ್ಯಕ್ಷ ತೆರಿಗೆಗಳನ್ನು ವರಮಾನದ ಮೇಲೆ, ಗಳಿಕೆಯ ಮೇಲೆ ವಿಧಿಸಲಾಗುತ್ತದೆ. ಅದರ ಭಾರ ಹೆಚ್ಚಾಗಿ ಉಳ್ಳವರ ಮೇಲೆ ಬೀಳುತ್ತದೆ. ಆದರೆ ಅಪ್ರತ್ಯಕ್ಷ ತೆರಿಗೆಗಳು ಎಲ್ಲರ ಮೇಲೂ ಬೀಳುತ್ತವೆ. ಈ ತೆರಿಗೆ ಪ್ರಮಾಣ ಮುಖೇಶ್ ಅಂಬಾನಿಗೂ ಒಂದೆ ಮತ್ತು ಭೂರಹಿತ ದಿನಗೂಲಿ ದುಡಿಮೆಗಾರನಿಗೂ ಒಂದೇ ಆಗಿರುತ್ತದೆ. ಬಡವರ ಮೇಲೆ, ಹಸಿದವರ ಮೇಲೆ, ದುಡಿಮೆಗಾರರ ಮೇಲೆ ತೆರಿಗೆ ವಿಧಿಸಲು ಸರ್ಕಾರಕ್ಕೆ, ಉಳ್ಳವರಿಗೆ ಎಷ್ಟೊಂದು ಉಮೇದು ಎಂಬುದು ಜಿಎಸ್‌ಟಿ ಅನುಷ್ಠಾನದ ಬಗೆಗಿನ ರಾಜಕಾರಣದಿಂದ ಅರ್ಥ ಮಾಡಿಕೊಳ್ಳಬಹುದು. ನಮ್ಮ ಸಮಾಜದ ಸಂದರ್ಭದಲ್ಲಿ ಆಹಾರ ಅಭದ್ರತೆ ಒಂದು ಜ್ವಲಂತ ಸಮಸ್ಯೆ. ಅನ್ನಭಾಗ್ಯದಂತಹ ಆಹಾರ ಹಕ್ಕಿನ ಕಾರ್ಯಕ್ರಮಗಳ ಬಗ್ಗೆ ಉಳ್ಳವರು ಅಣಕವಾಡುತ್ತಾರೆ. ಅದು ನಮ್ಮ ರಾಜ್ಯದ ಸಂದರ್ಭದಲ್ಲಿ ಬರ ಪರಿಹಾರವಾಗಿ ಕೆಲಸ ಮಾಡುತ್ತಿದೆ. ಇದು ಅಸಮಾನತೆಯನ್ನು ನಿವಾರಿಸುವ ಕಾರ್ಯವಾಗಿದೆ. ಅನ್ನಭಾಗ್ಯ ಕಾರ್ಯಕ್ರಮದ ಅನುಷ್ಠಾನದಲ್ಲಿ ಸಮಸ್ಯೆಗಳಿವೆ. ಅರ್ಹರಿಗೆ ಅಕ್ಕಿ ತಲುಪುತ್ತಿಲ್ಲ ಎನ್ನಲಾಗಿದೆ. ಇದರಲ್ಲಿ ನಿಜಾಂಶವಿದೆ. ಆದರೆ ಈ ಕಾರಣಕ್ಕೆ ಆಹಾರ ಭದ್ರತೆಯ ಕಾರ್ಯಕ್ರಮವನ್ನೇ ತೆಗಳುವುದು, ತಿರಸ್ಕಾರದಿಂದ ನೋಡುವುದು ಸರಿಯಲ್ಲ. ಬರಗಾಲದಲ್ಲಿ ಸಾಮಾನ್ಯವಾಗಿ ಆಹಾರ ಸಮಸ್ಯೆಯಾಗುತ್ತಿತ್ತು. ಆದರೆ ಇಂದು ಆಹಾರದ ಸಮಸ್ಯೆಯನ್ನು ಅನ್ನಭಾಗ್ಯ ನೀಗಿದೆ. ಇಂದು ಬರಗಾಲದಲ್ಲಿ ನೀರಿನ ಸಮಸ್ಯೆಯಿದೆ.

**ಭಾಗ ೨**

**ಸ್ವಾತಂತ್ರ್ಯದಿಂದ ವಂಚಿತರು**

ನಮ್ಮ ದೇಶವು ಈಗ ತನ್ನ ೭೦ನೆಯ ಸ್ವಾತಂತ್ರ್ಯೋತ್ಸವವನ್ನು ಆಚರಿಸಿಕೊಳ್ಳುತ್ತಿದೆ. ನಿಜ, ೧೯೪೭ ಆಗಸ್ಟ್ ೧೫ರಂದು ನಮಗೆ ವಿದೇಶಿ ಆಳ್ವಿಕೆಯಿಂದ ಸ್ವಾತಂತ್ರ್ಯ ಪ್ರಾಪ್ತವಾಯಿತು. ಅದು ಕೇವಲ ರಾಜಕೀಯ ಸ್ವಾತಂತ್ರ್ಯ ಎಂಬುದು ಇಂದು ನಮಗೆ ಸ್ಪಷ್ಟವಾಗುತ್ತಿದೆ. ಆರ್ಥಿಕ ಸ್ವಾತಂತ್ರ್ಯವನ್ನಾಗಲಿ ಅಥವಾ ಸಾಮಾಜಿಕ ಸ್ವಾತಂತ್ರ್ಯವನ್ನಾಗಲಿ ಸಾಧಿಸಿಕೊಳ್ಳುವುದು ಕಳೆದ ೭೦ ವರ್ಷಗಳಲ್ಲಿ ನಮಗೆ ಸಾಧ್ಯವಾಗಿಲ್ಲ. ಬಡತನ, ಹಸಿವು, ಅಪೌಷ್ಟಿಕತೆ, ದುಸ್ಥಿತಿ ಮುಂತಾದ ಆರ್ಥಿಕ ಸಂಕೋಲೆಗಳಿಂದ ಮತ್ತು ಅನಕ್ಷರತೆ, ಅಸ್ವಸ್ಥತೆ, ಅಸಮಾನತೆ, ಹಿಂಸೆ, ತಾರತಮ್ಯ ಮುಂತಾದ ಸಾಮಾಜಿಕ ಸಂಕಷ್ಟಗಳಿಂದ ಜನರನ್ನು ಮುಕ್ತಗೊಳಿಸುವುದರಲ್ಲಿ ನಾವು ವಿಫಲರಾಗಿದ್ದೇವೆ. ಅಮರ್ತ್ಯ ಸೇನ್ ತಮ್ಮ ಅಧ್ಯಯನಗಳಲ್ಲಿ, ನೀತಿ ನಿರೂಪಣೆಗಳಲ್ಲಿ 'ಸ್ವಾತಂತ್ರ್ಯವೇ ಅಭಿವೃದ್ಧಿ' ಎಂದು ಪ್ರತಿಪಾದಿಸುತ್ತಿದ್ದಾರೆ. ಬಡತನ, ಅನಕ್ಷರತೆ, ಹಸಿವು, ಅಸಮಾನತೆ, ಅಪೌಷ್ಟಿಕತೆ, ಕೌಟುಂಬಿಕ ಹಿಂಸೆ, ಅನಾರೋಗ್ಯ ಮುಂತಾದವುಗಳನ್ನು ಸೇನ್ ಅಸ್ವಾತಂತ್ರ್ಯ ಎಂದು ಕರೆಯುತ್ತಾರೆ. ಸ್ವಾತಂತ್ರ್ಯವನ್ನು ಎರಡು ವಿಧಗಳಾಗಿ ವರ್ಗೀಕರಿಸಬಹುದು. ಮೊದಲನೆಯದು ಇತ್ಯಾತ್ಮಕ (ಪಾಸಿಟಿವ್) ಸ್ವಾತಂತ್ರ್ಯ ಮತ್ತು ಎರಡನೆಯದು ನೇತ್ಯಾತ್ಮಕ (ನೆಗೆಟಿವ್) ಸ್ವಾತಂತ್ರ್ಯ. ರಾಜಕೀಯ ಸ್ವಾತಂತ್ರ್ಯ ಮತ್ತು ನಾಗರಿಕ ಹಕ್ಕುಗಳು – ಉದಾಹರಣೆಗೆ ಮತದಾನದ ಹಕ್ಕು, ಚುನಾವಣೆಗಳಲ್ಲಿ ಸ್ಪರ್ಧಿಸುವ ಹಕ್ಕು, ಅಭಿವ್ಯಕ್ತಿ ಸ್ವಾತಂತ್ರ್ಯ, ಸಂವಿಧಾನದ ಪರಿಹಾರದ ಸ್ವಾತಂತ್ರ್ಯ ಮುಂತಾದವು ನೇತ್ಯಾತ್ಮಕ ಸ್ವಾತಂತ್ರ್ಯಗಳು. ಅವುಗಳನ್ನು ಯಾರೂ ಚಲಾಯಿಸಬಹುದು. ಆದರೆ ಬಡವರಿಗೆ ಬಡತನದ, ಹಸಿವಿನ, ಅಪೌಷ್ಟಿಕತೆಯ ಸಂಕೋಲೆಗಳಿಂದ ತಮ್ಮನ್ನು ತಾವು ಬಿಡಿಸಿಕೊಳ್ಳಲು ಸಾಮರ್ಥ್ಯ ಬೇಕಾಗುತ್ತದೆ. ಇದನ್ನು ಸೇನ್ ಧಾರಣ ಸಾಮರ್ಥ್ಯ ಎಂದು ಕರೆಯುತ್ತಾರೆ. ಯಾರಿಗೆ ಭೂಮಿಯಿಲ್ಲ, ಯಾರಿಗೆ ಅಕ್ಷರ ಸಂಸ್ಕೃತಿಯಿಲ್ಲ, ಆರೋಗ್ಯ ಭಾಗ್ಯವಿಲ್ಲ, ವಸತಿಯಿಲ್ಲ ಅವರ ಧಾರಣ ಸಾಮರ್ಥ್ಯ ಕೆಳಮಟ್ಟದಲ್ಲಿರುತ್ತದೆ. ಇವುಗಳನ್ನು ಜನರಿಗೆ ಒದಗಿಸಿಕೊಡುವುದು ಸರ್ಕಾರದ ಮತ್ತು ಸಮಾಜದ ಕರ್ತವ್ಯ. ಅಕ್ಷರದ ಹಕ್ಕು, ಆರೋಗ್ಯದ ಹಕ್ಕು, ಆಹಾರದ ಹಕ್ಕು, ವಸತಿ ಹಕ್ಕು ಮುಂತಾದವು ಇತ್ಯಾತ್ಮಕ ಹಕ್ಕುಗಳು. ಹಸಿದವರಿಗೆ, ವಂಚಿತರಿಗೆ, ದಲಿತರಿಗೆ ಅಗತ್ಯವಾಗಿರುವುದು ಇತ್ಯಾತ್ಮಕ ಸ್ವಾತಂತ್ರ್ಯ. ಈ ಸ್ವಾತಂತ್ರ್ಯಗಳು ಜನರ ಧಾರಣ ಸಾಮರ್ಥ್ಯವನ್ನು ದಷ್ಟಪುಷ್ಟಗೊಳಿಸುತ್ತವೆ. ಹಕ್ಕುಗಳನ್ನು ಅರ್ಥಪೂರ್ಣವಾಗಿ ಚಲಾಯಿಸಲು ಧಾರಣಶಕ್ತಿ ಬೇಕು. ಇತ್ಯಾತ್ಮಕ ಸ್ವಾತಂತ್ರ್ಯವಿಲ್ಲದಿದ್ದರೆ ರಾಜಕೀಯ ಸ್ವಾತಂತ್ರ್ಯಕ್ಕೆ ಅರ್ಥವಿರುವುದಿಲ್ಲ. ಸಬ್ ಕಾ ಸಾತ್, ಸಬ್ ಕಾ ವಿಕಾಸ್ ನೀತಿಯಲ್ಲಿ ಯಾವುದನ್ನು ನಾವು ಸಾಮಾಜಿಕ ನ್ಯಾಯ ಎಂದು ಕರೆಯುತ್ತಿದ್ದೇವೆಯೋ ಅದಕ್ಕೆ ಅವಕಾಶವಿಲ್ಲ. ಇಲ್ಲಿ ಮುಖೇಶ್ ಅಂಬಾನಿ ಮತ್ತು ಪೌರಕಾರ್ಮಿಕರು – ಇಬ್ಬರನ್ನೂ ಒಂದೇ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗುತ್ತದೆ. ಇದಕ್ಕಿಂತ ಅಭಿವೃದ್ಧಿಯ ಅಣಕ ಮತ್ತೊಂದು ಇರಲು ಸಾಧ್ಯವಿಲ್ಲ. ನಮ್ಮ ದೇಶದಲ್ಲಿ ೧೪೪೩ ಲಕ್ಷ ಭೂರಹಿತ ದಿನಗೂಲಿ ಕೃಷಿ ದುಡಿಮೆಗಾರರಿದ್ದಾರೆ. ಒಟ್ಟು ದುಡಿಮೆಗಾರರಲ್ಲಿ ಇವರ ಪ್ರಮಾಣ ಶೇ. ೨೯.೯೬. ಕರ್ನಾಟಕದಲ್ಲಿ ಇವರ ಸಂಖ್ಯೆ ೭೧.೫೬ ಲಕ್ಷ. ಕರ್ನಾಟಕದಲ್ಲಿ ಒಟ್ಟು ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ ಶೇ. ೨೫.೬೭. ಇವರ ಸ್ಥಿತಿಗತಿ ಹೇಗಿರುತ್ತದೆ ಎಂದರೆ ಕೂಲಿ ದೊರೆತರೆ ಕೂಳು, ಇಲ್ಲದಿದ್ದರೆ ಉಪವಾಸ. ಇವರನ್ನು ಆಹಾರ ಅಭದ್ರತೆಯನ್ನು ಎದುರಿಸುತ್ತಿರುವವರು ಎಂದು ಹೇಳಬಹುದು. ಹಸಿವಿನ ಸಮಸ್ಯೆ ಇವರನ್ನು ಕಾಡುತ್ತಿದೆ. ಇವರಿಗೆ ತಮ್ಮನ್ನು ತಾವು ಹಸಿವಿನಿಂದ ಮುಕ್ತಗೊಳಿಸಿಕೊಳ್ಳುವುದು ಸಾಧ್ಯವಾಗುತ್ತಿಲ್ಲ. ನಾವು ಆಚರಿಸುತ್ತಿರುವ ೭೦ನೆಯ ಸ್ವಾತಂತ್ರ್ಯದ ವಾರ್ಷಿಕಾಚರಣೆಗೆ ಅರ್ಥ ಬರಬೇಕಾದರೆ ಮೊದಲು ಹಸಿವು ಮುಕ್ತ ಭಾರತವನ್ನು ಸಾಧಿಸಿಕೊಳ್ಳಬೇಕಾಗಿದೆ. ಅಭಿವೃದ್ಧಿ ಅನ್ನುವುದು ಕೇವಲ ವರಮಾನಕ್ಕೆ, ಉತ್ಪಾದನೆಗೆ, ಬಂಡವಾಳಕ್ಕೆ, ಸೆನ್ಸೆಕ್ಸ್‌ಗೆ ಸಂಬಂಧಿಸಿದ ಸಂಗತಿಯಲ್ಲ. ಇದು ಘನತೆಯಿಂದ, ಗೌರವದಿಂದ ಬದುಕುವುದಕ್ಕೆ ಸಂಬಂಧಿಸಿದೆ. ದಲಿತರು, ಅಲ್ಪಸಂಖ್ಯಾತರು, ಮಹಿಳೆಯರು ಬದುಕುವುದೇ ಅಸಾಧ್ಯ ಅನ್ನುವಂತಾಗಿದೆ.



**ಅಕ್ಷರ ಸ್ವಾತಂತ್ರ್ಯದಿಂದ ವಂಚಿತರು**

ಅಕ್ಷರವೇ ಅಭಿವೃದ್ಧಿ. ಅಕ್ಷರ ಮತ್ತು ಶಿಕ್ಷಣ ಜನರ ಸ್ವಾತಂತ್ರ್ಯದ ವ್ಯಾಪ್ತಿಯನ್ನು ವಿಸ್ತೃತಗೊಳಿಸುತ್ತವೆ. ಅಕ್ಷರವು ಆಯ್ಕೆಯ ಹಕ್ಕನ್ನು ನೀಡುತ್ತದೆ. ಕನಿಷ್ಠಪಕ್ಷ ನಾವು ಏಕೆ ಬಡವರಾಗಿದ್ದೇವೆ, ಅಸಮಾನತೆ ಸಮಾಜದಲ್ಲಿ ಏಕಿದೆ, ಉನ್ನತ ಜಾತಿಯ ವಶದಲ್ಲಿ ಏಕೆ ಎಲ್ಲ ಸಂಪತ್ತು ಮಡುಗಟ್ಟಿಕೊಂಡಿದೆ ಎಂಬುದರ ಬಗ್ಗೆ ಯೋಚಿಸುವುದಕ್ಕೆ ಅದು ಹಚ್ಚುತ್ತದೆ. ಅಕ್ಷರ–ಶಿಕ್ಷಣದಿಂದ ಉದ್ಯೋಗ ದೊರೆಯಲಿಕ್ಕಿಲ್ಲ. ಆದರೆ ಅದು ಆಯ್ಕೆಯ ಸ್ವಾತಂತ್ರ್ಯವನ್ನು ನೀಡುತ್ತದೆ. ತಲೆತಲಾಂತರದಿಂದ ಹರಿದುಕೊಂಡು ಬಂದ ವೃತ್ತಿಯನ್ನು ಬಿಟ್ಟು ಮತ್ತೊಂದನ್ನು ಆಯ್ಕೆ ಮಾಡಿಕೊಳ್ಳಲು ಅದು ಸಾಧ್ಯ ಮಾಡಿಕೊಡುತ್ತದೆ. ಇಂತಹ ಸ್ವಾತಂತ್ರ್ಯದ ಸಂಸ್ಕೃತಿಯಿಂದ ಸಮಾಜದ ಒಂದು ಭಾಗವನ್ನು ವಂಚಿಸಲಾಗಿತ್ತು. ನಮ್ಮ ದೇಶದಲ್ಲಿ ೨೦೧೧ರ ಜನಗಣತಿ ಪ್ರಕಾರ ಅಕ್ಷರದಿಂದ ವಂಚಿತರಾದವರು ೪೪.೭೨ ಕೋಟಿಯಾದರೆ, ಕರ್ನಾಟಕದಲ್ಲಿ ಅವರ ಸಂಖ್ಯೆ ೧೩೩ ಲಕ್ಷ. ಇಲ್ಲಿರುವ ಲಿಂಗ ತಾರತಮ್ಯವನ್ನು ಗಮನಿಸಬೇಕು. ದೇಶದ ಒಟ್ಟು ಅನಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ ಶೇ. ೫೭.೮೫. ಕರ್ನಾಟಕದಲ್ಲಿನ ಒಟ್ಟು ಅನಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ ಶೇ. ೬೩.೯೧. ಅಭಿವೃದ್ಧಿಯ ಯಾವುದೇ ಸೂಚಿಯನ್ನು

| ಅಕ್ಷರ ಸ್ವಾತಂತ್ರ್ಯದಿಂದ ವಂಚಿತರು : ೨೦೧೧ | | | ಹುಟ್ಟುವ ಸ್ವಾತಂತ್ರ್ಯದಿಂದ ವಂಚಿತರಾದ ಹೆಣ್ಣು ಮಕ್ಕಳು : ೨೦೧೧ | | |
|---|---|---|---|---|---|
| ವಿವರಗಳು (ಲಕ್ಷಗಳಲ್ಲಿ) | ಭಾರತ | ಕರ್ನಾಟಕ | ವಿವರಗಳು (ಲಕ್ಷಗಳಲ್ಲಿ) | ಭಾರತ | ಕರ್ನಾಟಕ |
| ಒಟ್ಟು ಅನಕ್ಷರಸ್ಥರು | ೪೪೭೨ | ೧೩೩ | ಒಟ್ಟು ಜನಸಂಖ್ಯೆ | ೧೨೧೦೯ | ೬೧೦.೯೫ |
| ಅನಕ್ಷರಸ್ಥ ಪುರುಷರು | ೧೮೮೫ | ೪೮ | ಪುರುಷರು | ೬೨೩೩ | ೩೦೯.೬೭ |
| ಅನಕ್ಷರಸ್ಥ ಮಹಿಳೆಯರು | ೨೫೮೭ | ೮೫ | ಮಹಿಳೆಯರು | ೫೮೭೬ | ೩೦೧.೨೮ |
| ಮಹಿಳೆಯರ ಪ್ರಮಾಣ | ಶೇ. ೫೭.೮೫ | ಶೇ.೬೩.೯೧ | ಸ್ವಾತಂತ್ರ್ಯದಿಂದ ವಂಚಿತ ಹೆಣ್ಣುಮಕ್ಕಳು | ೩೫೭ | ೮.೩೯ |

ಮೂಲ : ಸೆನ್ಸಸ್ ಆಫ್ ಇಂಡಿಯಾ ೨೦೧೧.

ತೆಗೆದುಕೊಂಡರೆ ಅದರಲ್ಲಿ ಮಹಿಳೆಯರು ವಂಚಿತರಾಗಿರುತ್ತಾರೆ.

ನಮ್ಮ ದೇಶದಲ್ಲಿ ಲಿಂಗ ಅನುಪಾತವು ಮಹಿಳೆಯರಿಗೆ ಪ್ರತಿಕೂಲವಾಗಿದೆ. ಕನಿಷ್ಠ ಪ್ರತಿ ಸಾವಿರ ಪುರುಷರಿಗೆ ಎದುರಾಗಿ ಸಾವಿರ ಮಹಿಳೆಯರಿರಬೇಕು. ಆದರೆ ಭಾರತದಲ್ಲಿ ಪ್ರತಿ ಸಾವಿರ ಪುರುಷರಿಗೆ ಎದುರಾಗಿ ೯೪೩ ಮಹಿಳೆಯರಿದ್ದಾರೆ. ಎಂದರೆ ಒಟ್ಟು ೩೫೭ ಲಕ್ಷ ಮಹಿಳೆಯರ ಕೊರತೆಯಿದೆ. ಕರ್ನಾಟಕದಲ್ಲಿ ಲಿಂಗ ಅನುಪಾತ ೯೭೩ ಮತ್ತು ಇಲ್ಲಿನ ಮಹಿಳೆಯರ ಕೊರತೆ ೮.೩೯ ಲಕ್ಷ. ಇವರೆಲ್ಲ ಹುಟ್ಟುವ ಸ್ವಾತಂತ್ರ್ಯದಿಂದ ವಂಚಿತರು. ದೇಶದ ಒಟ್ಟು ಮಹಿಳೆಯರಲ್ಲಿ ಹುಟ್ಟಿನ ಸ್ವಾತಂತ್ರ್ಯದಿಂದ ವಂಚಿತರಾದ ಮಹಿಳೆಯರ ಪ್ರಮಾಣ ಭಾರತದಲ್ಲಿ ಶೇ. ೬.೦೮ರಷ್ಟಿದ್ದರೆ ಕರ್ನಾಟಕದಲ್ಲಿ ಅವರ ಪ್ರಮಾಣ ಶೇ. ೨.೭೮ರಷ್ಟಿದೆ. ಈ ರೀತಿಯಲ್ಲಿ ಲಿಂಗ ಅನುಪಾತ ಮಹಿಳೆಯರಿಗೆ ಪ್ರತಿಕೂಲವಾಗಿರುವುದಕ್ಕೆ ಅನೇಕ ಕಾರಣಗಳಿರಬಹುದು. ಆದರೆ ಅದಕ್ಕೆ ಮುಖ್ಯ ಕಾರಣವೆಂದರೆ ಹೆಣ್ಣಿನ ಬಗ್ಗೆ ಅಧಿಕಾರಸ್ಥರಲ್ಲಿನ ತಾರತಮ್ಯ ಮನೋಭಾವ. ಅದರ ಇತ್ತೀಚಿಗಿನ ನಿದರ್ಶನವೆಂದರೆ ಇದೀಗ ಸ್ಯಾನಿಟರಿ ನ್ಯಾಪ್‌ಕಿನ್ ಮೇಲೆ ಕೇಂದ್ರ ಸರ್ಕಾರ ಶೇ. ೧೨ ಜಿಎಸ್‌ಟಿ ವಿಧಿಸಿರುವುದು. ಉದ್ದಿಮೆಗಾರರಿಗೆ ಲಕ್ಷಾಂತರ ಕೋಟಿ ತೆರಿಗೆ ವಿನಾಯಿತಿ ನೀಡುವುದಕ್ಕೆ ಸರ್ಕಾರ ಸಿದ್ಧವಿದೆ. ಉದ್ದಿಮೆಗಾರರ ಕೋಟ್ಯಂತರ ರೂಪಾಯಿ ಬ್ಯಾಂಕು ಸಾಲವನ್ನು ಮನ್ನಾ ಮಾಡಲು ಸರ್ಕಾರಕ್ಕೆ ಸಾಧ್ಯವಾಗುತ್ತಿದೆ. ಆದರೆ ನಮ್ಮ ದೇಶದಲ್ಲಿರುವ ೧೫-೪೯ ವರ್ಷಗಳ ಸಂತಾನೋತ್ಪತ್ತಿ ವಯೋಮಾನದ ಸರಿಸುಮಾರು ೩೧೧೬ ಲಕ್ಷ ಮಹಿಳೆಯರ ಬದುಕನ್ನು ಸ್ಯಾನಿಟರಿ ನ್ಯಾಪ್‌ಕಿನ್ ಮೇಲಿನ ಜಿಎಸ್‌ಟಿಯು ಹೈರಾಣವಾಗಿಸುತ್ತದೆ. ಕರ್ನಾಟಕದಲ್ಲಿ ೧೫-೪೯ ವಯೋಮಾನದ ಮಹಿಳೆಯರ ಸಂಖ್ಯೆ ೧೬೮.೯ ಲಕ್ಷ. ಇದು ನಮ್ಮ ಮಹಿಳೆಯರ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಸೀಮಿತಗೊಳಿಸುತ್ತದೆ. ಇದನ್ನು ಅನೇಕರು ತಪ್ಪುತಪ್ಪಾಗಿ ಮಹಿಳೆಯರ ಸಮಸ್ಯೆ ಅನ್ನುವಂತೆ ನಡೆದುಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಇದು ಆರೋಗ್ಯದ ಸಮಸ್ಯೆ, ಇದು ಅಭಿವೃದ್ಧಿ ಸಮಸ್ಯೆ. ಇದು ಉತ್ಪಾದನೆಯ ಸಮಸ್ಯೆ.



**ಆಹಾರ ಭದ್ರತೆಯಿಂದ ವಂಚಿತರು**

ಇಂದು ಜನರ ಆಹಾರ ಸಂಸ್ಕೃತಿಯ ಮೇಲೆ ಅಮಾನವೀಯ ಆಕ್ರಮಣ ನಡೆಯುತ್ತಿದೆ. ಬಡವರ, ಕೂಲಿಕಾರರ, ದಲಿತರ, ಅಲ್ಪಸಂಖ್ಯಾತರ ಆಹಾರ ಸ್ವಾತಂತ್ರ್ಯವನ್ನು ರಾಜಾರೋಷವಾಗಿ ಕಿತ್ತುಕೊಳ್ಳಲಾಗುತ್ತಿದೆ. ಮಾಂಸಾಹಾರ-ಸಸ್ಯಾಹಾರಗಳನ್ನು ಪರಸ್ಪರ ವಿರೋಧದ ಸಂಗತಿಗಳನ್ನಾಗಿ ಮಾಡಲಾಗುತ್ತಿದೆ. 'ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು, ತನ್ನಂತೆ ಪರರ ಬಗೆದಡೆ, ಕೈಲಾಸ ಬಿನ್ನಾಣವಕ್ಕು ಸರ್ವಜ್ಞ' ಎಂಬ ವಚನವೇನಿದೆ ಇದು ನಮ್ಮ ಪರಂಪರೆ ನಮಗಿತ್ತಿರುವ ಒಂದು ಮೌಲ್ಯ. ಇದಕ್ಕೆ ಇಂದು ಅಪಾಯ ಬಂದೊದಗಿದೆ. ಇಂದು ನಮ್ಮ ಸಮಾಜ ಎದುರಿಸುತ್ತಿರುವ ಬಹುಮುಖ್ಯ ಆತಂಕಕಾರಿ ಸಂಗತಿಯೆಂದರೆ 'ಪರರನ್ನು' ಪರಿಭಾವಿಸಿಕೊಳ್ಳುವ ಕ್ರಮ. ಸರ್ವಜ್ಞನೇನೋ 'ತನ್ನಂತೆ ಪರರ ಬಗೆದಡೆ, ಕೈಲಾಸ ಬಿನ್ನಾಣವಕ್ಕು' ಅನ್ನುವ ನೀತಿಯನ್ನು ಪ್ರತಿಪಾದಿಸಿದ. ನಾವು ಬೇರೆ, ಅವರು ಬೇರೆ ಅನ್ನುವ ವಿಭಜನೆಯೇನಿದೆ ಅದು ಸಮಾಜದಲ್ಲಿ ಅಸಹಿಷ್ಣುತೆಯನ್ನು ಹುಟ್ಟುಹಾಕುತ್ತದೆ. ಇಂದು ದಲಿತರನ್ನು, ಅಲ್ಪಸಂಖ್ಯಾತರನ್ನು ನಿಜಕ್ಕೂ ಪರರೆಂದು ನೋಡುವ ಕ್ರಮ ರೂಢಿಗೆ ಬರುತ್ತಿದೆ. ಮಾಂಸಾಹಾರವನ್ನು ರಾಷ್ಟ್ರದ್ರೋಹವೆನ್ನುವಂತೆ ಬಿಂಬಿಸಲಾಗುತ್ತಿದೆ. ಮಾಂಸಾಹಾರಿಗಳು ದೇಶದ ನಾಗರಿಕರಲ್ಲವೇನೋ ಅನ್ನುವ ರೀತಿಯಲ್ಲಿ ನಡೆದುಕೊಳ್ಳಲಾಗುತ್ತಿದೆ. ಮಾಂಸಾಹಾರಿಗಳ ಜೊತೆ ಕೂರುವುದು ಅಪವಿತ್ರ ಅನ್ನುವ ವಾತಾವರಣವನ್ನು ಸೃಷ್ಟಿಸಲಾಗುತ್ತಿದೆ. ಜನರ ಆಹಾರವನ್ನೇ ಸರ್ಕಾರ ಕಿತ್ತುಕೊಂಡರೆ ಅವರು ಎಲ್ಲಿಗೆ ಹೋಗಬೇಕು ! ಬಸವಣ್ಣನ ಮಾತುಗಳಲ್ಲಿ ಹೇಳುವುದಾದರೆ ಒಲೆ ಹೊತ್ತಿ ಉರಿದರೆ ಸಹಿಸಿಕೊಳ್ಳಬಹುದು. ಆದರೆ ಧರೆ ಹೊತ್ತಿ ಉರಿದರೆ ಆಸರೆ ಎಲ್ಲಿ ? ಬೇಲಿಯೇ ಎದ್ದು ಹೊಲವನ್ನು ಮೇಯುವುದಾದರೆ ಯಾರಿಗೆ ದೂರನ್ನು ಹೇಳಿಕೊಳ್ಳುವುದು !! ಇಂದು ಸಮಾಜದಲ್ಲಿನ ಬಲಿಷ್ಠರಿಗೆ ಕಾನೂನು, ನ್ಯಾಯಾಂಗಗಳ ಬಗ್ಗೆ ನಂಬಿಕೆ ಇಲ್ಲದಂತಾಗಿದೆ. ಅವರು ಕಾನೂನನ್ನೇ ಕೈಗೆ ತೆಗೆದುಕೊಳ್ಳುತ್ತಿದ್ದಾರೆ. ಇದನ್ನೇ ಅಸಹಿಷ್ಣುತೆ ಎಂದು ಕರೆಯುವುದು.

**ಭಾರತದಲ್ಲಿ ಮಾಂಸಾಹಾರ ಮತ್ತು ಸಸ್ಯಾಹಾರ**

ಇಂದು ನಮ್ಮ ದೇಶದಲ್ಲಿ ಮಾಂಸಾಹಾರದ ಬಗ್ಗೆ ಇನ್ನಿಲ್ಲದ ಆಕ್ರೋಶ, ಅಸಹಿಷ್ಣುತೆ ಕಂಡುಬರುತ್ತಿದೆ. ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯಾ ಪ್ರಕಟಿಸಿರುವ ಸ್ಯಾಂಪಲ್ ರಿಜಿಸ್ಟ್ರೇಶನ್ ಸಿಸ್ಟಮ್ ಸಮೀಕ್ಷೆ ಪ್ರಕಾರ ಭಾರತದಲ್ಲಿ ಮಾಂಸಾಹಾರಿಗಳ ಪ್ರಮಾಣ ೧೫ ವರ್ಷಕ್ಕೆ ಮೇಲ್ಪಟ್ಟ ವಯೋಮಾನದವರಲ್ಲಿ ಶೇ. ೭೧. ಅಂದರೆ ಭಾರತದಲ್ಲಿ ಪ್ರತಿ ೧೦ ಜನರಲ್ಲಿ ಏಳು ಜನರು ಮಾಂಸಾಹಾರಿಗಳು (ಹಿಂದೂಸ್ತಾನ್ ಟೈಮ್ಸ್, ಜೂನ್ ೦೮, ೨೦೧೬).

ಭಾರತವು ತನ್ನ ೭೦ನೆಯ ಸ್ವಾತಂತ್ರ್ಯೋತ್ಸವವನ್ನು ಆಚರಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಬಡತನದ ಬಗ್ಗೆ, ಹಸಿವಿನ ಬಗ್ಗೆ, ಅಸಮಾನತೆಯ ಬಗ್ಗೆ, ಲಿಂಗ ತಾರತಮ್ಯದ ಬಗ್ಗೆ ಚಿಂತಿಸುವುದು ಮತ್ತು ಅದರ ಪರಿಹಾರದ ಬಗ್ಗೆ ಚರ್ಚೆ ನಡೆಸುವುದು ಅಗತ್ಯ. ಸ್ವಾತಂತ್ರ್ಯ ಅನ್ನುವುದು ಅಭಿವೃದ್ಧಿಯ ಸಂಗತಿಯಾಗಬೇಕು. ಅದರ ಆಚರಣೆ ಆದ್ಯತೆಯ ಸಂಗತಿಯಾಗಬೇಕಿಲ್ಲ.

**ಡಾ॥ ಟಿ. ಆರ್. ಚಂದ್ರಶೇಖರ**
ಸಮಾಲೋಚಕ, ನಾಲ್ಕನೆಯ ರಾಜ್ಯ ಹಣಕಾಸು ಆಯೋಗ
ದಕ್ಷಿಣ ಭಾಗ, ಮೂರನೆಯ ಮಹಡಿ, ಖನಿಜ ಭವನ
ರೇಸ್ ಕೋರ್ಸ್ ರೋಡ್, ಬೆಂಗಳೂರು – ೫೬೦ ೦೦೧

ಒಂದು ದೀರ್ಘ ಹೋರಾಟದ ನಂತರ ಬ್ರಿಟಿಷ್ ಆಳರಸರ ಹಿಡಿತದಿಂದ ನಮ್ಮ ದೇಶವು ಸ್ವತಂತ್ರಗೊಂಡು ೭೦ ವರ್ಷಗಳಾಗಿವೆ. ಸಾವಿರಾರು ನದಿಗಳು ಸೇರಿ ನಡೆದ ಈ ಹೋರಾಟದ ಸಾಗರವು ನಮ್ಮ ದೇಶದ ಜನರ ಎಲ್ಲ ಆಸೆ, ಆಕಾಂಕ್ಷೆ, ನೆಮ್ಮದಿಯನ್ನು ಪೂರೈಸಲು ಸಾಧ್ಯವಾಯಿತೆ? ಎಂಬುದು ದೇಶದ ಮುಂದಿರುವ ಪ್ರಶ್ನೆ. "ಯಾರಿಗೆ ಬಂತು, ಎಲ್ಲಿಗೆ ಬಂತು ೪೭ರ ಸ್ವಾತಂತ್ರ್ಯ?" ಎಂದು ಕವಿ ಸಿದ್ದಲಿಂಗಯ್ಯನವರು ಪ್ರಶ್ನಿಸಿದರೆ, "ನಾವು ಕೇಳುತ್ತಿರುವುದು ದೇಶದೊಳಗಿನ ಸ್ವಾತಂತ್ರ್ಯವೇ ಹೊರತು ದೇಶದಿಂದ ಸ್ವಾತಂತ್ರ್ಯ ಅಲ್ಲ" ಎಂದು ಆಜಾದಿ ಕನ್ಹಯ್ಯ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ವಿಸ್ತರಿಸಿದ್ದಾನೆ. ಈ ಸಂಬಂಧವಾಗಿ ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳ ವಿದ್ಯಾರ್ಥಿ ಯುವ ಜನರು ತಮ್ಮ ಅಭಿಪ್ರಾಯಗಳನ್ನು ಇಲ್ಲಿ ಹಂಚಿಕೊಂಡಿದ್ದಾರೆ.



# ನಮ್ಮ ದೇಶದ ಸ್ವಾತಂತ್ರ್ಯ...

ಯುವ ಧ್ವನಿ

ದೇಶದ ಸ್ವಾತಂತ್ರ್ಯ

## ಧಾರ್ಮಿಕ ಭಯೋತ್ಪಾದನೆಯಿಂದ ಸ್ವಾತಂತ್ರ್ಯ ಬೇಕಿದೆ !

**ಭಾ**ರತ ಸ್ವತಂತ್ರ ಆಗಬೇಕಾದದ್ದು ತಕ್ಕಡಿ ಹಿಡಿದವರಿಂದಲೋ ಅಥವಾ ನಮ್ಮ ಅಸ್ಮಿತೆಯನ್ನು ಆಳುವ ಚುಕ್ಕಾಣಿ ಹಿಡಿದವರಿಂದಲೋ ಅಲ್ಲ! ಭಾರತ "ಧಾರ್ಮಿಕ ಭಯೋತ್ಪಾದನೆ"ಯಿಂದ ಸ್ವತಂತ್ರ ಆಗಬೇಕಿದೆ.

ಹೊರಗಿನಿಂದ ನೋಡಿದರೆ ಭಾರತ ಸರ್ವತಂತ್ರ ಸ್ವತಂತ್ರ ರಾಷ್ಟ್ರವಾಗಿ, ಪ್ರಬುದ್ಧ ಪ್ರಜಾತಂತ್ರ ದೇಶವಾಗಿ ಕಂಡರೂ ಸಹ, ಇನ್ನೂ ಇದು ಅಸಂಖ್ಯಾತ ಅಸಮಾನತೆ, ಮೌಢ್ಯತೆ ಹಾಗೂ ಮಡಿವಂತಿಕೆಗಳಿಂದ ಸ್ವಾತಂತ್ರ್ಯ ಪಡೆದೇ ಇಲ್ಲ. ಧಾರ್ಮಿಕತೆಯ ಅದೆಷ್ಟೋ ಭಯಾನಕ ಮಡಿವಂತಿಕೆಗಳಲ್ಲಿ ಇನ್ನೂ ಈ ದೇಶ ಸ್ವತಂತ್ರ ಕಾಣದೆ ಒದ್ದಾಡುತ್ತಲೇ ಇದೆ. ಏಕೆಂದರೆ, ನಮ್ಮ ದೇಶವು ಪಾರಂಪರಿಕವಾಗಿ ಧಾರ್ಮಿಕತೆ ಹಾಗೂ ಮೌಢ್ಯತೆಗಳನ್ನೇ ತನ್ನ ಶ್ರೇಷ್ಠತೆ ಎಂದು ನಂಬಿಕೊಂಡು ಬಂದಿದೆ ಮತ್ತು ಈಗಲೂ ನಂಬುತ್ತಲೇ ಇದೆ. ಆದರೆ, ಅವುಗಳ ಮೌಲ್ಯಮಾಪನ ಮಾಡುವ ಕೆಲಸ ಶುರುವಾಗಬೇಕಾದ ಅನಿವಾರ್ಯವಿದೆ ಅನಿಸುತ್ತೆ.

ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕ ಹೀಗೆ ಎಲ್ಲಾ ವಲಯಗಳಲ್ಲೂ ಸಹ ಧಾರ್ಮಿಕತೆಯ ಅಜಂಡಾಗಳು ತಮ್ಮ ಹಿಡಿತವನ್ನು ಸಾಧಿಸಿಕೊಂಡಿವೆ. ಅಲ್ಲದೆ ತಮ್ಮ ಅನುಕೂಲಕ್ಕೆ ತಕ್ಕ ಪುರಾಣ, ಕಟ್ಟುಕತೆ, ಐತಿಹ್ಯಗಳನ್ನೇ 'ಇತಿಹಾಸ' ಎಂದು ನಂಬಿಸಲು ಇಲ್ಲಿನ ಧರ್ಮಗಳು ಹೆಣಗಾಡುತ್ತಿವೆ. ವೈಯಕ್ತಿಕ ನಂಬಿಕೆಯನ್ನು ಗೌರವಿಸುವುದು ಪ್ರಜಾಪ್ರಭುತ್ವದ ಕರ್ತವ್ಯ ಎಂಬ ಮಾತನ್ನು ಒಪ್ಪೋಣ; ಆದರೆ, ತಮ್ಮ ವೈಯಕ್ತಿಕ ನಂಬಿಕೆಯನ್ನು ಸಾರ್ವತ್ರಿಕಗೊಳಿಸಲು ನಡೆಸುವ ಹುನ್ನಾರಗಳು ಹಾಗೂ ಅಮಾನವೀಯ ಆಚರಣೆ ಮತ್ತು ಹಿಂಸಾತ್ಮಕ ದೌರ್ಜನ್ಯಗಳು ಈ ಪ್ರಜಾಪ್ರಭುತ್ವಕ್ಕೆ ಮಸಿ ಬಳಿಯುವಂಥವು. ಅಷ್ಟೇ ಅಲ್ಲ, ತಮ್ಮ ಧರ್ಮದ ಶ್ರೇಷ್ಠತೆಯನ್ನು ಇತರ ಎಲ್ಲರ ಮೇಲೂ ಹೇರಲೆಂದು ಹೊರಟಿರುವ 'ಒಂಟಿ ಬಣ್ಣದ ಬಾವುಟಗಳು' ಅದೆಷ್ಟೋ ಅಮಾಯಕರ ಜೀವಗಳನ್ನು ಆಹುತಿ ತೆಗೆದುಕೊಳ್ಳುತ್ತಿರುವ ನಿದರ್ಶನಗಳು ಇಂದು ಸಾಮಾನ್ಯ ಸಂಗತಿಯಾಗಿವೆ. ಅಲ್ಲದೆ, ಇದರಿಂದ ಭಾರತದ ಐಕ್ಯತೆಗೂ ಧಕ್ಕೆ ಆಗುತ್ತಿದೆ ಎಂದರೆ ತಪ್ಪಲ್ಲ.

ಭಾರತವು ಹಲವು ಸಂಸ್ಕೃತಿಗಳ, ವಿವಿಧ ಭಾಷೆಗಳ ದೇಶವಾಗಿದ್ದರೂ ಸಹ, ಶಾಂತಿ ಹಾಗೂ ಸಹಬಾಳ್ವೆಗೆ ಹೆಸರಾದ ನಾಡು ಎಂಬ ಹೆಗ್ಗಳಿಕೆ ಇದ್ದರೂ ಕೂಡ, ಇತ್ತೀಚಿನ ದಿನಗಳಲ್ಲಿ ಈ ಮಾತಿಗೆ ಕಳಂಕ ತರುವಂತೆ ಒಂದೇ ಸಂಸ್ಕೃತಿಯನ್ನು ಅಥವಾ ಒಂದೇ ಭಾಷೆಯನ್ನು ಹೇರುವ ಕೆಲಸ ನಡೆಯುತ್ತಿದೆ. ಅಲ್ಲದೆ, ಇತರರ ಸಂಸ್ಕೃತಿಯ ನಿಲುವನ್ನು ಗೌರವಿಸದೆ ಅದನ್ನು ವ್ಯಂಗ್ಯ ಮಾಡುವ ಅಥವಾ ಆ ಸಂಸ್ಕೃತಿಯೇ ದೇಶಕ್ಕೆ ಮಾರಕ ಎಂಬ ಪ್ರಚೋದನೆಯು ಎಲ್ಲೆಡೆ ನಡೆಯುತ್ತಿದೆ. ಆಹಾರ ಸಂಸ್ಕೃತಿ, ವಸ್ತ್ರ ಸಂಸ್ಕೃತಿ, ಆಚರಣೆಯ ವಿಧಾನ, ಬದುಕಿನ ಶೈಲಿ ...ಹೀಗೆ ಎಲ್ಲವನ್ನು ದ್ವೇಷಿಸುವ ಕೆಲಸಗಳು ನಡೆಯುತ್ತಿವೆ. ಈ ನೆಪದಲ್ಲಿ ಕೊಲೆಗಳೂ ನಡೆಯುತ್ತಿವೆ! ಮೊದಲು ಈ ಧಾರ್ಮಿಕ ದೌರ್ಜನ್ಯಗಳಿಂದ ಸ್ವಾತಂತ್ರ್ಯ ಬೇಕಿದೆ.

ಆದ್ದರಿಂದ ಭಾರತ ನಿಜಕ್ಕೂ ಸ್ವತಂತ್ರ ರಾಷ್ಟ್ರವಾಗಬೇಕಾದರೆ, ಧರ್ಮಗಳ ಹೆಸರಿನಲ್ಲಿ ನಡೆಸುವ ದೌರ್ಜನ್ಯ ಹಾಗೂ ಧಾರ್ಮಿಕ ಭಯೋತ್ಪಾದನೆಯಿಂದ ಬಿಡುಗಡೆ ದೊರೆಯಬೇಕಿದೆ. ಇಲ್ಲದಿದ್ದರೆ ಭಾರತವು ಧರ್ಮದ ಕೆಟ್ಟ ಕ್ಯಾನ್ಸರ್ ತಗಲಿಸಿಕೊಂಡ ರೋಗಿಷ್ಠ ರಾಷ್ಟ್ರವಾಗಿಬಿಡುತ್ತದೆ. ಅದಕ್ಕೆ ಮದ್ದೆಂದರೆ ಈ ಧಾರ್ಮಿಕ ಭಯೋತ್ಪಾದನೆಯ ಸಂಪೂರ್ಣವಾದ ನಾಶ ಮತ್ತು ಸಮ ಸಮಾಜದ, ನೈಜ ಪ್ರಜಾತಾಂತ್ರಿಕ ವ್ಯವಸ್ಥೆಯ ಅನುಷ್ಠಾನವೇ ಆಗಿದೆ.

❍ **ಚಾಂದ್ ಪಾಷ ಎನ್. ಎಸ್.**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

*   *   *

## ಸಂವಿಧಾನದ ಆಶಯವು ಅಕ್ಷರಶಃ ಜಾರಿಯಾಗಬೇಕು

**ಒಂ**ದು ದೇಶದ ಸ್ವಾತಂತ್ರ್ಯವನ್ನು ವ್ಯಾಖ್ಯಾನಿಸುವಾಗ ಆ ಪದಕ್ಕೆ ಹಲವು ಆಯಾಮಗಳಿರುವುದನ್ನು ನಾವು ಗಮನಿಸಬಹುದು. ದೇಶದ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಹೇಳುವಾಗ ತೆಲುಗು ಕವಿ ಗುರುಜಾಡ ಅಪ್ಪಾರಾವ್ ಹೇಳುವಂತೆ "ದೇಶ ಮಂಟೇ ಮಟ್ಟಿಕಾದೊಯ್ ದೇಶಮಂಟೆ ಮನುಷ್ಯುಲೋಯ್" ಇಲ್ಲಿ ದೇಶವೆಂದರೆ ಬರಿ ಮಣ್ಣಲ್ಲ, ಭೂಪಟವಲ್ಲ, ದೇಶವೆಂದರೆ ಮನುಷ್ಯರು, ಪ್ರಜೆಗಳು, ಅವರ ಸ್ವಾತಂತ್ರ್ಯವೇ ದೇಶದ ಸ್ವಾತಂತ್ರ್ಯ ಎಂಬ ಕವಿಯ ಆಶಯಕ್ಕೆ ನಾನು ಬದ್ಧಳಾಗಿದ್ದೇನೆ. ಒಂದು ದೇಶವನ್ನು ಮತ್ತೊಂದು ದೇಶ ಹಿಡಿತದಲ್ಲಿಟ್ಟುಕೊಂಡರೆ ಮಾತ್ರ ಪರತಂತ್ರವಲ್ಲ. ಅದೇ ರೀತಿ ತಮ್ಮದೇ ದೇಶದ ಪ್ರಜಾಪೀಡಕರು ಜನತೆಯನ್ನು ಹಿಂಸಿಸುತ್ತಿದ್ದಾರೆ ಅದು ಸ್ವಾತಂತ್ರ್ಯವೂ ಅಲ್ಲ.




## ದೇಶದ ಸ್ವಾತಂತ್ರ್ಯ

ಭಗತ್ ಸಿಂಗ್ ತನ್ನ ತಾಯಿಗೆ ೧೯೩೧ರಲ್ಲಿ ಜೈಲಿನಿಂದಲೇ ಬರೆಯುವ ಪತ್ರದಲ್ಲಿ ಹೀಗೆ ಹೇಳುತ್ತಾನೆ. "ಮಾ, ನನ್ನ ದೇಶ ಒಂದು ದಿನ ಸ್ವಾತಂತ್ರ್ಯ ಪಡೆಯುತ್ತದೆ ಎಂಬ ಬಗ್ಗೆ ನನಗೆ ಅನುಮಾನವಿಲ್ಲ. ಆದರೆ ನನಗೆ ಭಯವಿರುವುದು ಬಿಳಿ ಸಾಹೇಬರು ಖಾಲಿ ಮಾಡಿದ ಕುರ್ಚಿಗಳಲ್ಲಿ ಕಂದು ಸಾಹೇಬರು ಕುಳಿತುಕೊಳ್ಳುತ್ತಾರೆಂಬುದು. ಸ್ವಾತಂತ್ರ್ಯ ಎಂದರೆ ಕೇವಲ ಯಜಮಾನರ ಬದಲಾವಣೆ ಎಂದಾದರೆ ಜನರ ಸ್ಥಿತಿ ಹೀಗೆಯೇ ಉಳಿಯುತ್ತದೆ. ಪುರಾತನ ವ್ಯವಸ್ಥೆಯನ್ನು ನಾಶ ಮಾಡದೆ ಹೊಸ ಬದಲಾವಣೆಯನ್ನು ತರುವುದು ಸಾಧ್ಯವಿಲ್ಲ. ಇಂದು ಭಗತ್ ಸಿಂಗ್ ಅವರ ಸ್ವಾತಂತ್ರ್ಯದ ಮೇಲಿನ ಅಭಿಪ್ರಾಯಕ್ಕೆ ಅನ್ವರ್ಥವಾಗಿ ಭಾರತದ ಸ್ವಾತಂತ್ರ್ಯವು ಅಸ್ತಿತ್ವದಲ್ಲಿದೆ. ಬಿಳಿಯ ಸಾಹೇಬರಿಗಿಂತ ಕಂದು ಸಾಹೇಬರು ದೇಶವನ್ನು ಮತ್ತು ಪ್ರಜೆಗಳನ್ನು ಅತ್ಯಂತ ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದಾರೆ. ಪ್ರತಿನಿತ್ಯ ಬಡವರ, ಅಲ್ಪಸಂಖ್ಯಾತರ, ದಲಿತರ ಮತ್ತು ರೈತ ಕೂಲಿ ಕಾರ್ಮಿಕರ, ಮಹಿಳೆಯರ ಬದುಕು ಸ್ವಾತಂತ್ರ್ಯ ಭಾರತದಲ್ಲಿ ಸಂವಿಧಾನದ ಮುಕ್ತ ವಾತಾವರಣದಲ್ಲಿ ಅಭದ್ರತೆಯಿಂದ, ಭಯದಿಂದ ಬದುಕುವಂತಾಗಿದೆ. ಅಭಿವ್ಯಕ್ತಿ, ಆಹಾರ, ಸಂಸ್ಕೃತಿ ಇದರ ಜೊತೆಗೆ ನಮ್ಮತನವನ್ನೇ ಸಂವಿಧಾನದಡಿಯಲ್ಲಿ ಕಳೆದುಕೊಂಡಿದ್ದೇವೆ."

*ಬಿಳಿಯನಾಳಿದರೇನು ಕರಿಯನಾಳಿದರೇನು*
*ಎಲ್ಲರೂ ಜಿಗಣೆಗಳೇ ನನ್ನ ನೆತ್ತರಿಗೆ*
*ಸಾಮ್ರಾಜ್ಯವಾದಗಂ*
*ಸುಲಿಗೆ ರೈತರಿಗೆ*
*ಕತ್ತಿ ಪರರದಾದರೆ ಮಾತ್ರ ನೋವೆ*
*ನಮ್ಮವರೆ ಹದ ಹಾಕಿ ತಿವಿದರದು ಹೂವೇ*

ಕುವೆಂಪು ಅವರ ಈ ಸಾಲುಗಳು ಸ್ವಾತಂತ್ರ್ಯವೆಂದಾಗ ಪದೇ ಪದೇ ನೆನಪಾಗುತ್ತವೆ.

ಇಂದು ಭಾರತೀಯರಲ್ಲಿ ನೈಜ ಸ್ವಾತಂತ್ರ್ಯ ಮತ್ತು ನೈಜ ಪ್ರಜಾಪ್ರಭುತ್ವ, ಸಂವಿಧಾನ, ಸಂಸದೀಯ ವ್ಯವಸ್ಥೆ ಇದೆಲ್ಲವೂ ಅಪಾಯದಲ್ಲಿದೆ. ಭಾರತದ ಸ್ವಾತಂತ್ರ್ಯ ನಂತರ ಆಂತರಿಕ ಅಸಮಾಧಾನ ಮತ್ತು ಸಂಭಾವ್ಯ ದಂಗೆಯನ್ನು ಶಮನ ಮಾಡಲು ಸಂವಿಧಾನವನ್ನು ಮತ್ತು ಅದರ ರಚನೆಯ ಜವಾಬ್ದಾರಿಯನ್ನು ಡಾ॥ ಬಿ. ಆರ್. ಅಂಬೇಡ್ಕರ್ ನೇತೃತ್ವದ ತಂಡಕ್ಕೆ ನೀಡಲಾಯಿತು. ದೇಶದ ದಂಗೆಯಲ್ಲಿ ಪಾಲ್ಗೊಂಡಿದ್ದ ಬಹುಸಂಖ್ಯಾತರನ್ನು ಸಮಾಧಾನಪಡಿಸುವ ಹುನ್ನಾರವೂ ಇದರಲ್ಲಡಗಿತ್ತು. ಬಾಬಾಸಾಹೇಬರ ಗರಿಷ್ಠ ಪ್ರಯತ್ನದಿಂದ ಉತ್ತಮವಾದ ಸಂವಿಧಾನ ರಚನೆಯಾಗಿದೆ. ಆದರೆ ಈ ಸಂವಿಧಾನವು ಸಾರಾಂಶದಲ್ಲಿ ಹಾಗೂ ವಾಸ್ತವದಲ್ಲಿ ಪೂರ್ಣ ಪ್ರಮಾಣದಲ್ಲಿ ಜಾರಿಯಾಗಿಲ್ಲ. ಸಂವಿಧಾನ, ಸಂಸತ್ತನ್ನು ಪಕ್ಕಕ್ಕೆ ಇಟ್ಟು ಏಕವ್ಯಕ್ತಿಯ ಮೂಲಕ ಶಾಸನಗಳನ್ನು, ಕಾನೂನುಗಳನ್ನು ಜಾರಿಮಾಡುವ ಮಟ್ಟಕ್ಕೆ ಬಂದುನಿಂತಿದೆ ಆಳುವ ವ್ಯವಸ್ಥೆ. ಕನಿಷ್ಠ ಸಂವಿಧಾನದ ಆಶಯವು ಅಕ್ಷರಶಃ ಜಾರಿಯಾದರೆ ನೈಜ ಸ್ವಾತಂತ್ರ್ಯವನ್ನು ಸಾಧಿಸಲು ದಾರಿಯಾಗುತ್ತದೆ.

❍ **ಪದ್ಮಶ್ರೀ**, ಪಿಎಚ್.ಡಿ. ವಿದ್ಯಾರ್ಥಿನಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

* * *

## ದೇಶದ ಹಿತವೂ ಧರ್ಮ ಸಹಿಷ್ಣುತೆಯಲ್ಲಿ ಅಡಗಿದೆ

**ಭಾ**ರತವು ಹಲವು ಭಾಷೆಗಳ, ಹಲವು ಪ್ರದೇಶಗಳ, ಹಲವು ವರ್ಣಗಳ ಮತ್ತು ಪಂಥಗಳ ದೇಶವಾದ್ದರಿಂದ, ಇಲ್ಲಿರುವ ಮಾತೃಭಾವ ಎಲ್ಲರ ಮನಸ್ಸಿಂದ ಹುಟ್ಟಬೇಕೇ ಹೊರತು, ತೋರಿಕೆಯಿಂದಲ್ಲ (ನೆಲ್ಸನ್ ಮಂಡೇಲಾ). ಮನುಷ್ಯ ವ್ಯಕ್ತಿಯಾಗಿ ಹಲವು ತುಮುಲಗಳಲ್ಲಿ ಒದ್ದಾಡುತ್ತಾನೆ. ಆದರೆ ಆ ತುಮುಲಗಳನ್ನು ಧರ್ಮದಿಂದ ಅಳೆದು ಪೂರ್ವಜನ್ಮದ ಪಾಪ–ಕರ್ಮಗಳಿಂದ ಅಳೆದು ಅವನನ್ನು ಪೂರ್ತಿಯಾಗಿ ಹಾಳುಮಾಡುವ ಕಾರ್ಯ ಎಗ್ಗಿಲ್ಲದೆ ನಡೆಯುತ್ತಲೇ ಇರಬಾರದು. ಜೀವನದ ಸತ್ಕಾರ್ಯಗಳು ನಡೆಯದ ಸ್ಥಿತಿ ಉಂಟಾಗಿ ಮಾನವೀಯ ಮೌಲ್ಯಗಳನ್ನು ಗಾಳಿಗೆ ತೂರಿ, ಧರ್ಮ ಮತ್ತು ಭೋಗದ ಮೂಲಕ ದೇಶವನ್ನು ಕಟ್ಟಲು ಹೊರಟರೆ ಜ್ಞಾನ ತನ್ನ ಅಸ್ತಿತ್ವ ಕಳೆದುಕೊಂಡು, ದೊಂಬಿಗಳು ಪ್ರಾರಂಭವಾಗಿ ಮಂಗಳೂರಿನಂತೆ ಹಲವು ಪ್ರದೇಶಗಳು ಹತ್ತಿ ಉರಿಯುವುದರಲ್ಲಿ ಅನುಮಾನವಿಲ್ಲ. ಜಾಗಟೆ ಮತ್ತು ಬಾವುಟಗಳ ಮೂಲಕ ದೇಶ ಕಟ್ಟಲು ಹೋದರೆ ಗಂಟೆಗಳು ಕೂಡ ಧೂಳು ಹಿಡಿಯುವುದರಲ್ಲಿ ಅನುಮಾನವಿಲ್ಲ. ಭಗತ್ ಸಿಂಗ್‌ನ ಧರ್ಮವು ಪ್ರಶ್ನೆ ಮಾಡುವ ಪ್ರೇರಣೆಯನ್ನು ನೀಡುತ್ತದೆ. ಆದರೆ ಇವತ್ತಿನ ಭಗತ್ ಸಿಂಗ್‌ನ ಅನುಯಾಯಿಗಳನ್ನು ನೋಡಿದರೆ ಅವನೆಲ್ಲೋ ಕಳೆದು ಹೋದಂತಿದೆ. ಎಲ್ಲ ಧರ್ಮವು ಒಳ್ಳೆಯದನ್ನು ಬೋಧಿಸಿ, ಒಳ್ಳೆಯದನ್ನು ಮಾಡುವಂತಿದ್ದರೆ ಆ ಧರ್ಮವನ್ನು ನಾನು ಶ್ರೇಷ್ಠ ಧರ್ಮವೆಂದು ಕರೆದ ವಿವೇಕಾನಂದರು, ಜಗತ್ತಿನಲ್ಲಿರುವ ದೇಶದ ಬಲವನ್ನು ಎತ್ತಿ ಹಿಡಿದಿದ್ದರು. ದೇಶದಲ್ಲಿ ಅನುಮಾನಾಸ್ಪದವಾಗಿ ಧರ್ಮದ, ಜಾತಿಯ ಮತ್ತು ಲಿಂಗದ ಹೆಸರಿನಲ್ಲಿ ಸಾಯುವವರ ಕುರಿತು ನ್ಯಾಯ ಕೊಡಿಸಲು ಮಾತನಾಡಿದರೆ, ಅದು ದೇಶದಲ್ಲಿ ನಡೆಯುತ್ತಿರುವ ಅಮಾನುಷ ಕೃತ್ಯಗಳ ಬಗ್ಗೆ ಬೇಸರ ಪಟ್ಟು ಕೇಳುವ ದೇಶದೊಳಗಿನ ಸ್ವಾತಂತ್ರ್ಯವೇ ಹೊರತು, ದೇಶದಿಂದಲೇ ಸ್ವಾತಂತ್ರ್ಯವಲ್ಲ. ನಮ್ಮ ದೇಶಪ್ರೇಮವು ವ್ಯಕ್ತಿಯ ಮಾನವೀಯ ಗುಣವನ್ನು ಹಾಳುಮಾಡದಂತಿರಬೇಕು. ಇಲ್ಲದಿದ್ದರೆ ಆ ದೇಶಪ್ರೇಮ ಅಂಧಕಾರವಾಗಿ ಬದುಕನ್ನು ಹಾಳುಮಾಡುತ್ತದೆ (ರವೀಂದ್ರನಾಥ ಠಾಗೂರ್). ದೇಶದ ಕೂಲಿ ಕಾರ್ಮಿಕರು, ರೈತರ ಪರವಾಗಿ ಝಂಡವನ್ನು ಹಿಡಿದು ರಾಷ್ಟ್ರದಲ್ಲಿ ನಡೆಯುತ್ತಿರುವ ರೈತರ ಸಮಸ್ಯೆಯನ್ನು ಸ್ಪಂದಿಸಿದ್ದರೆ ರೈತನ ಬದುಕಾದರೂ ಹಸನಾಗುತಿತ್ತು. ಯಾವ ರೈತನ ಹೆಂಡತಿಯೂ ವಿಧವೆ ಆಗುತ್ತಿರಲಿಲ್ಲ. ಕುವೆಂಪು ಅವರ ವಿಶ್ವಮಾನವರಾಗಿ ವಿಶ್ವಶಾಂತಿ ನೆಲೆಸಿ ನಿರಂಕುಶಮತಿಗಳಾಗುತ್ತಿದ್ದೆವು. ಈ ದೇಶದಲ್ಲಿ ಶಾಂತಿ ಮೂಡಲಿ ಎಂದು ಕನ್ಹಯ್ಯನಂತಹವರು ಕೂಗಾಡುವುದು ತಪ್ಪುತ್ತಿತ್ತು, ಮನುವಾದಿಗಳಿಂದ, ದೇಶದಲ್ಲಿ ನಡೆಯುತ್ತಿರುವ ಭ್ರಷ್ಟಾಚಾರಿಗಳಿಂದ ಸ್ವಾತಂತ್ರ್ಯವನ್ನು ಕೇಳುವ ಪ್ರಮೇಯವೂ ಇರುತ್ತಿರಲಿಲ್ಲ ಹಾಗೂ ಈ ದೇಶದಲ್ಲಿ ಅಮಾನವೀಯ ಕೃತ್ಯಗಳು ನಡೆಯುತ್ತಿರಲಿಲ್ಲ. ಬೌದ್ಧಿಕ ವಲಯಗಳಲ್ಲಿ ಚರ್ಚೆಯು ನಡೆಯುತ್ತಿರಲಿಲ್ಲ, ನಾವು ಈ ಲೇಖನವನ್ನು ಬರೆಯುತ್ತಿರಲಿಲ್ಲ ಹಾಗೂ ದೇಶದಲ್ಲಿ ಉಸಿರು ಕಟ್ಟುವ ವಾತಾವರಣವು ಇರುತ್ತಿರಲಿಲ್ಲ, ಎಲ್ಲರೂ ತುರ್ತು ಪರಿಸ್ಥಿತಿ ಬಂದಿದೆ ಎಂದು ಮಾತನಾಡುತ್ತಿರಲಿಲ್ಲ ಮತ್ತು ಘರ್ ವಾಪಸಿಯ ಕುರಿತು ತಸ್ಲೀಮ ನಸರೀನ್ ಮಾತಾಡುತ್ತಿರಲಿಲ್ಲ. ಇವುಗಳಿಗೆ ಒಂದೇ ಉಪಾಯ ಧರ್ಮ ಸಹಿಷ್ಣುತೆ ಮತ್ತು ಧರ್ಮದ ಹೆಸರಿನಲ್ಲಿ ರಾಜಕೀಯ ಮಾಡದಿರುವುದು. ಇಷ್ಟು ಮಾಡಿದರೆ ಸಾಕು ದೇಶ ಹಾಯಾಗಿ ಇರುವುದರಲ್ಲಿ ಸಂಶಯವೇ ಇಲ್ಲ.

❍ **ತಳಿರುಘಟ್ಟ ಪ್ರಕಾಶ್**, ಸಂಶೋಧನ ವಿದ್ಯಾರ್ಥಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ

* * *

## ಶಾಂತಿ, ಸೌಹಾರ್ದತೆಯ ದೇಶ ನಮ್ಮದಾಗಬೇಕು

"**ಮ**ಹಿಳೆಯೊಬ್ಬಳು ಮಧ್ಯ ರಾತ್ರಿಯಲ್ಲಿ ನಿರ್ಭೀತಿಯಿಂದ ಓಡಾಡಬಹುದಾದ ದೇಶವೇ ಸ್ವಾತಂತ್ರ್ಯ ಪಡೆದುಕೊಂಡ ದೇಶ" ಎಂದು ಗಾಂಧೀಜಿಯವರು ಹೇಳುತ್ತಾರೆ. ಅಂತಹ ದೇಶವೇ ನನ್ನ ಕಲ್ಪನೆಯ ದೇಶವೂ ಹೌದು. ಜಾತಿ, ವರ್ಗ, ಲಿಂಗ ತಾರತಮ್ಯವಿಲ್ಲದ ದೇಶ ನಮ್ಮದಾಗಬೇಕು. ಆಹಾರ, ಆರೋಗ್ಯ, ಶಿಕ್ಷಣ, ಉದ್ಯೋಗ ಮತ್ತು ಇತರೆ ಮೂಲ ಸೌಕರ್ಯಗಳು ಯಾವ ತೊಂದರೆಯೂ ಇಲ್ಲದೆ ನಿರಾಳವಾಗಿ ಎಲ್ಲರಿಗೂ ದೊರೆಯಬೇಕು. ನಮ್ಮ ಇಚ್ಛೆಯ ಆಹಾರವನ್ನು ಸೇವಿಸುವ, ಉಡುಪನ್ನು ತೊಡುವ ಆಯ್ಕೆಯ ಸ್ವಾತಂತ್ರ್ಯ ನಮಗಿರಬೇಕು. ಭ್ರಷ್ಟಾಚಾರ ಮುಕ್ತವಾದ ಆಡಳಿತವಿರುವ ದೇಶ ನಮ್ಮದಾಗಬೇಕು. ಹಲವು ಭಾಷೆ, ಬಣ್ಣ, ಆಹಾರ, ಸಂಸ್ಕೃತಿಯುಳ್ಳ

ವೈವಿಧ್ಯತೆಯನ್ನು ಕಾಪಾಡಿಕೊಳ್ಳುವ ದೇಶ ನಮ್ಮದಾಗಬೇಕು. ಸಂಪನ್ಮೂಲಗಳ ಸಮಾನ ಹಂಚಿಕೆಯಾಗಬೇಕು. ಯುದ್ಧವಿಲ್ಲದ, ಪರಿಸರನಾಶವಿಲ್ಲದ, ಶಾಂತಿ, ಸೌಹಾರ್ದತೆಯ ದೇಶ ನಮಗೆ ಬೇಕು. ನಮ್ಮ ಇಚ್ಛೆಯ ಮತ, ಧರ್ಮ, ಪಂಥವನ್ನು ಅನುಸರಿಸುವ ಸ್ವಾತಂತ್ರ್ಯವಿರುವ ದೇಶ ನಮ್ಮದಾಗಬೇಕು.

ಜನರಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ರೂಪಿಸಿ, ಜಾರಿಗೊಳಿಸುವ, ಜನಪರವಾದ, ಸರ್ವರಿಗೂ ಮೂಲಸೌಕರ್ಯಗಳನ್ನು ಒದಗಿಸುವ, ಭ್ರಷ್ಟತೆಮುಕ್ತ ಸರ್ಕಾರವನ್ನು ರಚಿಸಬೇಕು. ಸಮಾನತೆ, ಸಹಬಾಳ್ವೆಯ ಮೌಲ್ಯಗಳನ್ನು ಹೊಂದಿರುವ ಸರ್ಕಾರವನ್ನು ಎಚ್ಚರದಲ್ಲಿಡುವ, ಜನರನ್ನು ಜಾಗೃತಗೊಳಿಸುವ ಜನಪರ ಚಳವಳಿಗಳು ಇರಬೇಕು. ಶಾಂತಿ, ಸಹಬಾಳ್ವೆಯ, ಸಮಾನತೆಯ ತತ್ವಗಳನ್ನು ಸಾರುವ ಕಬೀರ್, ಪೈಗಂಬರ್, ಬುದ್ಧ, ಗಾಂಧೀಜಿಯವರ ಮಾರ್ಗದರ್ಶನಗಳು ನಮಗೆ ದಾರಿದೀಪವಾಗಬೇಕು. ದೇಶವನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಗತಿಯತ್ತ ಒಯ್ಯುವ, ವ್ಯಕ್ತಿತ್ವದ ಸಮಗ್ರ ಬೆಳವಣಿಗೆಗೆ ಪೂರಕವಾಗುವ ಶಿಕ್ಷಣ ಎಲ್ಲರಿಗೂ ಸಿಗಬೇಕು. ಹಲವು ಹೂವುಗಳು ಒಂದೇ ಬಳ್ಳಿಯಲ್ಲಿರುವಂತೆ, ಹಲವು ಹಕ್ಕಿಗಳು ಒಂದೇ ಮರದಲ್ಲಿರುವಂತೆ ಹಲವು ವೈಶಿಷ್ಟ್ಯಗಳಿರುವ ಎಲ್ಲರಿಗೂ ನಮ್ಮ ದೇಶ ನೆಲೆಯಾಗಬೇಕು.

❍ **ಹಮೀದಾಬಾನು ಅಥಣಿ,** ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ

✳ ✳ ✳

## ಯುದ್ಧ, ಬಾಂಬುಗಳು ಇಲ್ಲದ ಪರಿಸರಸ್ನೇಹಿ ದೇಶವಾಗಲಿ

**ನ**ನ್ನ ಕಲ್ಪನೆಯ ದೇಶವೆಂದರೆ ಪ್ರಜಾಪ್ರಭುತ್ವವಿರುವ ದೇಶ. ಎಂದರೆ ಜನರೇ ಆರಿಸಿದ ಪ್ರಭುತ್ವವಿರುವ ದೇಶ. ಅಂತಹ ದೇಶದಲ್ಲಿ ಧರ್ಮ, ವರ್ಗ, ಜಾತಿ ಮತ, ಪಂಥ ಲಿಂಗ... ಯಾವುದೇ ಭೇದವಿಲ್ಲದ ಸಮಾನತೆ, ಸಮಾನ ಅವಕಾಶ ಎಲ್ಲರಿಗೂ ಇರಬೇಕು. ಎಲ್ಲರಿಗೂ ಸಂಪನ್ಮೂಲಗಳ ಸಮಾನ ಹಂಚಿಕೆಯಾಗಬೇಕು. ಅಭಿಪ್ರಾಯವನ್ನು ವ್ಯಕ್ತಪಡಿಸುವ ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ನಮಗಿಷ್ಟವಾದ ಆಹಾರ, ಶಿಕ್ಷಣ, ಉದ್ಯೋಗ, ಬಟ್ಟೆಯನ್ನು ತೊಡುವ ಮತ್ತು ಸಂಗಾತಿಯನ್ನು ಆಯ್ಕೆಮಾಡಿಕೊಳ್ಳುವ ಸ್ವಾತಂತ್ರ್ಯ ಇರಬೇಕು. ಯುದ್ಧ, ಬಾಂಬುಗಳು ಇಲ್ಲದ ಪರಿಸರ ಸ್ನೇಹಿಯಾದ ಅಹಿಂಸೆ, ಶಾಂತಿಯ, ಸೌಹಾರ್ದತೆಯ ನಾಡು ನಮ್ಮದಾಗಬೇಕು.

✳ ಸ್ವತಂತ್ರ ದೇಶವನ್ನು ಕಟ್ಟಲು ಎಲ್ಲರ ಸಮಾನತೆಯ ನೆಲೆಯಲ್ಲಿ ಮತ್ತು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಪ್ರಗತಿಯನ್ನು ಸಾಧಿಸುವ, ಮಾನವೀಯ ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಬೆಳೆಸುವಂತಹ ಶಿಕ್ಷಣಬೇಕು.

✳ ಸಮಾನತೆ ಸಹಬಾಳ್ವೆಗಾಗಿ ದುಡಿದ ಬುದ್ಧ, ಬಸವ ಅಂಬೇಡ್ಕರ್ ಅವರು ನಡೆದ ಹಾದಿಯನ್ನು ನಮ್ಮ ಯುವಜನಾಂಗಕ್ಕೆ, ವಿದ್ಯಾರ್ಥಿ ಸಮುದಾಯಕ್ಕೆ ಪರಿಚಯಿಸಬೇಕು.

✳ ಜನರ ಸ್ವಾಯತ್ತತೆಯನ್ನು ಕಾಪಾಡುವ, ಪ್ರಭುತ್ವವನ್ನು ಎಚ್ಚರಲ್ಲಿಡುವ ಜನಪರ ಚಳುವಳಿಗಳು ಬೇಕೇ–ಬೇಕು.

✳ ಸರ್ವರಿಗೂ ಆಹಾರ, ಆರೋಗ್ಯ, ಶಿಕ್ಷಣ, ಉದ್ಯೋಗ, ಮೂಲಭೂತ ಸೌಕರ್ಯಗಳನ್ನು ಸಮರ್ಪಕವಾಗಿ ಒದಗಿಸುವ ಭ್ರಷ್ಟವಲ್ಲದ ಆಡಳಿತವನ್ನು ನೀಡುವ ಜನಪರ ಸರ್ಕಾರ ಬೇಕು.

✳ ಜನ ಸ್ನೇಹಿಯಾದ, ಪರಿಸರ ಸ್ನೇಹಿಯಾದ ಸುಸ್ಥಿರ ಅಭಿವೃದ್ಧಿ ಯೋಜನೆಗಳು ಬೇಕು.

❍ **ಭುವನೇಶ್ವರಿ ಕಾಂಬಳೆ,** ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ

✳ ✳ ✳



## ಹೊಟ್ಟೇಕಿಚ್ಚಿನ ಸಂತೆ

**ಒ**ಡಲು ಉರಿಯುತ್ತಿದೆ,
ದೇಹದ್ದೋ ಜೀವದ್ದೋ ಅರ್ಥವಾಗುತ್ತಿಲ್ಲ
ಕಿಡಿಗಳ ಸಂತೆಯೊಳಗೆ ಹಚ್ಚುತ್ತಿದ್ದಾರೆ
ಕಿಚ್ಚು ಹಿಡಿದವರೆಲ್ಲ ಕಂಡವರ ಹೊಟ್ಟೆಗೆ,
ಉಣ್ಣುವ ಅನ್ನದಲೂ ಕುಡಿವ ನೀರಿನಲೂ
ಬೆರೆಸಲಾಗಿದೆ ಬೆಂಕಿ

ಗಾಳಿ ಪಂಖದ ಎ. ಸಿ. ರೂಮಿನ ಕನಸ ಚಿತ್ರಗಳು
ಬರೆ ಎಳೆಯುತಿವೆ ಮೈತುಂಬ
ಫ್ರಿಜ್ಜಿನ ಬಾಗಿಲು ತೆರೆದು ಉರಿವ ಬೆಂಕಿಯನೆತ್ತಿ
ಕುಡಿಯುತಿರುವಂತಿದೆ ಲೋಕ,
ಉರಿಯ ಭರಿಸಿದ ಅಸಹಾಯಕತೆಗೆ
ಆಕಾಶವೂ ದುಃಖಿಸುತ್ತಿಲ್ಲ
ಎಲೆಗಳೂ ಅಲುಗಾಡುತಿಲ್ಲ

ಹಸಿವೆಯಾದಂತಿದೆ ಹಸಿವೆಯಲ್ಲ
ದಾಹವಾದಂತಿದೆ ದಾಹವಲ್ಲ
ತುತ್ತು ಅನ್ನಕ್ಕಾಗಿ ಹನಿ ನೀರಿಗಾಗಿ ತಂಗಾಳಿಗಾಗಿ
ಇಳಿಯುತಿದ್ದೇನೆ ಒಳಗೊಳಗೆ,
ತೂತಾಗಿದೆ ಮಿದುಳು ಬಾವಿಯಾಗಿದೆ ಒಡಲು
ಕಾಡುತಿದೆ, ಇಳಿದಿಳಿದು ಮೇಲೇಳಲಾರದೆ
ಬಿದ್ದು ಸಾಯುವ ಭಯ

ವೈದ್ಯರಿಗೆ ಅರ್ಥವಾಗುವುದಿಲ್ಲ, ರೋಗವೆನ್ನುತ್ತಾರೆ
ಯಾವ ಮಾತ್ರೆ ಕಷಾಯ ಚೂರ್ಣಗಳನೂ
ನುಂಗಲಾರದು ಜೀವ
ಕುಯಿದು ನೋಡಿದರೆ ಕರುಳ
ಕಾಣಬಹುದಷ್ಟೇ ತಳವಿಲ್ಲದ ಬಾವಿ
ವೈದ್ಯರ ರೋಗಕೆ ಯಾವ ಔಷಧವೂ ಇಲ್ಲ

ನೆಲದೊಳಗೋ ಮುಗಿಲೊಳಗೋ
ನನ್ನೊಳಗೋ ನಿನ್ನೊಳಗೋ ಎಲ್ಲಾದರೇನು ?
ಒಡಲ ತಣಿಸುವ ಅನ್ನ
ಮಡಿಲ ತುಂಬುವ ನೀರು
ಬೆಂಕಿಯುಗುಳದ ಗಾಳಿ ಹುಟ್ಟಿಬರಲಿ,
ನಾನೊಮ್ಮೆ ತಣಿವೆ
ನನ್ನೊಡನೆ ತಣಿದುಕೊಳ್ಳುವುದು ಸಂತೆ !

**ಗಣೇಶ ಹೊಸ್ಮನೆ**
ಜಾನ್ಮನೆ – ೫೮೧ ೩೧೫, ಶಿರಸಿ ತಾಲೂಕು, ಉತ್ತರ ಕನ್ನಡ ಜಿಲ್ಲೆ




ದೇಶದ ಸ್ವಾತಂತ್ರ್ಯ

# ಅಸಮಾನತೆ ಮತ್ತು ಹಸಿವು ಮುಕ್ತ ದೇಶ ನಮ್ಮದಾಗಲಿ

೭೦ನೇ ಸ್ವಾತಂತ್ರ್ಯ ದಿನಾಚರಣೆ ಆಚರಿಸುತ್ತಿರುವ ಈ ಸಂದರ್ಭದಲ್ಲಿ ನಮ್ಮ ಸಂವಿಧಾನಿಕ ಹಕ್ಕುಗಳನ್ನು ಹತ್ತಿಕ್ಕಲ್ಪಡುತ್ತಿರುವುದು ವಿಷಾದನೀಯ. ನಾವು ತೊಡುವ ಬಟ್ಟೆ, ತಿನ್ನುವ ಆಹಾರ, ಮಾತನಾಡುವ ಭಾಷೆ ಇವುಗಳನ್ನು ಆಯ್ಕೆಮಾಡುವ ಸ್ವಾತಂತ್ರ್ಯ ಇಲ್ಲದ ಮೇಲೆ ನಾವು ಆಚರಿಸುತ್ತಿರುವ ಸ್ವಾತಂತ್ರ್ಯ ದಿನಾಚರಣೆಗೆ ಯಾವುದೇ ಅರ್ಥವಿರುವುದಿಲ್ಲ. ಅಸಹಿಷ್ಣುತೆ, ಅಭಿವ್ಯಕ್ತಿ ಸ್ವಾತಂತ್ರ್ಯದ ಹತ್ತಿಕ್ಕುವಿಕೆಯ ಈ ಪರಿಸ್ಥಿತಿ ಹಾಗೂ ಇಂಥದ್ದೇ ತಿನ್ನಬೇಕೆಂಬ ಕಟ್ಟುಪಾಡುಗಳಿಂದ ಸ್ವಾತಂತ್ರ್ಯ ಪಡೆಯಬೇಕಾಗಿರುವುದು ಈಗಿನ ಜರೂರತ್ತು.

ನಮ್ಮ ಪ್ರಜಾಪ್ರಭುತ್ವದಲ್ಲಿ ಬಹುತ್ವವೇ ವೈಶಿಷ್ಟ್ಯವಾಗಿದೆ ಆದರೆ ಬಹುತ್ವದಿಂದ ಏಕತ್ವದೆಡೆಗೆ ತೆಗೆದುಕೊಂಡು ಹೋಗುತ್ತಿರುವುದು ವಿಷಾದನೀಯ. ಈ ದೇಶದ ಸಾಂಸ್ಕೃತಿಕ ಅಂಶಗಳು ವಿಭಿನ್ನವಾಗಿವೆ. ಇಂತಹ ಅಂಶಗಳ ಪ್ರಜ್ಞೆಯಿಲ್ಲದೆ ಅಥವಾ ಪ್ರಜ್ಞೆಯಿದ್ದು ತಮ್ಮ ಹಿತಾಸಕ್ತಿಗೆ ಅದು ಪೂರಕವಾಗದಿದ್ದಾಗ ಆಹಾರ ಹೆಸರಿನಲ್ಲಿ, ಭಾಷೆಯ ಹೆಸರಿನಲ್ಲಿ, ದೇಶಭಕ್ತಿಯ ಹೆಸರಿನಲ್ಲಿ ಅದನ್ನು ಜನರ ಮೇಲೆ ಹೇರಿ ತಮ್ಮ ಕಾರ್ಯ ಸಾಧಿಸುವ, ನಿರಂತರ ಅಧಿಕಾರ ಬಯಸುವಂತಹ ಪ್ರಭುತ್ವ ನಮ್ಮೆದುರಲ್ಲಿದೆ. ಸಮಾಜದ ಕಟ್ಟಕಡೆಯ ಜನರ ಕೂಗು ಈ ಪ್ರಭುತ್ವಕ್ಕೆ ತಲುಪುವದಿಲ್ಲ, ಅದು ತಲುಪದ ಹಾಗೆ ಮಾಡುವ ದೇಶಭಕ್ತಿಯ ಹೆಸರಿನಲ್ಲಿ ಹುಟ್ಟಿಕೊಂಡ ಭಂಡ ಸಂಘಟನೆಗಳು ಇದಕ್ಕೆ ಪೂರಕವಾದ ಕಾರ್ಯ ನಿರ್ವಹಿಸುತ್ತವೆ.

ಸ್ವಾತಂತ್ರ್ಯದ ಪರಿಕಲ್ಪನೆಯನ್ನು ನಾವು ಮತ್ತೊಮ್ಮೆ ವಿಮರ್ಶಿಬೇಕಾದ ಅವಶ್ಯಕತೆಯಿದೆ. ಬ್ರಿಟಿಷರಿಂದ ಬಂದ ಸ್ವಾತಂತ್ರ್ಯದಲ್ಲಿ ಕೇವಲ ಅಧಿಕಾರ ವಿನಿಮಯವಾಗಿದೆ ಹೊರತು ನಿಜವಾದ ಸ್ವಾತಂತ್ರ್ಯ ಸಿಗಲಿಲ್ಲ. ದಲಿತರು ಅಲ್ಪಸಂಖ್ಯಾತರು ಮಹಿಳೆಯರು ನಿರಂತರವಾಗಿ ದಬ್ಬಾಳಿಕೆಗೆ ಒಳಗಾಗುತ್ತಲೇ ಇದ್ದಾರೆ. ಅವರ ಸಬಲತೆಯ ಪ್ರಯತ್ನಗಳು ನಿರಂತರವಾಗಿ ನಡೆದರೂ ಅವು ಯಶಸ್ವಿಯಾಗದಂತೆ ತಡೆಯುವ ಶಕ್ತಿಗಳು ತುಂಬ ಪ್ರಬಲವಾಗಿವೆ. ಇವುಗಳನ್ನು ಸುಲಭವಾಗಿ ಹತ್ತಿಕುತ್ತವೆ, ಇದಕ್ಕಾಗಿ ತಮ್ಮ ರಾಜಕೀಯ ಅಧಿಕಾರವನ್ನು ಧಾರ್ಮಿಕವಾದ ದಾಳಗಳ ಮೂಲಕ ಜನರನ್ನು ಭಾವನಾತ್ಮಕವಾಗಿ ಓಲೈಸುತ್ತವೆ. ಇದಕ್ಕಾಗಿಯೇ ಕೆಲವು ಮಾಧ್ಯಮಗಳನ್ನು ಬಳಸಿಕೊಳ್ಳುತ್ತವೆ. ಇದಕ್ಕೆ ಮೂಲ ಪರಿಹಾರ ಶಿಕ್ಷಣವಾಗಿದ್ದು, ಅದು ದಲಿತರಿಗೆ ಬಡವರಿಗೆ ಪ್ರಾಥಮಿಕ ಹಂತದಲ್ಲಿ ಮಾತ್ರ ಸಿಗುತ್ತದೆ. ಇದಕ್ಕೆ ಕಾರಣ ಉನ್ನತ ಶಿಕ್ಷಣ ಸಂಸ್ಥೆಗಳು ಬಂಡವಾಳಶಾಹಿಗಳ ಕೈಯಲ್ಲಿವೆ. ಇವರೆಲ್ಲರೂ ಮೇಲ್ವರ್ಗದವರಾಗಿದ್ದಾರೆ. ಇಂತಹ ಎಲ್ಲ ಅಂಶಗಳನ್ನು ಗಮನಿಸಿದಾಗ ಇವುಗಳಿಗೆ ಒಂದೇ ರೀತಿಯಾದ ಪರಿಹಾರವಿಲ್ಲ. ಅದಕ್ಕೆ ಶೈಕ್ಷಣಿಕವಾಗಿ ಎಲ್ಲರೂ ಸಬಲರಾಗಬೇಕು. ಈ ಮೂಲಕ ವೈಚಾರಿಕವಾದಂತಹ ಹೋರಾಟಗಳ ಅವಶ್ಯಕತೆಯಿದೆ. ಎಲ್ಲ ಪ್ರಗತಿಪರ ತಾತ್ವಿಕತೆಯ ಚಿಂತನೆಯ ವ್ಯಕ್ತಿಗಳು ಒಂದೆಡೆ ಸೇರಿ ಇದಕ್ಕೆ ಸೂಕ್ತ ವೇದಿಕೆ ಒದಗಿಸಿ ಮೂಲದಿಂದಲೇ ಇದಕ್ಕೆ ಪರಿಹಾರ ಕಂಡುಕೊಳ್ಳಬೇಕು.

ಬಾಬಾ ಸಾಹೇಬರ ಆಶಯದಂತೆ ಸಾಮಾಜಿಕ ಅಸಮಾನತೆ ಹೋಗಲಾಡಿಸಿದರೆ ಆರ್ಥಿಕ ಮತ್ತು ರಾಜಕೀಯ ಶಕ್ತಿ ತಾನಾಗಿಯೇ ದುರ್ಬಲ ವರ್ಗದವರಿಗೆ ಸಿಗುವುದರಲ್ಲಿ ಅನುಮಾನವಿಲ್ಲ. ಈ ವರ್ಗದ ಜನರಿಗೆ ಅಸಮಾನತೆಯಿಂದ ಮುಕ್ತಿ ದೊರೆಯುವುದೇ ನಿಜವಾದ ಸ್ವಾತಂತ್ರ್ಯ. ಸ್ವಾತಂತ್ರ್ಯ ದಿನಾಚರಣೆಯ ಈ ಸಂದರ್ಭದಲ್ಲಿ ಅಸಮಾನತೆ ಮತ್ತು ಹಸಿವು ಮುಕ್ತ ದೇಶವನ್ನು ನೋಡುವುದೇ ಬಹುಪಾಲು ಜನರ ಆಶಯ.

❍ **ಚೆನ್ನಬಸವ ಕೊಹಿನೂರ್,** ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಲಬುರಗಿ

✳ ✳ ✳

# ಬಹುಸಂಸ್ಕೃತಿಯ ಜನರ ಬದುಕನ್ನು ಗೌರವಿಸುವ ದೇಶ ನಮ್ಮದಾಗಲಿ

ಭಾರತದ ಜನವಾಸಿ ಪ್ರಜೆಗಳಾದ ನಾವು, ಭಾರತವನ್ನು ಒಂದು ಸಾರ್ವಭೌಮ ಸಮಾಜವಾದಿ, ಜಾತ್ಯತೀತ ಪ್ರಜಾಸತ್ತಾತ್ಮಕವಾದ ಗಣರಾಜ್ಯವೆಂದು ೫೦ರ ಸಂದರ್ಭದಲ್ಲಿ ಕರೆದುಕೊಂಡೆವು. ಜೊತೆಗೆ ಸಾಂಸ್ಕೃತಿಕವಾದ ಸ್ವಾತಂತ್ರ್ಯ ಜೀವನ ನಡೆಸುವ ಕನಸನ್ನು ಹೊತ್ತಿದ್ದೆವು. ಈ ಮಧ್ಯೆ ಭಾರತದಲ್ಲಿ ಒಕ್ಕೂಟ ವ್ಯವಸ್ಥೆಯ ಆಡಳಿತ ಸ್ಥಾಪಿತವಾಯಿತು. ಸರಕಾರಗಳು ರಾಷ್ಟ್ರ ಮತ್ತು ಜನತೆಯ ಕಲ್ಯಾಣಕ್ಕಾಗಿ ಶ್ರಮಿಸುವ ಸಂಸ್ಥೆಯಾಗಿ ಕಾರ್ಯಾರಂಭಿಸಿದವು ಎಂದು ಭಾವಿಸಿದೆವು. ಆ ಸಂದರ್ಭದ ಸರಕಾರಗಳು ಜನತೆಯ ಆರೋಗ್ಯ, ಶಿಕ್ಷಣ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಮಾನತೆ ಮತ್ತು ಸುಧಾರಣೆಗಾಗಿ ಹೊತ್ತುಕೊಟ್ಟಿತು.

ಆದರೆ ಇಂದಿನ ಸರಕಾರಗಳು ರಾಷ್ಟ್ರ ಮತ್ತು ಜನತೆಗಾಗಿ ದುಡಿಯುವ ಸಂಸ್ಥೆಯಾಗಿರದೆ ತಾವೇ ರಾಷ್ಟ್ರವೆಂದು ಭಾವಿಸಿಕೊಂಡಿವೆ. ಜನತೆ ಯಾವ ಭಾಷೆ, ಉಡುಪು, ಆಹಾರ ಮುಂತಾದವುಗಳನ್ನು ಬಳಸಬೇಕು ಎನ್ನುವುದನ್ನು ಸರಕಾರವೇ ನಿರ್ಧರಿಸುತ್ತದೆ. ಆರೋಗ್ಯ, ಶಿಕ್ಷಣ, ಸಾರಿಗೆ, ಬ್ಯಾಂಕ್, ವಿಮೆ ಮುಂತಾದ ಸಾರ್ವಜನಿಕ ಸೇವಾ ಸಂಸ್ಥೆಗಳನ್ನು ಖಾಸಗೀಕರಣ ಮಾಡುವ ಸರಕಾರವು ಲಾಭಕ್ಕಾಗಿ ಬಂಡವಾಳಶಾಹಿ ಪ್ರತಿನಿಧಿಯಾಗಿದೆ. ದೇಶದಲ್ಲಿನ ಸಂಪನ್ಮೂಲಗಳು ಹಂಚಿಕೆಯಲ್ಲಿ ಜಾತಿ, ಲಿಂಗ, ವರ್ಗ ಅಸಮಾನತೆ ದುಪ್ಪಟ್ಟು ಆಗುತ್ತಿದೆ.

ಸರ್ಕಾರವು ಜಿಎಸ್‌ಟಿ ತರುವ ಮೂಲಕ ರಾಜ್ಯದ ಸ್ವತಂತ್ರವನ್ನು ಕಿತ್ತುಕೊಂಡಿದ್ದು, ಒಕ್ಕೂಟ ವ್ಯವಸ್ಥೆಯನ್ನು ಶಿಥಿಲಗೊಳಿಸುತ್ತಿದೆ. ಸಾರ್ವಜನಿಕರ ವ್ಯವಹಾರಗಳ ಮೇಲೆ ವಿವಿಧ ರೀತಿಯ ತೆರಿಗೆಯನ್ನು ವಿಧಿಸುತ್ತಿವೆ. ಅಂದರೆ ವಾಹನವನ್ನು ಖರೀದಿಸಿದಾಗ ತೆರಿಗೆ, ನೋಂದಣಿ ತೆರಿಗೆ, ರಸ್ತೆ ತೆರಿಗೆ, ವಿಮಾ ತೆರಿಗೆ, ಅದಕ್ಕೆ ಬಳಸುವ ಇಂಧನ ತೆರಿಗೆ ಮಾತ್ರವಲ್ಲದೇ ದಿನ ನಿತ್ಯ ನಡೆದಾಡುವ ರಸ್ತೆಯಲ್ಲಿ ಟೋಲ್‌ನಲ್ಲಿಯು ಹಣ ಸಂದಾಯ ಮಾಡುವುದನ್ನು ಗಮನಿಸಬಹುದು.

ಸರಕಾರದ ಪರವಾಗಿ ಇರುವವರು ದೇಶಭಕ್ತರು, ಸರಕಾರದ ನೀತಿಯನ್ನು ಪ್ರಶ್ನಿಸುವವರು ದೇಶದ್ರೋಹಿಗಳು ಎಂದು ಪರಿಗಣಿಸಲಾಗುತ್ತದೆ. ಜಾತ್ಯತೀತವಾದವನ್ನು ಮರೆತ ಸರಕಾರವು ಹಿಂದೂ ರಾಷ್ಟ್ರಕ್ಕಾಗಿ ಶ್ರಮಿಸುತ್ತಿವೆ. ಭಾರತೀಯ ಸಂಸ್ಕೃತಿ ಹೆಸರಲ್ಲಿ ಮಹಿಳೆಯರ, ದಲಿತರ ಮೇಲೆ ದೌರ್ಜನ್ಯ ನಡೆಸುತ್ತಿವೆ. ಬರಹ, ಹೋರಾಟದ ಮೂಲಕ ಪ್ರತಿಭಟಿಸುವವರನ್ನು ಕೊಲೆ ಮಾಡಲಾಗುತ್ತದೆ. ದಂಡ ವಿಧಿಸು ಇಲ್ಲವೆ ಶಿಕ್ಷೆ ವಿಧಿಸು ಮೂಲಕ ಜೈಲಿಗೆ ಕಳಿಸಲಾಗುತ್ತದೆ. ರಕ್ಷಣೆ ನೀಡುವ ಸಂಸ್ಥೆಗಳ ಅಧಿಕಾರಗಳು ನಿಷ್ಕ್ರಿಯಗೊಂಡಿವೆ. ಈ ಎಲ್ಲಾ ಸಂಗತಿಗಳು ಏನನ್ನು ತೋರಿಸುತ್ತವೆ ಅಂದರೆ ಉಳ್ಳವರ ಮತ್ತು ಬಹುಸಂಖ್ಯಾತರ ಸ್ವಾತಂತ್ರ್ಯವನ್ನು ಬಡವರು, ದಲಿತರು, ಮಹಿಳೆಯರು, ತೃತೀಯ ಲಿಂಗಿಗಳ ಮತ್ತು ಧಾರ್ಮಿಕ ಅಲ್ಪಸಂಖ್ಯಾತರ ಸ್ವಾತಂತ್ರ್ಯವೆಂದು ಬಿಂಬಿಸುವ ಪ್ರಯತ್ನ ನಡೆದಿದೆ. ನಮ್ಮ ಬದುಕಿನಲ್ಲಿ ಸ್ವಾತಂತ್ರ್ಯವೆಂಬುದು ಭ್ರಮ ನಿರಸನ ವಾಸ್ತವವಾಗಿದೆ.

೨೦೧೭ರ ಸಂದರ್ಭದಲ್ಲಿ ಸ್ವಾತಂತ್ರ್ಯ ಎಂದರೆ ಸಮುದಾಯದ ಬಹುಸಂಸ್ಕೃತಿ ಜನರ ಬದುಕನ್ನು ಗೌರವಿಸುವ, ವ್ಯಕ್ತಿ ಆಚಾರ, ವಿಚಾರದ ಭಿನ್ನತೆಗಳನ್ನು ಪ್ರೀತಿಸುವ ಮೂಲಕ ಪರಿಸರ ನಿರ್ಮಾಣಕ್ಕೆ ಹೋರಾಟ ಬಿಟ್ಟು ಮತ್ತೊಂದು ಹಾದಿ ನಮಗೆ ಕಾಣದು.

❍ **ಗಾದೆಪ್ಪ,** ಪೋಸ್ಟ್ ಡಾಕ್ಟರಲ್ ಫೆಲೋ, ಕನ್ನಡ ವಿಶ್ವವಿದ್ಯಾಲಯ, ಹಂಪಿ

❒

# ತಾನ್‌ಸೇನ್

ಡಾ|| ಎಚ್. ಎಂ. ಕುಮಾರಸ್ವಾಮಿ 

ಸಂಜೆಯಾಯಿತು. ಕೋಗಿಲೆ ಉಲಿಯಿತು. ಒಂದು ಸುಮಧುರ ಕಂಠದಿಂದ ಹೊರಟ ಮನಮೋಹಕ ರಾಗ ಅದನ್ನೂ ಸುಮ್ಮನಾಗಿಸಿತು. ಆ ಮನೋಹರ ಸ್ವರಲಹರಿ ಸರೋವರದ ಈ ತೀರದಿಂದ ಆಚೆಯ ಬದಿಯ ತೀರದ ತನಕ ಹರಿದಾಡಿ ಸಮಸ್ತ ವೃಕ್ಷಗಳ ನಡುವೆ ಪ್ರತಿಧ್ವನಿಸತೊಡಗಿತು. ಮಧುರವಾದ ಮಲಯಾನಿಲದ ಹೊಡೆತಕ್ಕೆ ಕಂಪಿಸಿದ ಜಲರಾಶಿ ಆ ಸ್ವರದ ತಾಳಕ್ಕೆ ನರ್ತಿಸತೊಡಗಿತು. ಪ್ರತಿಯೊಂದು ಎಲೆಯೂ ಸ್ವರನಾದಕ್ಕೆ ತಾಳ ಹಾಕಿತು. ಅಲ್ಲೊಂದು ಆನಂದದ ಅದ್ಭುತ ಸಮಾಗಮವಾಯಿತು. ಶಾಂತಿಯ ಸ್ವಾಭಾವಿಕ ರಾಜ್ಯ ಆ ಚಿಕ್ಕ ರಮಣೀಯ ಭೂಮಿಯ ಮೇಲೆ ಸ್ಥಾಪನೆಯಾಗಿಬಿಟ್ಟಿದೆಯೇನೋ ಅನ್ನಿಸುತ್ತಿತ್ತು.

**ಈ** ಚಿಕ್ಕದಾದ ಸರೋವರ ಅದೆಷ್ಟು ಸುಂದರವಾಗಿದೆ...! ನಳನಳಿಸುವ ಮಾವಿನಮರ ಹಾಗೂ ನೇರಳೆ ಮರಗಳು ನಾಲ್ಕು ಕಡೆಗಳಿಂದ ಇದನ್ನು ಆವರಿಸಿಬಿಟ್ಟಿವೆ. ದೂರದಿಂದ ನೋಡಿದರೆ ದೊಡ್ಡದಾದ ಮರಗಳ ತೋಪು ಕಾಣಿಸುತ್ತದೆ, ಅಷ್ಟೆ. ಆದರೆ ಈ ಸರೋವರದ ಸೌಂದರ್ಯ ಎತ್ತರದ ಮರಗಳಿಂದಾಗಿ ಮುಚ್ಚಿಹೋಗಿಬಿಟ್ಟಿದೆ. ಕಠೋರಹೃದಯೀ ಧರಣಿಯ ವಕ್ಷಸ್ಥಳದಲ್ಲಿ ನೀರಿನ ಈ ಚಿಕ್ಕ ಕುಡಿಕೆಯನ್ನು ಪ್ರಕೃತಿ ಬಹು ಎಚ್ಚರಿಕೆಯಿಂದ ಜತನಮಾಡಿಟ್ಟುಕೊಂಡಿದೆ.

ಸಂಜೆಯಾಗುತ್ತಿದೆ, ಪಕ್ಷಿ ಸಂಕುಲ ಕಲಕಲ ನಿನಾದದೊಂದಿಗೆ ತಮ್ಮ ತಮ್ಮ ಗೂಡುಗಳಿಗೆ ಹಿಂದಿರುಗುತ್ತಿದೆ. ಅಂಧಕಾರ ತನ್ನ ಆಗಮನದ ಸೂಚನೆಯನ್ನು ನೀಡುತ್ತಾ ನಿಧಾನವಾಗಿ ಮರಗಳ ಎತ್ತರದ ಟೊಂಗೆಗಳ ಮೃದು ಚಿಗುರಿನ ಮೇಲೆ ತನ್ನ ಮಂದಬೆಳಕನ್ನು ಪಸರಿಸುತ್ತಿದೆ. ಆದರೆ ಸೂರ್ಯನ ಕೊನೆಯ ಕಿರಣಗಳು ಇನ್ನೂ ತಮ್ಮ ಸ್ಥಾನವನ್ನು ತೊರೆಯಲೊಪ್ಪುತ್ತಿಲ್ಲ. ಗಾಳಿಯ ಅಲೆಗಳಿಂದ ಅವು ಅಸ್ಥಿರಗೊಳ್ಳುತ್ತಿದ್ದರೂ ತಮ್ಮ ವಿರೋಧವನ್ನು ವ್ಯಕ್ತಪಡಿಸುತ್ತ ಸೂರ್ಯದೇವನ ಬೆರಳುಗಳ ಹಾಗೆ ನಾಟ್ಯವಾಡುತ್ತಿದ್ದವು.

ಸಂಜೆಯಾಯಿತು. ಕೋಗಿಲೆ ಉಲಿಯಿತು. ಒಂದು ಸುಮಧುರ ಕಂಠದಿಂದ ಹೊರಟ ಮನಮೋಹಕ ರಾಗ ಅದನ್ನೂ ಸುಮ್ಮನಾಗಿಸಿತು. ಆ ಮನೋಹರ ಸ್ವರಲಹರಿ ಸರೋವರದ ಈ ತೀರದಿಂದ ಆಚೆಯ ಬದಿಯ ತೀರದ ತನಕ ಹರಿದಾಡಿ ಸಮಸ್ತ ವೃಕ್ಷಗಳ ನಡುವೆ ಪ್ರತಿಧ್ವನಿಸತೊಡಗಿತು. ಮಧುರವಾದ ಮಲಯಾನಿಲದ ಹೊಡೆತಕ್ಕೆ ಕಂಪಿಸಿದ ಜಲರಾಶಿ ಆ ಸ್ವರದ ತಾಳಕ್ಕೆ ನರ್ತಿಸತೊಡಗಿತು. ಪ್ರತಿಯೊಂದು ಎಲೆಯೂ ಸ್ವರನಾದಕ್ಕೆ ತಾಳ ಹಾಕಿತು. ಅಲ್ಲೊಂದು ಆನಂದದ ಅದ್ಭುತ ಸಮಾಗಮವಾಯಿತು. ಶಾಂತಿಯ ಸ್ವಾಭಾವಿಕ ರಾಜ್ಯ ಆ ಚಿಕ್ಕ ರಮಣೀಯ ಭೂಮಿಯ ಮೇಲೆ ಸ್ಥಾಪನೆಯಾಗಿಬಿಟ್ಟಿದೆಯೇನೋ ಅನ್ನಿಸುತ್ತಿತ್ತು.

ಈ ಆನಂದಮಯ ಕಾನನ ತನ್ನ ಮನಮೋಹಕ ರೂಪವನ್ನು ಒಬ್ಬ ದಾರಿಹೋಕನಿಂದ ಬಚ್ಚಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಏಕೆಂದರೆ ಆತ

ನಾಮದೇವ ಕಾಗದಗಾರ

# ಛದ್ಮವೇಷಿಗಳು

**ಕೋ**ಮುವಾದಿಗಳ ನಡುವಲ್ಲೀಗ
ವಿಪ್ಲವದ ಕೇಕೆ
ದಶದಿಕ್ಕುಗಳು ವಶಗೊಂಡ ಸಂಭ್ರಮ
ಮೆಚ್ಚಬಾರದೇಕೆ !?

ಟಿವಿ ಕಕ್ಕುವ ದೃಶ್ಯಗಳಲ್ಲಿ ಇವರದೇ ಸಂತೆ
ಇವರ ಸುತ್ತ ಸುಳಿಯದು ಸಾಮರಸ್ಯದ ಚಿಂತೆ
ಆಳಿಕೊಳ್ಳುತ್ತಿದ್ದಾರೆ ತಮತಮಗೆ ಬೇಕಾದಂತೆ
ಏಕೆ ಬೇಕಿವರಿಗೆ ಸಾರ್ವಜನಿಕರ ಅಹವಾಲು ಕಂತೆ

ಅಸಲಿ ದೇಶಭಕ್ತರ ಮುಖವಾಡದಲ್ಲಿ
ನಕಲಿ ದುರಾತ್ಮರ ಪ್ರದರ್ಶನದ ದಂಡು
ಒಪ್ಪಿಸುತ್ತಿದ್ದಾರೆ ಎಲ್ಲರಿಗೂ ಕುಡಿಸಿ ದೇವಹೆಂಡ
ಬಲ್ಲವರೇ ಬಲ್ಲರು ಇವರ ಛದ್ಮವೇಷದ ಕೆಂಡ

ಪರಾಕು ಪಂಪುಗಳೆಲ್ಲ ಇವರ ಬೆಂಬಲಕುಂಟು
ಸುಳ್ಳು ಬಿತ್ತುವ ಯಂತ್ರ ಬಾಯಿಗುಂಟು
ತೋಳಕುರಿಮರಿ ನ್ಯಾಯ ಇವರ ಕೈಯಲ್ಲುಂಟು
ಬರ್ಬಾದ್ ಆಗಲಿಕೆ ದೇಶ ಸ್ವಲ್ಪ ಸಮಯವೆ ಉಂಟು

ಠಳಾಯಿಸುತ್ತಿದೆ ಗೋವು ಸಾಕದವರ ಗೋಪ್ರೇಮ
ಪಿತ್ತ ನೆತ್ತಿಗೇರಿದವರ ಹೈ ಡ್ರಾಮಾ
ಮೊಳ ನೂಲು ತೆಗೆಯದವರ ಕೈಯಲ್ಲಿ
ಬಂತಿದೋ ಗಾಂಧಿ ಚರಕ
ಜನರ ಬದುಕು ಕಂಡಿದೆ ನಿತ್ಯನರಕ.

ಬ್ಯಾಂಕು, ಆಯೋಗಗಳು ಆಗಿ ಕೈ ದಾಳ
ಅಧಿಕಾರ ಬೇಟೆಗೆ ಹಾಕಿದರು ಗಾಳ
ಮನ್‌ಕಿ ಬಾತ್ ಎಂಬ ಭಗವದ್ಗೀತೆಯ ಸಾರ
ಕುಡಿದು ಬದುಕಲಿ ಹೊಟ್ಟೆಗಿಟ್ಟಿಲ್ಲದವರು

ವೇಮುಲರ ಕನಸುಗಳು ಸಾವಿನಲಿ ಕರಗಿ
ಜಾತ್ಯತೀತ ಮೌಲ್ಯಗಳು ಸೇರುತಿವೆ ಗೋರಿ
ಇವರದೇ ಸರಕಾರ, ಇವರೇ ಸರಕಾರ
ಆಗದೆಂದಿಗು ಜನರ ಭಾರತದ ಸರಕಾರ

**ಮೇಟಿ ಕೊಟ್ರಪ್ಪ**
ಬಸರಕೋಡು – ೫೮೩ ೨೨೪
ಹಗರಿಬೊಮ್ಮನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ

ಬಾಯಾರಿದ್ದ. ಅವನಿಗೆ ನೀರು ಬೇಕಾಗಿತ್ತು. ಶೀಘ್ರವಾಗಿ ನಡೆಯುತ್ತಿದ್ದ ತನ್ನ ಕುದುರೆಯನ್ನು ನಿಲ್ಲಿಸಿ ಆ ದಾರಿಹೋಕ ಅವಸರವಸರವಾಗಿ ಕುದುರೆಯಿಂದ ಇಳಿದ. ಕುದುರೆಯೂ ಅಲ್ಲೇ ಸ್ತಬ್ಧವಾಗಿ ನಿಂತುಬಿಟ್ಟಿತು. ಏಕೆಂದರೆ ಅದೂ ಸಹ ಈ ಸೌಂದರ್ಯಕ್ಕೆ ಮಾರುಹೋಗಿ ಮಂತ್ರಮುಗ್ಧವಾಗಿಬಿಟ್ಟಿತ್ತು. ಬೇಟೆಗಾರ ಆ ಪಥಿಕ ದಣಿದಿದ್ದನು. ಅಲ್ಲೇ ಮರಕ್ಕೆ ಒರಗಿನಿಂತ. ಕೊಂಚ ಹೊತ್ತು ತನ್ನನ್ನೇ ತಾನು ಮರೆತುಬಿಟ್ಟ. ಆ ಸ್ವರಲಹರಿ ನಿಂತಾಗ ಅವನ ನಿದ್ರೆ ಹರಿದು ವಾಸ್ತವಕ್ಕೆ ಮರಳಿದ. ಆ ಯುವಕ ತನ್ನೆಲ್ಲ ಶ್ರಮವನ್ನು ಮರೆತುಬಿಟ್ಟಿದ್ದ. ಅವನ ಅಂಗಾಂಗಗಳಲ್ಲಿ ಈಗ ಒಂದು ಅದ್ಭುತ ಸ್ಫೂರ್ತಿ ಇಣುಕಿದಂತಾಯಿತು. ಆ ಸ್ವರ ತೇಲಿಬರುತ್ತಿದ್ದ ಕಡೆಗೇ ನಡೆದ. ಹೋಗಿ ನೋಡುತ್ತಾನೆ. ಒಬ್ಬ ಯುವಕ ನಿಂತು ಅಂಧಕಾರದಿಂದ ಆವೃತವಾದ ಆ ಜಲರಾಶಿಯನ್ನೇ ನೋಡುತ್ತಿದ್ದಾನೆ.

ದಾರಿಹೋಕ ಉತ್ಸಾಹದಿಂದ ಆ ಯುವಕನ ಹತ್ತಿರ ಹೋಗಿ ಭುಜ ಹಿಡಿದು ಅಲುಗಾಡಿಸಿದ. ಯುವಕನ ಏಕಾಗ್ರತೆ ಭಗ್ನಗೊಂಡಿತು. ಆತ ತಿರುಗಿ ನೋಡಿದ.

* * *

ದಾರಿಹೋಕನ ವೀರಸೈನಿಕ ವೇಷವೂ ಸುಂದರವಾಗಿತ್ತು. ಆತನ ನೆಟ್ಟಗೆ ನಿಂತಿದ್ದ ಮೀಸೆ ಆತನ ಶೌರ್ಯ–ದರ್ಪವನ್ನು ಪ್ರತಿಬಿಂಬಿಸುತ್ತಿತ್ತು. ಈತನ ಅಸಭ್ಯ ವರ್ತನೆಯಿಂದ ಆ ಯುವಕನಿಗೆ ಕ್ರೋಧ ಉಂಟಾದರೂ ಏನೋ ಯೋಚಿಸಿ ಸುಮ್ಮನಾದ. ಇತ್ತ ಆ ದಾರಿಹೋಕ ಮೃದು ಸ್ವರದಿಂದ ಒಂದು ಸರಳ ಪ್ರಶ್ನೆಯನ್ನು ಕೇಳಿದ : "ಏನಪ್ಪಾ ; ನಿನ್ನ ಹೆಸರೇನು ?"

"ರಾಮಪ್ರಸಾದ್"... ಯುವಕ ಉತ್ತರಿಸಿದ.

"ಇಲ್ಲಿ ಎಲ್ಲಿ ಇರುತ್ತೀಯಾ ? ಒಂದು ವೇಳೆ ಹೊರಗಿನಿಂದ ಬಂದವನಾಗಿದ್ದರೆ ಇಂದು ನಮ್ಮ ಮನೆಯಲ್ಲಿ ಇರಬಹುದು." ಯುವಕ ಏನನ್ನೂ ಹೇಳಲಿಲ್ಲ ; ಬದಲಾಗಿ, ಸಾಂಕೇತಿಕವಾಗಿ ತನ್ನ ಇಂಗಿತವನ್ನು ಸೂಚಿಸಿದ. ಇಬ್ಬರೂ ರಸ್ತೆಯ ಕಡೆಗೆ ನಡೆಯುತ್ತಲೇ ಹೊರಟರು.

ಇಬ್ಬರೂ ಒಂದು ಕೋಟೆಯ ಮಹಾದ್ವಾರದ ಬಳಿ ತಲುಪಿ ಅದರೊಳಗೆ ಪ್ರವೇಶಿಸಿದರು. ಕೋಟೆಯ ದ್ವಾರಪಾಲಕ ಎದ್ದು ನಿಂತು ಗೌರವಪೂರ್ವಕವಾಗಿ ವಂದಿಸಿ ಅವರಿಬ್ಬರನ್ನೂ ಸ್ವಾಗತಿಸಿದನು. ಒಬ್ಬ ಸೇವಕ ಮುಂದೆ ಬಂದು ಕುದುರೆಯ ಲಗಾಮನ್ನು ಹಿಡಿದುಕೊಂಡನು. ಈಗ ಇಬ್ಬರೂ ಹುಲ್ಲುಹಾಸು ಹಾಗೂ ಮಾವಿನ ತೋಪುಗಳನ್ನು ದಾಟಿ ಬಂದು ಚಿಕ್ಕದಾದ ಉದ್ಯಾನಕ್ಕೆ ಬಂದರು.

ರಾಮಪ್ರಸಾದ್ ಆಶ್ಚರ್ಯಗೊಂಡಿದ್ದನು. ತಾನು ಈಗ ಯಾರೊಂದಿಗೆ ಮತ್ತು ಎಲ್ಲಿಗೆ ಹೋಗುತ್ತಿದ್ದೇನೆಂದು ಆತನಿಗೆ ಅರ್ಥವಾಗಲಿಲ್ಲ. ಹಾಂ... ತಾನು ಯಾರೊಂದಿಗೆ ನಡೆಯುತ್ತಿದ್ದೇನೆಯೋ ಆತ ಈ ದುರ್ಗದ ಒಬ್ಬ ಪ್ರಮುಖ ಮನುಷ್ಯನಾಗಿರಬಹುದು ಎಂದು ಅವನಿಗೆ ಭಾಸವಾಗಿತ್ತು.

ರಾಮಪ್ರಸಾದ್‌ಗೆ ಏನೂ ಬೇಕಿರಲಿಲ್ಲ. ಆತ ಕಾನನ ಜೀವಿಯಾಗಿದ್ದ. ಹಾಗಾಗಿ ಆತನಿಗೆ ಆ ಚಿಕ್ಕ ಉದ್ಯಾನ ಖುಷಿ ನೀಡುತ್ತಿರಲಿಲ್ಲ. ಆದರೆ ಮಾಡುವುದೇನು ? ಆತನೂ ಒಂದು ರೀತಿಯ ಕುತೂಹಲ ಹೊಂದಿದ್ದ. ಯಾರಾದರೂ ಅವನ ಸ್ವರಕ್ಕೆ ಮನಸೋತು ತಮ್ಮ ಕೆಲಸ ಕಾರ್ಯವನ್ನು ಮರೆತುಬಿಟ್ಟರೆ ಆಗ ಅವನಿಗೆ ಆನಂದವಾಗುತ್ತಿತ್ತು.

ಸರದಾರ ತನ್ನ ಕಾರ್ಯದಲ್ಲಿ ಮಗ್ನನಾಗಿರುತ್ತಿದ್ದ. ಸಂಜೆ ಹೊತ್ತು ಆ ಜಗಲಿಯಲ್ಲಿ ಕುಳಿತು ರಾಮಪ್ರಸಾದ್‌ನ ಒಂದೆರಡು ಹಾಡುಗಳನ್ನು ಕೇಳುವ ಗೀಳು ಹಿಡಿದುಬಿಟ್ಟಿತ್ತು. ಹಾಡನ್ನು ಆಲಿಸದೇ ಇದ್ದ ದಿನ ಆತನಿಗೆ ಶರಾಬಿನ ನಶೆಯೇ ಏರುತ್ತಿರಲಿಲ್ಲ. ಒಂದು ರೀತಿಯ ವಿಚಿತ್ರ ಸ್ಥಿತಿಗೆ ಆತ ತಲುಪಿಬಿಟ್ಟಿದ್ದ. ಒಂದು ದಿನ ರಾಮಪ್ರಸಾದ್ ಈ ಹಿಂದೆಯೇ ಪರಿಚಯವಿದ್ದ ಆ ಸರೋವರದ ಹತ್ತಿರ ಹೋಗಲು ಅನುಮತಿ ಕೇಳಿದ. ಅನುಮತಿಯೂ ದೊರೆಯಿತು.

ಆ ಸಂಜೆ ಸರದಾರ ಜಗಲಿಯ ಮೇಲೆ ಕುಳಿತುಕೊಳ್ಳಲಿಲ್ಲ. ಸೀದಾ ಅರಮನೆಯ ಕಡೆಗೆ ನಡೆದ. ಅವನ ಪತ್ನಿ ಕೇಳಿದಳು, "ನೀವಿಂದು ಬೇಸರಗೊಂಡಿರುವಿರೇಕೆ ?"

"ರಾಮಪ್ರಸಾದ್‌ನ ಸಂಗೀತ ಕೇಳಿದರೆ ನನಗೆ ನೆಮ್ಮದಿ ದೊರೆಯುತ್ತದೆ" ಸರದಾರ ಹೇಳಿದ.

"ಏನು ? ನಿಮ್ಮ ಆ ರಾಮಪ್ರಸಾದ್ ಅಷ್ಟೊಂದು ಚೆನ್ನಾಗಿ ಹಾಡುವನೇ ? ಅವನ ಹಾಡು ಕೇಳದಿದ್ದರೆ ನಿಮಗೆ ನೆಮ್ಮದಿಯೇ ಸಿಗುವುದಿಲ್ಲವೇ ? ನನ್ನ ದೃಷ್ಟಿಯಲ್ಲಿ ಈ ನನ್ನ ದಾಸಿಯೇ ಅವನಿಗಿಂತ ಚೆನ್ನಾಗಿ ಹಾಡಬಲ್ಲಳು."

ಸರದಾರ ನಗುತ್ತಾ ಹೇಳಿದ... "ಓಹೋ ಹಾಗೋ... ಆಕೆಯ ಹೆಸರೇನು ?"

ಸರದಾರಿಣಿ : "ಅವಳೇ ಸೌಸನ್...! ನಾನು ದಿಲ್ಲಿಯಿಂದ ಖರೀದಿಸಿ ತಂದಾಕೆ."

ಸರದಾರ : "ಆಹಾ...! ಅಷ್ಟು ಚೆಂದ...! ಅವಳನ್ನು ನಾನು ದಿನಾಲೂ ನೋಡುತ್ತೇನೆ. ಅವಳಿಗೆ ಹಾಡುವುದು ಗೊತ್ತಿದ್ದರೆ ನಾನು ಇಲ್ಲೀತನಕ ಕೇಳದೇ ಇರುತ್ತಿದ್ದೆನೆ ?"

ಸರದಾರಿಣಿ : "ಬಿಡಿ, ಈ ಬಗ್ಗೆ ಚರ್ಚೆ ಮಾಡುವ ಅವಶ್ಯಕತೆಯಿಲ್ಲ. ನಾಳೆ ಅವಳು ಮತ್ತು ರಾಮಪ್ರಸಾದ್‌ನನ್ನು ಒಟ್ಟಿಗೆ ಸೇರಿಸೋಣ."

ಸರದಾರ : "ಸರಿ ಹಾಗಾದರೆ."

ಆ ಉದ್ಯಾನದ ಮಧ್ಯದಲ್ಲಿ ಅಮೃತಶಿಲೆಯಿಂದ ಮಾಡಿದ ಒಂದು ಜಗಲಿ ಇತ್ತು. ಚಿಕ್ಕ ಮೆಟ್ಟಿಲುಗಳನ್ನು ಏರಿ ಅವರಿಬ್ಬರು ಅಲ್ಲಿಗೆ ತಲುಪಿದರು. ಸ್ವಲ್ಪವೇ ಹೊತ್ತಿನಲ್ಲಿ ಒಬ್ಬಳು ದಾಸಿ ತಾಂಬೂಲದ ಹರಿವಾಣ ಮತ್ತು ಇನ್ನೊಬ್ಬಳು ಮದಿರೆಯ ಬಾಟಲಿನೊಂದಿಗೆ ಹಾಜರಾದರು.

ದಾರಿಹೋಕ ... ಈಗ ಆತನನ್ನು 'ದಾರಿಹೋಕ' ಅನ್ನುವ ಹಾಗಿರಲಿಲ್ಲ. ಆತ ಮೊಗಲ್ ಸಾಮ್ರಾಟ್ ಅಕ್ಬರನ ಸರದಾರರಲ್ಲಿ ಒಬ್ಬನಾದ ಗ್ವಾಲಿಯರ್ ದುರ್ಗದ ಮುಖ್ಯ ಸೈನ್ಯಾಧಿಕಾರಿಯಾಗಿದ್ದ. ಆತ ಅಲ್ಲಿ ಹಾಸಿದ್ದ ಫಾರಸೀ ರತ್ನಗಂಬಳಿಯ ಮೇಲೆ ಒರಗು ದಿಂಬನ್ನು ಆಶ್ರಯಿಸಿ ಆಸೀನನಾದ. ಇಬ್ಬರೂ ದಾಸಿಯರು ಹುಕ್ಕಾ ಸಿದ್ಧಪಡಿಸಿ ತಂದಿಟ್ಟು ಒರಗು ದಿಂಬಿನ ಹಿಂದೆ ನಿಂತು ಚಾಮರ ಬೀಸತೊಡಗಿದರು. ಅವರಿಬ್ಬರಲ್ಲಿ ಒಬ್ಬಳು ರಾಮಪ್ರಸಾದ್‌ನನ್ನು ಕದ್ದುಮುಚ್ಚಿ ನೋಡತೊಡಗಿದಳು.

ಯುವಕ ಸರದಾರ ಸ್ವಲ್ಪವೇ ಸುರೆ ಸೇವಿಸಿದನು. ಒಂದೆರಡು ಸುಗಂಧಿತ ವೀಳ್ಯ ತಿಂದು ನಂತರ ಹುಕ್ಕಾ ಎಳೆಯಲಾರಂಭಿಸಿದ. ರಾಮಪ್ರಸಾದ್ ಮಾಡುವುದಾದರೂ ಏನನ್ನು ? ಸುಮ್ಮನೆ ಸರದಾರನನ್ನು ನೋಡುತ್ತಾ ಕುಳಿತ. ಸರದಾರನ ಇರಾನಿ ಚಹರೆಯ ಮುಖದಲ್ಲಿ ಸೆರೆಯ ಅಮಲು ಕೆಂಪುರಂಗು ಮೂಡಿಸಿತ್ತು. ಆತನ ಮುಖ ಮಿನುಗುತ್ತಿತ್ತು. ಉತ್ಸಾಹದ ಸ್ವರದಲ್ಲಿ ಆತ ಹೇಳಿದ, "ರಾಮಪ್ರಸಾದ್; ಒಂದು ಹಾಡು ಹೇಳು." ಆದರೆ ಇವನು ಆ ದಾಸಿಯ ಕಡೆಗೇ ನೋಡುತ್ತಿದ್ದ.

* * *

ಆ ಸರದಾರನೊಂದಿಗೆ ರಾಮಪ್ರಸಾದ್ ಬಹಳ ಅನ್ಯೋನ್ಯನಾದ. ಈಗ ಅವನಿಗೆ ಯಾವ ಅಡೆತಡೆಗಳೂ ಇರಲಿಲ್ಲ. ಅದೇ ಉದ್ಯಾನದಲ್ಲಿ ಅವನಿಗೆ ವಾಸದ ವ್ಯವಸ್ಥೆಯಾಗಿತ್ತು. ತನ್ನೆಲ್ಲ ಭಾವನೆಗಳನ್ನು ಹುದುಗಿಸಿಟ್ಟುಕೊಂಡು ಆತ ಆಗಾಗ ಆ ಜಗಲಿಯ ಮೇಲೆ ಕುಳಿತು ಹಾಡುತ್ತಿದ್ದ. ಹಾಡಲು ಅವನಿಗೆ ಯಾವ ನಿರ್ಬಂಧವೂ ಇರಲಿಲ್ಲ. ಸರದಾರನೂ ಸಹ ಆಗಾಗ ನಿಂತುಕೊಂಡೇ ಖುಷಿಯಿಂದಲೇ ಹಾಡನ್ನು ಕೇಳುತ್ತಿದ್ದನು. ಆದರೆ ಆತನ ಹಾಡುಗಳ ಗುನುಗಾಟ ಒಂದು ದೊಡ್ಡ ಪವಾಡವನ್ನೇ ಮಾಡಿಬಿಟ್ಟಿತು. ಅದೇನೆಂದರೆ ಸರದಾರನ ಮಹಲಿನ ದಾಸಿ ನವೀನಾ ಆತನ ಹಾಡಿನ ಗುನುಗುವಿಕೆಯನ್ನು ಕೇಳುತ್ತಾ ಕೇಳುತ್ತಾ ಮೈಮರೆತುಬಿಡುತ್ತಿದ್ದಳು. ಆಗಾಗ ಒಡತಿಯ ತಾಂಬೂಲಕ್ಕೆ ಸುಣ್ಣ ಹಚ್ಚುವುದನ್ನೇ ಮರೆತುಬಿಡುತ್ತಿದ್ದಳು. ಮತ್ತೆ ಕೆಲವೊಮ್ಮೆ ಒಡತಿ ಪುಸ್ತಕವನ್ನು ಕೇಳಿದರೆ ಅದಕ್ಕೆ ಬದಲಾಗಿ ನೀರಿನ ಗಿಂಡಿಯನ್ನು ತಂದು ನಾಚಿಕೆಪಟ್ಟುಕೊಳ್ಳುತ್ತಿದ್ದಳು. ಇಷ್ಟಾದರೂ ಆಕೆಗೆ ನಡುಮನೆಯಿಂದ ಆ ಜಗಲಿಯ ಕಡೆಗೆ ನೋಡದೇ ಇರಲಾಗುತ್ತಿರಲಿಲ್ಲ.

**ಅಭಿನಂದನೆ...**

ಲಲಿತಕಲಾ ಅಕಾಡೆಮಿಯು ಕೊಡಮಾಡುವ 'ಜೀವಮಾನ ಸಾಧನೆ ಪ್ರಶಸ್ತಿ'ಯು ಖ್ಯಾತ ವ್ಯಂಗ್ಯಚಿತ್ರಕಾರರಾದ ಬಿ. ಜಿ. ಗುಜ್ಜಾರಪ್ಪ ಅವರಿಗೆ ಲಭಿಸಿದೆ. ಕಲಾವಿದರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ಇಂದು ಚಿಕ್ಕ ಉದ್ಯಾನ ಬಹಳ ಚೆನ್ನಾಗಿ ಸಿಂಗಾರಗೊಂಡಿದೆ. ದಾಸಿಯರು ವಾದ್ಯ ನುಡಿಸುತ್ತಿದ್ದಾರೆ. ಸೌಸನ್ ಅತ್ಯಂತ ಸಂಕೋಚ ಗೊಂಡು ರಾಮಪ್ರಸಾದ್‌ನ ಎದುರು ಕುಳಿತಿದ್ದಾಳೆ. ಸರದಾರ ಆಕೆಗೆ ಹಾಡಲು ಅಪ್ಪಣೆ ನೀಡಿದ. ಆಕೆ ಹಾಡು ಪ್ರಾರಂಭಿಸಿದಳು.

*ಹೇಳು ಸಖೀ ; ಏನಾಗುವುದೋ ಆಗಿಹೋಗಲಿ ...*
*ನನ್ನೀ ವಿರಹವನು ತಿಳಿದಾತನೇ ಪ್ರಿಯತಮ*
*ಇಷ್ಟೊಂದು ಕಠಿಣನಾದನೇಕೆ ನನ್ನ ಪ್ರಿಯಕರ...*
*ಪ್ರೀತಿಯನೆಂತು ನಿವೇದಿಸಲಿ ಈ ದುಃಖದಲಿ*
*'ಸೂರದಾಸ'ನೊಲಿದಾಗಲೇ ಸುಖ ನನಗೆ,*
*ವ್ಯಥೆ ಕರಗಿ ಸಖೀ.*

ಆ ಸುಂದರಿಯ ಕೋಮಲ ಕಂಠದಿಂದ ಹೊರಡುತ್ತಿದ್ದ ಒಂದೊಂದು ಪದವೂ ಸಹ ಕೇಳುವವರನ್ನು ಹಾಗೂ ಸಂಗೀತದವರನ್ನು ಮಂತ್ರಮುಗ್ಧರನ್ನಾಗಿಸಿಬಿಟ್ಟಿದ್ದವು. ಎಲ್ಲರೂ ಬಿಡಿಸಿದ ಚಿತ್ರದಂತೆ ಸ್ತಬ್ಧರಾಗಿ ಕುಳಿತುಬಿಟ್ಟಿದ್ದರು. ರಾಮಪ್ರಸಾದ್‌ನಂತೂ ವಿಚಿತ್ರಸ್ಥಿತಿಗೆ ತಲುಪಿಬಿಟ್ಟಿದ್ದ. ಸೌಸನ್‌ಳನ್ನು ನೋಡಿದಾಗ ವ್ಯಕ್ತವಾಗುತ್ತಿದ್ದ ಅವಳ ಸ್ವಾಭಾವಿಕ ನೋಟ, ಭಾವ–ಭಂಗಿ... ಎಲ್ಲವೂ ಅವನನ್ನು ಮುಗ್ಧಗೊಳಿಸಿಬಿಟ್ಟಿದ್ದವು.

ರಾಮಪ್ರಸಾದ್ ಕೂಡ ಗಾಯಕನಾಗಿದ್ದ. ಆದರೆ ಸ್ತ್ರೀಸಹಜವಾದ ಬಳುಕುವ ಹುಬ್ಬು ಭಾವ–ಭಂಗಿ ಅವನಲ್ಲಿರಲಿಲ್ಲ. ಅವನ ಅಂತರಾತ್ಮ ಮೆಲ್ಲನೆ ಉಸುರಿದಂತಾಯಿತು – "ಈಗ ನೀನು ನಿನ್ನ ಸರ್ವಸ್ವವನ್ನೂ ಸೋತುಬಿಟ್ಟಿದ್ದೀಯೆ."

ಸರದಾರ ನುಡಿದ : "ರಾಮಪ್ರಸಾದ್, ನೀನು ಕೂಡ ಹಾಡು."

ಹಾಡುವ ಮನಸ್ಸಿಲ್ಲದಿದ್ದರೂ ಅವನೂ ಕೂಡ ಅನಿವಾರ್ಯ ಆಕರ್ಷಣೆಗೆ ಒಳಗಾದವನಂತೆ ಹಾಡಲು ಪ್ರಾರಂಭಿಸಿದ :

*...ನಾನೇನು ಹೇಳಲಿ ಸಖೀ;*
*ನನ್ನೀ ಹೃದಯವನು ಜಯಿಸಿದೆ ಆ ಭ್ರಮರ,*
*ಅದೇ ಆಸೆಯಲ್ಲಿ ಸೊರಗಿದೆ ಮನ,*
*ಕಣ್ಣೀರು ಧಾರೆ ಸರಿದಂತೆ... ದಿನ ... ಸಮಯ*
*ಅರ್ಥವಾಗಿದೆ... ಎಮಗೆ, ತನು ಜರ್ಜರಿತ...*
*ಪ್ರೀತಿಯ ನಿರೀಕ್ಷೆಯಲಿ...*
*'ಸೂರಸ್ವಾಮ'ನೊಂದಿಗೆ ಒಂದಾದರೆ ಮನ...*
*ಮತ್ತೇನಿಲ್ಲ ಅಪೇಕ್ಷೆ.*

ಹಾಡಿನ ಭಾವವನ್ನು ಅರ್ಥೈಸಿಕೊಂಡ ಸೌಸನ್‌ನ ಮುಖಭಾವ ಕೆಂಪಾಗತೊಡಗಿತು. ರಾಮಪ್ರಸಾದ್ ಕರುಣಭಾವ ತುಂಬಿ ಈ ಹಾಡನ್ನು ಹಾಡಿದಾಗ ಇಬ್ಬರೂ ಭಾವಪರವಶರಾದರು.

ಸರದಾರ ನೋಡಿದ. ಗೆಲುವು ತನ್ನದಾಯಿ ತೆಂದುಕೊಂಡು ಹೇಳಿದ: "ರಾಮಪ್ರಸಾದ್, ನಿನಗೇನು ಆಸೆ ಇದೆಯೋ... ಕೇಳಿಕೊ..."

ಇದನ್ನು ಕೇಳಿಸಿಕೊಂಡ ಸರದಾರಿಣಿ ತನ್ನ ಒಬ್ಬ ದಾಸಿಯನ್ನು ಕಳುಹಿಸಿದಳು. ಆ ದಾಸಿ ಸೌಸನ್‌ಳ ಬಳಿ ಬಂದು ಹೇಳಿದಳು... "ಬೇಗಮ್‌ರ ಅಪ್ಪಣೆಯಾಗಿದೆ ನಿನಗೆ ಬೇಕಾದ್ದನ್ನು ಕೇಳಿಕೋ..."

ರಾಮಪ್ರಸಾದ್ ಏನನ್ನೂ ಹೇಳದೆ ಸ್ವಲ್ಪ ಹೊತ್ತು ಮೌನವಾಗಿಯೇ ಇದ್ದ. ಪುನಃ ಸರದಾರರು ಏನನ್ನಾದರೂ ಕೇಳುವಂತೆ ಎಚ್ಚರಿಸಿದಾಗ ಆತನ ಮುಖ ಅಸ್ವಾಭಾವಿಕ ರೂಪದಲ್ಲಿ ಕಳೆಗುಂದಿತು. ವಿಚಲಿತನಂತಾದ ಆತ ವಿಕ್ಷಿಪ್ತ ಸ್ವರದಲ್ಲಿ ಹೇಳಿದ... "ಒಂದು ವೇಳೆ ತಾವು ತಮ್ಮ ಮಾತಿಗೆ ದೃಢರಾಗಿರುವಿರಿ ಎಂದಾದರೆ... ಸೌಸನ್‌ಳನ್ನು ನನಗೆ ಒಪ್ಪಿಸಿ ಬಿಡಿ..."

ಅದೇ ಸಮಯಕ್ಕೆ ಸೌಸನ್ ಕೂಡ ಆ ದಾಸಿಗೆ ಹೇಳಿದಳು... "ಬೇಗಮ್‌ರವರು ನನಗೇನಾದರೂ ನೀಡಬಯಸಿದ್ದಲ್ಲಿ ನನ್ನನ್ನು ಈ ದಾಸಿ ಸ್ಥಾನದಿಂದ ಮುಕ್ತಗೊಳಿಸಲಿ..."

ದಾಸಿ ಒಳಗೆ ನಡೆದಳು. ಸರದಾರ ಮೌನವಾಗಿ ಬಿಟ್ಟ. ದಾಸಿ ಹಿಂತಿರುಗಿ ಬಂದು ಹೇಳಿದಳು. "ಬೇಗಮ್‌ರವರು ನಿನ್ನ ಪ್ರಾರ್ಥನೆಯನ್ನು ಸ್ವೀಕರಿಸಿ ಈ ಹಾರವನ್ನು ನೀಡಿದ್ದಾರೆ." ಇಷ್ಟು ಹೇಳಿದ ದಾಸಿ ಆ ಹಾರವನ್ನು ಸೌಸನ್‌ಳ ಕೊರಳಿಗೆ ತೊಡಿಸಿದಳು.

ಸರದಾರ ಹೇಳಿದ : "ರಾಮಪ್ರಸಾದ್, ಇಂದಿನಿಂದ ನೀನು "ತಾನ್‌ಸೇನ್" ಆಗಿಬಿಟ್ಟೆ. ಮತ್ತೆ ಸೌಸನ್ ಕೂಡ ನಿನ್ನವಳಾದಳು." ಆದರೆ ಧರ್ಮಕ್ಕನುಸಾರವಾಗಿ ನೀನು ಅವಳೊಂದಿಗೆ ವಿವಾಹ ಮಾಡಿಕೊಳ್ಳಬೇಕು.

ತಾನ್‌ಸೇನ್ ಹೇಳಿದ...

"ಇಂದಿನಿಂದ 'ಪ್ರೇಮ'ವೇ ನಮ್ಮ ಧರ್ಮ."

**ಡಾ॥ ಎಚ್. ಎಂ. ಕುಮಾರಸ್ವಾಮಿ**
ನಂ. ೧೧೦, 'ಸಂಬನಾ', ಕ್ರೈಸ್ಟ್ ಪಬ್ಲಿಕ್ ಸ್ಕೂಲ್ ಎದುರು
ದೇವಿಪ್ರಸಾದ್ ಬಡಾವಣೆ, (ರಾಜರಾಜೇಶ್ವರಿನಗರ)
ಮೈಸೂರು – ೫೭೦ ೦೨೨

ತಿಳಿವು

# ಸಹಜೀವಿಗಳ ಸಂಕಟಕ್ಕೆ ಸ್ಪಂದಿಸುವ ನಿಲುವು ನಮ್ಮದಾಗಲಿ...

ವರ್ತಮಾನ ಹಿಂದೆಂದಿಗಿಂತಲೂ ಹತಾಶೆಯಿಂದ ನಿಟ್ಟುಸಿರಿಡುತ್ತಿದೆ. ಮಾನವೀಯತೆಯೆಲ್ಲ ಮರೀಚಿಕೆಯಾಗುತ್ತಿದೆ. ಜೀವಪ್ರೀತಿಯ ಸೆಲೆ ಬತ್ತಿ ಎಲ್ಲವೂ ವಾಣಿಜ್ಯೀಕರಣದ ಇಕ್ಕಳದಲ್ಲಿ ಸಿಲುಕಿಕೊಳ್ಳುತ್ತಿದೆ. ಜೀವಪ್ರೀತಿಯ ಸಂವೇದನೆಗಳನ್ನೆಲ್ಲ ಮಾರುಕಟ್ಟೆಯ ಮಾಲುಗಳನ್ನಾಗಿ ಪರಿವರ್ತಿಸಿಕೊಳ್ಳುವ, ಎಲ್ಲವನ್ನೂ ಲಾಭದ ತಕ್ಕಡಿಯಲ್ಲಿಟ್ಟು ತೂಗುವ ಉಳ್ಳವರ ಹುನ್ನಾರಗಳು ತೀವ್ರ ಗತಿಯನ್ನು ಪಡೆಯುತ್ತಿವೆ. ಬುದ್ಧಿವಂತರೆನಿಸಿಕೊಂಡ ಜನರು ತಮ್ಮ ಅಗಾಧ ಪ್ರತಿಭೆ, ಸಾಮರ್ಥ್ಯಗಳನ್ನೇ ಬಂಡವಾಳವಾಗಿರಿಸಿಕೊಂಡು, ಎಲ್ಲ ಸೌಲಭ್ಯಗಳನ್ನು ತಾವೇ ಬಾಚಿಕೊಂಡು ಸಮಾಜ ಮುಖಿಯಾಗುವ ಧಾವಂತ ತೋರುವ ಮುಖವಾಡ ಧರಿಸಿಕೊಂಡ ಜನಸಾಮಾನ್ಯರನ್ನು ಶೋಷಿಸುವ ಪ್ರಕರಣಗಳು ಮತ್ತೆ ಮತ್ತೆ ಅನಾವರಣಗೊಳ್ಳುತ್ತಿವೆ. ಮಾಹಿತಿ ತಂತ್ರಜ್ಞಾನ ಮತ್ತು ಜಾಗತೀಕರಣದ ಪ್ರಭಾವದಿಂದ ಜಾತಿ, ಮತ, ಪಂಥ, ಗಡಿಗಳ ಎಲ್ಲೆಗಳನ್ನು ಮೀರಿ ಎಲ್ಲೆಡೆಯೂ ವೈಯಕ್ತಿಕ ಸ್ವಾರ್ಥವೇ ವಿಜೃಂಭಿಸುತ್ತಿದೆ. ವೈಯಕ್ತಿಕ ಮೌಲ್ಯಗಳ ಭ್ರಾಮಕತೆಯ ಬಿರುಗಾಳಿಯ ರಭಸಕ್ಕೆ ಸಾಮಾಜಿಕ ಮೌಲ್ಯಗಳು ಬೇರೆ ದಾರಿಕಾಣದೆ ನೇಪಥ್ಯಕ್ಕೆ ಜಾರುತ್ತಿವೆ. ಸಿರಿಗರ ಹೊಡೆದವರ ಆರ್ಭಟಕ್ಕೆ ಹಸಿವಿನಿಂದ ಕಂಗೆಟ್ಟ ಒಡಲುಗಳು, ರೋಗಗ್ರಸ್ತ ಜೀವಗಳು ಇನ್ನಷ್ಟು ಘಾಸಿಗೊಳ್ಳುತ್ತಲಿವೆ. ಬದುಕಿಗೆ ಆಧಾರವಾಗಿರುವ ಶಿಕ್ಷಣವೇ ಬಡವ ಬಲ್ಲಿದರ ನಡುವೆ ಅಗಾಧವಾದ ಕಂದಕವನ್ನು ಸೃಜಿಸುತ್ತಿದೆ. ನಿಜಕ್ಕೂ ಇದೊಂದು ಅಪಾಯಕಾರಿ ಬೆಳವಣಿಗೆ. ಇತ್ತೀಚೆಗೆ ವೈದ್ಯೋ ನಾರಾಯಣ ಹರಿ ಎಂಬ ಪಾರಂಪರಿಕ ನಂಬಿಕೆ ನೆರಳಿನಲ್ಲಿ ಬದುಕುತ್ತಿರುವ ನಮ್ಮ ದೇಶವೂ ಸೇರಿದಂತೆ ಜಗತ್ತಿನ ವೈದ್ಯಕೀಯ ಲೋಕದಲ್ಲಿನ ಅಮಾನವೀಯ ಬೆಳವಣಿಗೆಗಳು ಇದನ್ನು ಇನ್ನಷ್ಟು ಸಾಕ್ಷೀಕರಿಸುತ್ತಲಿವೆ. ಆರೋಗ್ಯ ಸೇವೆಯನ್ನು ಕೂಡ ವ್ಯಾಪಾರವನ್ನಾಗಿ ಪರಿಗಣಿಸಿದ ವೈದ್ಯಲೋಕ, ಚಿಕಿತ್ಸೆಗಾಗಿ ಹಣ ಹೊಂದಿಸುವ ಹರಸಾಹಸದಲ್ಲಿಯೇ ಸೋಲುತ್ತಿರುವ ಅಸಂಖ್ಯ ಕುಟುಂಬಗಳನ್ನು ಮತ್ತೆ ಮತ್ತೆ ಸಾಲದ ಸುಳಿಯಲ್ಲಿ ಸಿಲುಕುವಂತೆ ಮಾಡಿ ಸಾಲದ ಚಕ್ರವ್ಯೂಹದಲ್ಲಿಯೇ ಬಂಧಿತರಾಗುವಂತೆ ಮಾಡುವ, ಬಡವರು ತಮ್ಮ ಬದುಕಿನ ಬಗ್ಗೆಯೇ ಬೇಸರಗೊಂಡು ಜಿಗುಪ್ಸೆ ತಾಳಿ ಆತ್ಮಹತ್ಯೆಯಂತಹ ಹೀನಕೃತ್ಯಕ್ಕೆ ಕೈ ಹಾಕುವಂತೆ ಪ್ರೇರೇಪಿಸುವ ಅಮಾನವೀಯ ಸಂಗತಿಗಳು ಬೆಳವಣಿಗೆ ಕಂಡುಬರುತ್ತಿರುವುದು ದುರದೃಷ್ಟಕರ ಎನ್ನದೇ ವಿಧಿಯಿಲ್ಲ.

ಬದಲಾಗುತ್ತಿರುವ ಜೀವನ ಶೈಲಿ, ಆಹಾರ ಪದ್ಧತಿ, ಒತ್ತಡದ ಬದುಕು, ಎಲ್ಲವನ್ನೂ ಹಣದ ಮಾನದಂಡದಲ್ಲಿಯೇ ಬಾಚಿಕೊಳ್ಳುವ ಹುಚ್ಚು ಪ್ರವೃತ್ತಿಯ ಮಾನಸಿಕ ಧೋರಣೆಗಳಿಂದಾಗಿ ಬದುಕಿನ ಬಂಡಿ ಹಳಿ ತಪ್ಪುತ್ತಿದೆ. ವೈಯಕ್ತಿಕ ಜೀವನವನ್ನು ವೈಭವೀಕರಿಸಿಕೊಳ್ಳುವ, ಪಾಶ್ಚಿಮಾತ್ಯ ನಿಲುವುಗಳನ್ನು ಆರಾಧಿಸುವ ಧಾವಂತದಲ್ಲಿ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಹದಗೆಡಿಸಿಕೊಳ್ಳುತ್ತಿದ್ದೇವೆ. ಇದರಿಂದಾಗಿ ಅನೇಕ ಕಾಯಿಲೆಗಳು ನಮ್ಮನ್ನು ಗಟ್ಟಿಯಾಗಿ ಹಿಡಿದಿಟ್ಟುಕೊಳ್ಳುತ್ತಿವೆ. ಅದರಲ್ಲೂ ಹೃದಯ ಸಂಬಂಧಿ ಕಾಯಿಲೆಗಳು ದಿನದಿಂದ ದಿನಕ್ಕೆ ಹೆಚ್ಚು ಸಾಮಾನ್ಯವೆನಿಸತೊಡಗಿವೆ. ರಕ್ತದಲ್ಲಿ ಕೊಲೆಸ್ಟರಾಲ್ ಜಾಸ್ತಿಯಾಗುತ್ತಿದೆ. ಹೃದಯದ ಸ್ನಾಯುಗಳಲ್ಲಿ ಅದು ಗರಣೆಗಟ್ಟಿದಾಗ ಹೃದಯಕ್ಕೆ ರಕ್ತದ ಸರಬರಾಜಿನಲ್ಲಿ ವ್ಯತ್ಯಯವುಂಟಾಗಿ ಹೃದಯ ಬಡಿತದ ತಾಳ ತಪ್ಪುತ್ತದೆ. ಸುಸ್ತು ಉಂಟಾಗುತ್ತದೆ. ಕಣ್ಣು ಮಂಜಾಗುತ್ತದೆ. ಇದು ಹೃದಯಸ್ತಂಭನಕ್ಕೆ ಕಾರಣವಾಗಿಬಿಡುತ್ತದೆ. ನೇರವಾಗಿ ಕ್ಷಣಮಾತ್ರದಲ್ಲಿ ಸಾವಿನ ಮನೆಗೆ ಕರೆದೊಯ್ಯುವ ಇಂತಹ ಭಯಾನಕ ರೋಗದ ಚಿಕಿತ್ಸೆಗೆ ಇತ್ತೀಚಿನ ಸಂಶೋಧನೆ ಸ್ಟೆಂಟ್ ಅತ್ಯಂತ ಪರಿಣಾಮಕಾರಿ ಮತ್ತು ಸುಲಭ ಚಿಕಿತ್ಸೆಯಾಗಿರುವುದು ಬಹುದೊಡ್ಡ ಸಂತಸದ ಸಂಗತಿಯಾದರೂ, ಅದು ವಾಣಿಜ್ಯೀಕರಣದ ಇಕ್ಕಳದಲ್ಲಿ ಸಿಲುಕಿಕೊಂಡಿರುವುದು ವಿಪರ್ಯಾಸವೇ ಸರಿ. ರಾಷ್ಟ್ರೀಯ ಆರೋಗ್ಯ ಪದ್ಧತಿಗಳ ಸಂಪನ್ಮೂಲ ಕೇಂದ್ರದ ವರದಿಯಂತೆ ಶೇ. ೬೦ರಷ್ಟು ಸ್ಟೆಂಟ್‌ಗಳ ಪೂರೈಕೆ ಒಂಬತ್ತು ಪ್ರಮುಖ ಕಂಪನಿಗಳ ನಿಯಂತ್ರಣದಲ್ಲಿದೆ. ಇವು ವಿದೇಶದಿಂದ ಆಮದು ಮಾಡಿಕೊಂಡ ಬೆಲೆಗೆ ಹೋಲಿಸಿದರೆ ವಿತರಕರಿಗೆ ಶೇ. ೬೮ರಿಂದ ಶೇ. ೧೪೦ರಷ್ಟು ಹೆಚ್ಚು ಬೆಲೆಗೆ ಮಾರಾಟ ಮಾಡುತ್ತಿದ್ದಾರೆ. ವಿತರಕರು ತಾವು ಖರೀದಿಸುವ ಬೆಲೆಯ ಶೇ. ೭೦ರಿಂದ ಶೇ. ೪೦೦ರಷ್ಟು ಲಾಭದಲ್ಲಿ ಚಿಲ್ಲರೆ ಮಾರಾಟಗಾರರಿಗೆ ಮಾರುತ್ತಿದ್ದಾರೆ ಎಂಬ ಅಂಕಿ ಅಂಶಗಳನ್ನು ಬಹಿರಂಗಗೊಳಿಸಿವೆ. ಆಮದು ಮತ್ತು ಮಾರಾಟದ ದರಗಳಲ್ಲಿ ಶೇ. ೨೯೪ರಿಂದ ಶೇ. ೭೦೦ರಷ್ಟು ವ್ಯತ್ಯಾಸವಿರುವುದು ನಗ್ನಸತ್ಯವಾಗಿದೆ. ಅಸಹಾಯಕ ರೋಗಿಗಳನ್ನು ಇನ್ನಷ್ಟು ಗೋಳು ಹೊಯ್ದುಕೊಳ್ಳಲು, ಅವರನ್ನು ವಂಚಿಸುವ ಕರಾಳ ಹಸ್ತದ ಭೀಕರತೆಗೆ ಮತ್ತ್ಯಾವ ಸಾಕ್ಷಿ ಬೇಕಿಲ್ಲ.

೨೦೧೫ರಲ್ಲಿ ಕೇಂದ್ರ ಆರೋಗ್ಯ ಸಚಿವಾಲಯ ಸಂಗ್ರಹಿಸಿದ್ದ ಮಾಹಿತಿಯಂತೆ ನಮ್ಮ ದೇಶದಲ್ಲಿ ಸುಮಾರು ೬.೧೯ ಕೋಟಿ ಜನ ಹೃದಯ ಸಂಬಂಧಿ ಕಾಯಿಲೆಗಳಿಂದ ಬಳಲುತ್ತಿದ್ದಾರೆ. ೨೦೧೪ರಲ್ಲಿ ಸುಮಾರು ೪ ಲಕ್ಷ ಜನ ಹೃದಯ ಚಿಕಿತ್ಸೆಗೆ ಒಳಗಾಗಿದ್ದಾರೆ. ಮುಂದಿನ ದಿನಗಳಲ್ಲಿ ಈ ಸಂಖ್ಯೆ ೫ ಲಕ್ಷ ತಲುಪುವ ಸಾಧ್ಯತೆಯಿದೆ ಎಂದು ಹೇಳಿದೆ. ಇಂತಹ ಸಂಕ್ರಮಣ ಸ್ಥಿತಿಯಲ್ಲಿ ನಮ್ಮ ದೇಶದಲ್ಲಿ ಸ್ಟೆಂಟ್‌ಗಳನ್ನು ತುಂಬ ದುಬಾರಿ ಬೆಲೆಗೆ ಮಾರುವ ಮಾಫಿಯಾ ಹುಟ್ಟಿಕೊಂಡಿರುವುದು ನಿಜಕ್ಕೂ ದುರಂತವೇ ಸರಿ. ಇವೆಲ್ಲ ಬೆಳವಣಿಗೆಗಳನ್ನು ಗಮನಿಸಿದ ಕೇಂದ್ರ ಸರ್ಕಾರ ಇವುಗಳ ಮೇಲೆ ನಿಯಂತ್ರಣ ಸಾಧಿಸಲು ಸ್ಟೆಂಟ್‌ಗಳನ್ನು ಬೆಲೆ ನಿಯಂತ್ರಣದ ವ್ಯಾಪ್ತಿಗೆ ಒಳಪಡಿಸಿದೆ. ಬೇರ್ ಮೆಟಲ್ ಸ್ಟೆಂಟ್‌ನ ಗರಿಷ್ಠ ಬೆಲೆಯನ್ನು ೭,೬೨೩ ರೂ.ಗಳಿಗೆ ಮತ್ತು ಔಷಧ ಪಸರಿಸುವ ಸಾಮರ್ಥ್ಯದ ಡ್ರಗ್‌ಎಲ್ಯೂಟಿಂಗ್ ಸ್ಟೆಂಟ್ ಗರಿಷ್ಠ ಮಾರಾಟ ಬೆಲೆಯನ್ನು ೩೧,೦೮೦ ರೂ.ಗಳಿಗೆ ಮಿತಿಗೊಳಿಸಿ ಆದೇಶ ಹೊರಡಿಸಿದೆ. ಹೆಚ್ಚು ದರ ವಸೂಲಿ ಮಾಡುವ ಆಸ್ಪತ್ರೆಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹಾಕುವುದಾಗಿ ಎಚ್ಚರಿಕೆ ನೀಡಿರುವುದು ಸಕಾಲಿಕವಾಗಿದೆ. ಕೇಂದ್ರ ಸರ್ಕಾರದ ಇಂತಹ ಕ್ರಮ ನಿಜಕ್ಕೂ ಅಭಿನಂದನೀಯ. ಆದರೆ ಸರ್ಕಾರ ಚಾಪೆಯ ಕೆಳಗೆ ತೂರಿದರೆ ತಯಾರಕರು, ವಿತರಕರು ರಂಗೋಲಿ ಕೆಳಗೆ ತೂರುವುದಕ್ಕೆ ಪ್ರಯತ್ನಿಸುತ್ತಿರುವುದು ಮಾತ್ರ ವಿಷಾದನೀಯ. ಹೊಸ ದರದಲ್ಲಿ ತಮಗೆ ಪೂರೈಸಲು ಸಾಧ್ಯವಿಲ್ಲ ಎಂಬ ರಗಳೆ ಹಾಡುತ್ತಿರುವುದು, ಸ್ಟಾಕ್ ಇಲ್ಲ ಎಂಬ ತಕರಾರು ತೆಗೆಯುತ್ತಿರುವುದು ಸರ್ಕಾರದ ಕ್ರಮವನ್ನು ವಿಫಲಗೊಳಿಸುವ ಸಂಚು ರೂಪಿಸುತ್ತಿರುವುದು ಅಕ್ಷಮ್ಯವಾಗಿದೆ. ಸರ್ಕಾರ ಇಂತಹ ಹುನ್ನಾರಗಳನ್ನು ವಿಫಲಗೊಳಿಸುವತ್ತ ಮತ್ತಷ್ಟು ವಿವೇಚನಾಯುಕ್ತ ಕ್ರಮಗಳನ್ನು ರೂಪಿಸಬೇಕಿದೆ. ವಿಧಿಯಿಲ್ಲದೇ ವೈದ್ಯಲೋಕದ ಮಾಫಿಯಾ ವಿರುದ್ಧ ನಿರ್ದಾಕ್ಷಿಣ್ಯ ಕ್ರಮಗಳನ್ನು ಕೈಗೊಳ್ಳಬೇಕಿದೆ. ವೈದ್ಯಲೋಕ ಕೂಡ ಆರೋಗ್ಯ ಸೇವೆಯನ್ನು ಅಗತ್ಯ ಸೇವೆ ಎಂಬ ಹೃದಯವೈಶಾಲ್ಯತೆಯನ್ನು ತೋರಬೇಕಿದೆ. ವಿತರಕರು, ತಯಾರಕರು, ಮಾರಾಟಗಾರರು ಲಾಭವಿಲ್ಲದೆ ಉದ್ಯೋಗ ಮಾಡಲಾಗದು ಎಂಬ ಸತ್ಯದ ನಡುವೆಯೂ ಮಾನವೀಯತೆಯನ್ನು ತೋರಬೇಕಿರುವುದು ಇಂದಿನ ಬಹುದೊಡ್ಡ ಅಗತ್ಯವಾಗಿದೆ. ಇವರೆಲ್ಲ ಅಗತ್ಯವಿರುವಷ್ಟು ಮಾತ್ರವೇ ಲಾಭ ಪಡೆಯುವತ್ತ ಗಮನ ಹರಿಸಿದರೆ ಸಾಕಷ್ಟು ಜೀವಹಾನಿಯನ್ನು ತಡೆಯಬಹುದು. ಜನಸಾಮಾನ್ಯರೂ ಕೂಡ ತಮ್ಮ ಜೀವನ ಶೈಲಿಗಳಲ್ಲಿ, ಆಹಾರ ಪದ್ಧತಿಗಳಲ್ಲಿ ಸಾಕಷ್ಟು ಬದಲಾವಣೆ ಮಾಡಿಕೊಳ್ಳಬೇಕಿದೆ. ರೋಗಕ್ಕೆ ಒಳಗಾಗಿ ಚಿಕಿತ್ಸೆಗೆ ಪರದಾಡುವ ಮುನ್ನ ಅವುಗಳು ಬಾರದಂತೆ ಮುಂಜಾಗ್ರತೆ ವಹಿಸುವತ್ತ ಗಂಭೀರವಾಗಿ ಯೋಚಿಸಬೇಕಿದೆ. ಎಲ್ಲದಕ್ಕಿಂತ ಮಿಗಿಲಾಗಿ ನಮ್ಮ ನೆಲದ ಸಂಸ್ಕೃತಿ, ಆಹಾರ ಪದ್ಧತಿ, ಆಚಾರ ವಿಚಾರಗಳನ್ನು ನಿರ್ಲಕ್ಷಿಸಿ ಆಧುನಿಕತೆಯ ನೆಪದಲ್ಲಿ ಪಾಶ್ಚಿಮಾತ್ಯದ ಆಚಾರ ವಿಚಾರಗಳು, ಅಲ್ಲಿನ ಎಲ್ಲವೂ ಪರಮ ಪವಿತ್ರ ಎನ್ನುವ ನಂಬಿಕೆಯನ್ನು ದೂರ ಸರಿಸುವ ಮನೋಭಾವ ಬದಲಾಗಬೇಕಿದೆ. ಎಲ್ಲವನ್ನೂ ವಿಮರ್ಶೆಗೆ ಒಳಪಡಿಸಿ ನಮಗೆ ಉತ್ತಮವೆನಿಸುವ ಅಂಶಗಳನ್ನು ಪರಿಗಣಿಸಿ ಬದುಕನ್ನು ಕಟ್ಟಿಕೊಳ್ಳಬೇಕಿದೆ. ಎಲ್ಲದಕ್ಕಿಂತ ಮಿಗಿಲಾಗಿ 'ಸರ್ವೇ ಜನಾ ಸುಖಿನೋಭವಂತು' ಎಂಬ ಮಾನವೀಯತೆಯೇ ನಮ್ಮೆಲ್ಲರ ಮೊದಲ ಆದ್ಯತೆಯಾಗಬೇಕಿದೆ. ಸುತ್ತಣ ಜಗತ್ತಿನ ಕಷ್ಟ–ಕಾರ್ಪಣ್ಯಗಳಿಗೆ ಸ್ಪಂದಿಸುವ ಸೇವೆಯನ್ನು ನೀಡುವತ್ತ ಹೆಜ್ಜೆಯಿರಿಸಬೇಕಿದೆ. ಮಾನವಪ್ರೇಮವನ್ನು ವಿಸ್ತರಿಸುತ್ತ ಸಹಜೀವಿಗಳ ಸೇವೆಯಲ್ಲಿ ತೊಡಗಿಸಿಕೊಳ್ಳುವ ಹೊಸ ಎಚ್ಚರಕ್ಕೆ ನಮ್ಮನ್ನು ನಾವು ತೆರೆದುಕೊಳ್ಳಬೇಕಿದೆ.

**ಮಹಾದೇವ ಬಸರಕೋಡ**
'ಮುಂಜಾವು', ಲಕ್ಷ್ಮೀ ನಗರ, ಅಮೀನಗಡ – ೫೮೭ ೧೧೨
ಹುನಗುಂದ ತಾಲೂಕು, ಬಾಗಲಕೋಟ ಜಿಲ್ಲೆ









**ಶ್ರೀ ಸಿದ್ದರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು

ಕೃಷಿ ಆಧಾರಿತ ಗ್ರಾಮೀಣ ಬದುಕಿನ ಬಲವರ್ಧನೆಗೆ ಪಶುಸಂಗೋಪನೆಯ ಕೊಡುಗೆ ಅಮೂಲ್ಯ. ಹಸು, ಎತ್ತು, ಎಮ್ಮೆ, ಕುರಿ, ಮೇಕೆ, ಹಂದಿ ಮತ್ತು ಕೋಳಿ ಸಾಕಾಣಿಕೆಗೆ ಉತ್ತೇಜನ ನೀಡಲು ಸರ್ಕಾರವು ನೂತನವಾಗಿ "ಪಶುಭಾಗ್ಯ" ಯೋಜನೆ ಜಾರಿಗೊಳಿಸಿದೆ.











ಪಶುಭಾಗ್ಯ ಯೋಜನೆಯಡಿ ಫಲಾನುಭವಿಯೊಂದಿಗೆ ಮಾನ್ಯ ಪಶುಸಂಗೋಪನಾ ಸಚಿವರಾದ **ಶ್ರೀ ಎ. ಮಂಜು** ಅವರು

## ಯೋಜನೆಯ ಪ್ರಮುಖ ಅಂಶಗಳು

- ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ವಾಣಿಜ್ಯ ಬ್ಯಾಂಕ್‌ಗಳಿಂದ ರೂ. 1.20 ಲಕ್ಷ ಸಾಲ ಸೌಲಭ್ಯ.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಶೇ.50ರಷ್ಟು ಹಾಗೂ ಇತರರಿಗೆ ಶೇ. 25ರಷ್ಟು ಸಹಾಯಧನ.
- 3 ಕುರಿ / ಮೇಕೆ ಘಟಕ ಶೇ. 75 ರಷ್ಟು ಸಹಾಯಧನ.
  100 + 1 ಕುರಿ/ಮೇಕೆ ಘಟಕ ಶೇ. 25ರಷ್ಟು ಸಹಾಯಧನ.

| ಘಟಕ ವೆಚ್ಚ | |
|---|---|
| 2 ಹಸು, ಎಮ್ಮೆ ಹೈನುಗಾರಿಕೆ ಘಟಕ | ರೂ. 1,20,000/– |
| 10+1 ಕುರಿ/ಮೇಕೆ ಘಟಕ | ರೂ. 67,440/– |
| 3 ಕುರಿ/ಮೇಕೆ ಘಟಕ | ರೂ. 10,000/– |
| 3+1 ಹಂದಿ ಘಟಕ | ರೂ. 94,000/– |
| 10 ಹಂದಿ ಮರಿಗಳ ಪುಷ್ಟಿಗೊಳಿಸುವ ಘಟಕ | ರೂ. 99,350/– |
| ಕುಕ್ಕುಟ ಘಟಕ | |
| 500 ಮಾಂಸದ ಕೋಳಿ ಘಟಕ | ರೂ. 85,000/– |
| 250 ಮೊಟ್ಟೆ ಕೋಳಿ ಘಟಕ | ರೂ. 1,09,500/– |
| 100+4 ಕುರಿ/ಮೇಕೆ ಘಟಕ | ರೂ. 7,00,000/– |

ಹೈನುಗಾರಿಕೆ ಮತ್ತು ಕುರಿ, ಮೇಕೆ, ಹಂದಿ,
ಕೋಳಿ ಸಾಕಾಣಿಕೆಯಲ್ಲಿ ಒಟ್ಟು 22121 ಫಲಾನುಭವಿಗಳಿಗೆ
ರೂ. 50.35 ಕೋಟಿ ಅನುದಾನ ಒದಗಿಸಿದೆ

ಹೆಚ್ಚಿನ ವಿವರಗಳಿಗೆ
ನಿಮ್ಮ ಹತ್ತಿರದ ಸಹಾಯಕ ನಿರ್ದೇಶಕರ ಕಚೇರಿ,
ತಾಲ್ಲೂಕು ಪಶು ಆಸ್ಪತ್ರೆಗೆ ಭೇಟಿ ನೀಡಿ



ದೇಶದ ಕಾಡು, ವನ್ಯಜೀವಿ, ನದಿ ಸಮೇತ ಪರಿಸರ ಉಳಿಸಿ ಬೆಳೆಸುವುದು
– ಸಂವಿಧಾನ ಬದ್ಧವಾದ ನಮ್ಮ ಮೂಲಭೂತ ಕರ್ತವ್ಯ



ಪ್ರಕಟಣೆ: ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

ಕರ್ನಾಟಕ ವಾರ್ತೆ

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

